# ಮೌಖಿಕ ಮಹಾಕಾವ್ಯಗಳಲ್ಲಿ ಲಿಂಗ ಸಂಬಂಧ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ(ಕನ್ನಡ) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

**ಹೇಮಾವತಿ ಬಿ ಹೆಚ್**

ಮಾರ್ಗದರ್ಶಕರು

**ಪ್ರೊ. ಗಂಗಾಧರ ದೈವಜ್ಞ**

ಪ್ರಾಧ್ಯಾಪಕರು






ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - ೫೮೩ ೨೭೬





೨೦೨೦

# ಮೌಖಿಕ ಮಹಾಕಾವ್ಯಗಳಲ್ಲಿ ಲಿಂಗ ಸಂಬಂಧ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ(ಕನ್ನಡ) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

ಹೇಮಾವತಿ ಬಿ ಹೆಚ್

ಮಾರ್ಗದರ್ಶಕರು

ಪ್ರೊ ಗಂಗಾಧರ ದೈವಜ್ಞ

ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೨೦

## ಸಂಶೋಧಕರ ಪ್ರಮಾಣ ಪತ್ರ

**ಹೇಮಾವತಿ ಬಿ ಹೆಚ್** ಆದ ನಾನು ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ಪ್ರೊ.ಗಂಗಾಧರ ದೈವಜ್ಞ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ **"ಮೌಖಿಕ ಮಹಾಕಾವ್ಯಗಳಲ್ಲಿ ಲಿಂಗ ಸಂಬಂಧ "** ಎಂಬ ಪ್ರಬಂಧವನ್ನು ಪಿಎಚ್ ಡಿ ಪದವಿಗಾಗಿ ಸಿದ್ದಪಡಿಸಿದ್ದೇನೆ. ಈ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಹೇಮಾವತಿ.ಬಿ.ಹೆಚ್

ದಿನಾಂಕ: ೨೭/೧೧/೨೦೨೦

ಸ್ಥಳ : ವಿದ್ಯಾರಣ್ಯ

**ಹೇಮಾವತಿ ಬಿ ಹೆಚ್**

ಪಿಎಚ್ ಡಿ ಸಂಶೋಧಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ಹೇಮಾವತಿ ಬಿ ಹೆಚ್** ಅವರು **"ಮೌಖಿಕ ಮಹಾಕಾವ್ಯಗಳಲ್ಲಿ ಲಿಂಗ ಸಂಬಂಧ"** ಎಂಬ ವಿಷಯದ ಕುರಿತಾದ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:

ಸ್ಥಳ : ವಿದ್ಯಾರಣ್ಯ

**ಪ್ರೊ ಗಂಗಾಧರ ದೈವಜ್ಞ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

**Kannada University, Hampi**
**Akshara Central Library**
**Anti-Plagiarism Cell**
**Certificate of Plagiarism Check Report**

---

# Moukika Mahakavyagalalli Lingha Sambandha

## Gender Relatonship in Oral Epics

By

**Hemavathi B H**

Reg.No. 150112020067 dated: 15.09.2015

Research Guide

**Prof. Gangadhar Daivadnya**

Department of Tribal Studies

Kannada University, Hampi

---

**Urkund Analysis Result**

| | |
|---|---|
| Analyzed document | : Hemavathi B H-PhD-DTS.docx (D84195480) |
| Submitted | : 11/7/2020 8:07:00 AM |
| Submitted by | : Shankaragouda S G |
| Submitter email | : shankargoudas.mailbox@gmail.com |
| **Similarity** | **: 1%** |
| Analysis address | : shankargoudas.mailbox.kanuni@analysis.urkund.com |

Seal and authorized sign

# ಪರಿವಿಡಿ

# ಅಧ್ಯಾಯ : ಒಂದು

## ಪ್ರಸ್ತಾವನೆ

೧.೨. ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

೧.೩. ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೪. ಅಧ್ಯಯನದ ವಿಧಾನ ಮತ್ತು ಸಮೀಕ್ಷೆ

# ಅಧ್ಯಾಯ : ಒಂದು

## ಪ್ರಸ್ತಾವನೆ

ಬಹುತ್ವವು ಈ ದೇಶದ ಸಮಾಜದ ಪ್ರಧಾನ ಚಹರೆಯಾಗಿದೆ. ಹಲವು ಭಾಷೆ, ಸಂಸ್ಕೃತಿ, ಮತ್ತು ವೈವಿಧ್ಯಮಯ ಜೀವನ ವಿಧಾನಗಳು ಭಾರತದ ಹಲವು ವಿಶಿಷ್ಟ ಪರಂಪರೆಗಳನ್ನೇ ಸೃಷ್ಟಿಸಿವೆ. ಈ ವಿಶಿಷ್ಟ ಪರಂಪರೆಗಳು ಜನರ ಲೌಖಿಕದ ಬದುಕನ್ನೇ ಆಧರಿಸಿ ರೂಪುಗೊಂಡಿವೆ. ಈ ಕಾರಣಕ್ಕಾಗಿಯೇ ಸಮಾಜದ ವಿವಿಧ ಸ್ತರಗಳಲ್ಲಿನ ಅಧೀನತೆ ಮತ್ತು ಪ್ರಧಾನತೆಗಳೂ ಈ ಪರಂಪರೆಯಲ್ಲಿ ಢಾಳಾಗಿ ವ್ಯಕ್ತವಾಗುತ್ತಾ ಬಂದಿವೆ. ಈ ಅಧೀನ ಮತ್ತು ಪ್ರಧಾನಗಳ ಶ್ರೇಣೀಕರಣವು ಲೌಖಿಕ ಬದುಕಿನ ವಿನ್ಯಾಸವನ್ನು ಕಾಲದಿಂದ ಕಾಲಕ್ಕೆ ರೂಪಿಸುತ್ತಲೇ ಬಂದಿದೆ. ಮಾತನಾಡುವ ಅಧಿಕಾರ, ಸಂಪತ್ತನ್ನು ಹೊಂದುವ ಅಧಿಕಾರ, ಸಮಾಜದ ಮೇಲಿನ ಅಧಿಕಾರ ಮತ್ತು ಸಾಮಾಜಿಕ ಸಂಬಂಧಗಳನ್ನು ನಿಯಂತ್ರಿಸುವ ಪರಮಾಧಿಕಾರವನ್ನು ಆಳುವ ವರ್ಗ ಆಯಚಿತವಾಗಿ ಗಳಿಸಿಕೊಳ್ಳುತ್ತಾ ಬಂದಿದೆ. ಹಾಗೆಯೇ ಅಧೀನಗೊಂಡ ಸಮಾಜಗಳು ಅಧಿಕಾರರಹಿತ ನೆಲೆಯಲ್ಲೇ ರೂಪುಗೊಳ್ಳುತ್ತ ಬಂದಿವೆ. ವಿದ್ಯೆಯನ್ನು ಕಲಿಯುವ ಮತ್ತು ಅದನ್ನು ಅಧಿಕೃತಗೊಳಿಸುವ ಸ್ವಾತಂತ್ರ್ಯ ಈ ಅಧೀನ ಸಮಾಜಗಳಿಗೆ ಇಲ್ಲದಿದ್ದರೂ, ಈ ಸಮುದಾಯಗಳ ಸ್ಮೃತಿಗಳಲ್ಲಿ ವಿಶಿಷ್ಟವೂ, ಪರ್ಯಾಯವೂ ಆದ ತಿಳುವಳಿಕೆ ಸೃಷ್ಟಿಯಾಗುತ್ತಾ ಬಂದಿದೆ. ಈ ತಿಳುವಳಿಕೆಯ ಅಕ್ಷರಗಳಲ್ಲಿ ವ್ಯಕ್ತವಾಗದೆ, ಮೌಖಿಕ ನೆಲೆಯಲ್ಲಿ ಹಲವು ರೂಪುಗಳಲ್ಲಿ ಘನೀಕೃತಗೊಳ್ಳುತ್ತಾ ಬಂದಿದೆ. ಪ್ರಸ್ತುತ ತಿಳುವಳಿಕೆಯು ಈ ಅಧೀನ ಸಮಾಜಗಳ ಆಚರಣೆ, ಜೀವನ ವಿಧಾನ ಮತ್ತು ಮೌಖಿಕ ಕಥನಗಳಲ್ಲಿ ವ್ಯಕ್ತವಾಗುತ್ತಾ ಬಂದಿದೆ. ಅಧೀನ ಸಮಾಜಗಳ ಮೌಖಿಕತೆಯ ಅಧ್ಯಯಯನವೆಂದರೆ ಅದು ಆ ಸಮಾಜಗಳ ಜ್ಞಾನ ವ್ಯವಸ್ಥೆಯ ಅಧ್ಯಯನವೆಂದೇ ಭಾವಿಸಬೇಕಾಗುತ್ತದೆ. ಕಳೆದೊಂದು ಶತಮಾನದಿಂದ ಭಾರತದ ಈ ಅಧೀನ ಸಮಾಜಗಳ ಮೌಖಿಕತೆಯ ಅಧ್ಯಯನಗಳು ನಡೆಯುತ್ತಲೇ ಬಂದಿವೆ. ಅದರಲ್ಲೂ ಮುಖ್ಯವಾಗಿ, ಹಾಡು, ಒಗಟು, ಕಥೆ, ಒಡಪು ಮುಂತಾದ ಸಾಂಪ್ರದಾಯಿಕ ಅಭಿವ್ಯಕ್ತಿ ಪ್ರಕಾರಗಳನ್ನು ದಾಖಲಿಸಿ ಪ್ರಕಟಿಸಲಾಗಿದೆ. ತೀರ ಇತ್ತೀಚೆಗೆ ಈ ಅಧೀನ ಸಮುದಾಯಗಳ ದರ್ಶನವೇ ಹುದುಗಿರುವ ಮಹಾಕಾವ್ಯಗಳ ಸಂಗ್ರಹ ಕಾರ್ಯವೂ ನಡೆಯುತ್ತ ಬಂದಿದೆ. ಈ ಮಹಾಕಾವ್ಯಗಳ ಸಂಗ್ರಹ ಮತ್ತು ಸಂಪಾದನಾ ಕಾರ್ಯಗಳು ಅಧೀನ ಸಮುದಾಯಗಳ ಲೋಕದೃಷ್ಟಿಯನ್ನು ಜಗತ್ತಿನ ಮುಂದೆ ತೆರೆದಿಟ್ಟಿವೆ.

ಅಭಿಜಾತ ಪರಂಪರೆಯ ರಾಮಾಯಣ, ಮಹಾಭಾರತ ಕಾವ್ಯಗಳೂ ಸಹ ಈ ಅಧೀನ ಸಮುದಾಯಗಳ ಮೌಖಿಕ ಧಾರೆಗಳಲ್ಲಿ ವಿಭಿನ್ನವಾಗಿ ಅಭಿವ್ಯಕ್ತಿಸಲ್ಪಟ್ಟ ಮೇಲೆ 'ಮುಖ್ಯವಾಹಿನಿ'ಯ ಚಿಂತನಾ ಕ್ರಮ ತನ್ನ ನೋಟಕ್ರಮವನ್ನೇ ಬದಲಿಕೊಂಡಿತು. ಭಾರತದ ಅಧಿಕಾರರಹಿತ ಸಮಾಜಗಳ ಒಳಜಗತ್ತಿನ ದರ್ಶನಗಳ ಮೀಮಾಂಸೆಯು ಈಗ ಸಂಸ್ಕೃತಿ ಚಿಂತನೆಯ ಮುನ್ನೆಲೆಗೆ ಬರುತ್ತಿದೆ. ಈ ಹೊಸ ಬಗೆಯ ಚರ್ಚೆಯು ಅಧೀನ ಸಮುದಾಯಗಳ ಅಂತಸ್ಥ ಜಗತ್ತಿನ ವಿವಿಧ ಆಯಾಮಗಳನ್ನು ಶೋಧಿಸುತ್ತಿದೆ. ಇಂತಹ ಶೋಧನೆಯ ಭಾಗವಾಗಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲು ಪ್ರಯತ್ನಿಸಲಾಗಿದೆ.

ನಾಡಿನ ವಾಂಙ್ಮಯ ಸಂಸ್ಕೃತಿಯನ್ನು ರೂಪಿಸುವಲ್ಲಿ ಅಕ್ಷರ ಸಾಹಿತ್ಯದ ಪಾತ್ರ ಪ್ರಮುಖವಾಗಿದೆ. ಅಕ್ಷರ ಸಾಹಿತ್ಯ ನಿತ್ಯ ಪರಿವರ್ತನೆಯಾಗುತ್ತಿದ್ದರೂ ಸಹ ಸಮಾಜಕ್ಕೆ ನೀಡಿರುವ ಆಶಯ, ಕೊಡುಗೆ ಬದಲಾಗುವುದಿಲ್ಲ. ಯಾವುದೇ ಒಬ್ಬ ಕವಿ, ಕತೆಗಾರ ಸೃಷ್ಟಿಸಿರುವ ಅನುಭಾವವು ಅಥವಾ ಬೇರೆಯವರಿಂದ ಕೇಳಿ ತಿಳಿದ ವಿಚಾರಗಳು ಅಕ್ಷರ ರೂಪಕ್ಕೆ ಘಟನೆಗಳನ್ನು ಪ್ರತಿಭೆಗೆ ತಕ್ಕಂತೆ ರೂಪಿಸುತ್ತಾ ಹೋಗುತ್ತಾನೆ. ಈ ಅಕ್ಷರ ರೂಪದ ಸಾಹಿತ್ಯಕ್ಕೆ ಬುನಾದಿಯೇ ಮೌಖಿಕ ಪರಂಪರೆಯಾಗಿದೆ. ಜನರು ತಮ್ಮ ಬದುಕನ್ನು ಮೌಖಿಕವಾಗಿಯೇ ಕಟ್ಟುತ್ತಾ ಹೋದರು. ಜನಜೀವನದ ಎಲ್ಲಾ ಮಜಲುಗಳಾದ ಹಾಗೂ ಸೂಕ್ಷ್ಮ ಭಾವನಾ ರೂಪಗಳಾದ ಗಾದೆ, ಒಗಟು, ನಾಣ್ಣುಡಿಗಳಿಗೆ ಅಕ್ಷರ ಸಾಹಿತ್ಯ ತೆರೆದುಕೊಳ್ಳುತ್ತದೆ. ಇದಕ್ಕೆ ಮೌಖಿಕವಾಗಿ ಬಂದ ಸಂಸ್ಕೃತಿಯ ಒಟ್ಟು ದಾಖಲೀಕರಣ ಕಾರಣವಾಗುತ್ತದೆ. ಅಕ್ಷರ ಸಾಹಿತ್ಯ ಕೆಲವೊಮ್ಮೆ ಬದಲಾದರೂ, ಅಥವಾ ಸ್ಥಗಿತವಾದರೂ ಮೌಖಿಕ ಸಾಹಿತ್ಯ ನಾಶವಾಗುವುದಿಲ್ಲ, ಆದ್ದರಿಂದಲೇ ಒಂದು ಸಮುದಾಯದ ಸಾಂಸ್ಕೃತಿಕ ನಾಯಕ ಅಥವಾ ನಾಯಕಿಯ ಚರಿತ್ರೆ ಒಂದು ತಲೆಮಾರಿಂದ ಮತ್ತೊಂದು ತಲೆಮಾರಿಗೆ ಮೌಖಿಕವಾಗಿಯೇ ತಮ್ಮ ಸಂಸ್ಕೃತಿಯ ಎಳೆಗಳನ್ನು ವರ್ಗಾಹಿಸುತ್ತಾರೆ. ಅಕ್ಷರ ಸಾಹಿತ್ಯದ ವಿವಿಧ ಮಜಲುಗಳು ಪ್ರಾರಂಭಗೊಂಡಂತೆಲ್ಲಾ ಮೌಖಿಕ ಸಾಹಿತ್ಯವು ಶಿಷ್ಟಗೊಳ್ಳುತ್ತಾ ಹೋಯಿತು, ಹಾಗಾಗಿ ಮೌಖಿಕ ಸಾಹಿತ್ಯವನ್ನು ನಾಶಗೊಳಿಸದೆ ಅಕ್ಷರ ಬಲ್ಲ ಶಿಷ್ಟರು ಸಂಗ್ರಹಿಸಿ ಅವುಗಳನ್ನು ಕಾಪಾಡುವ ದೃಷ್ಟಿಯಿಂದ ದಾಖಲೀಕರಿಸಿಕೊಳ್ಳಲು ಪ್ರಾರಂಭಿಸಿದರು, ಈ ಹಿನ್ನೆಲೆಯಲ್ಲಿ ಮೌಖಿಕರು ಹಾಡುತ್ತಾ ಬಂದ ಎಷ್ಟೋ ಘಟನೆಗಳು, ಸಮುದಾಯದ ದೈವ, ಎಲ್ಲವನ್ನು ತಮ್ಮ ಹಾಡುಗಳಲ್ಲಿ ಕಟ್ಟಿಕೊಡಲು ಪ್ರಾರಂಭಿಸಿದರು, ಹೀಗೆ ದೈವಗಳನ್ನು ಕುರಿತ ಹಾಡುಗಳು ದಿನದಿಂದ ದಿನಕ್ಕೆ ರಾತ್ರಿಯಿಂದ ಧೀರ್ಘ ರಾತ್ರಿಯವರೆಗೆ ಬೆಳೆಯುತ್ತಾ ಹೋದವು. ಇವುಗಳನ್ನು ಶಿಷ್ಟ ಸಾಹಿತ್ಯದಲ್ಲಿ ಮಹಾಕಾವ್ಯಗಳೆಂದು ಕರೆದರು. ಈ ಮಹಾಕಾವ್ಯಗಳು ಹುಟ್ಟಿಕೊಂಡಂತೆ ದೈವಗಳ ನಾಯಕರು, ಸಮುದಾಯಗಳ ಸಂಸ್ಕೃತಿ, ಆಚರಣೆ, ಸಂಪ್ರದಾಯಗಳು ಸಹ ಮಹಾಕಾವ್ಯದ ಒಳಗಡೆ ಅಡಕವಾಗತೊಡಗಿದವು ಇವುಗಳು ಮೌಖಿಕ ಮಹಾಕಾವ್ಯಗಳಾಗಿ ರಚನೆಗೊಂಡವು.

ಭಾರತೀಯ ಪರಂಪರೆಯಲ್ಲಿ ಮೌಖಿಕ ಮಹಾಕಾವ್ಯಗಳಿಗೆ ವಿಶಿಷ್ಟವಾದ ಸ್ಥಾನವಿದೆ. ನಮ್ಮ ಸಮುದಾಯಗಳ ಸಂಸ್ಕೃತಿಯನ್ನು ರೂಪಿಸುವಲ್ಲಿ ಮಹಾಕಾವ್ಯಗಳ ಪಾತ್ರ ಮಹತ್ವವಾಗಿದೆ. ಮಹಾಕಾವ್ಯಗಳ ಹುಟ್ಟು ಒಂದು ಹೊಸ ಸಾಹಿತ್ಯ ಪ್ರಪಂಚವನ್ನೆ ಸೃಷ್ಟಿಸಿತು. ಏಕೆಂದರೆ ಮಹಾಕಾವ್ಯಗಳು

ಎಂಬುದು ಶಿಷ್ಟ ಪರಂಪರೆಯಲ್ಲಿ ಇದ್ದಂತಹ ಮಹಾಭಾರತ, ರಾಮಾಯಣ ಕಾವ್ಯಗಳೆಂದು ಹೇಳದೆ ಒಂದು ಸಮಾಜದ, ಸಮುದಾಯಗಳ ಸಂಸ್ಕೃತಿಯು ಅನಾವರಣಗೊಳಿಸಿರುವುದೇ ಮಹಾಕಾವ್ಯವಾಗಿದೆ. ಮಹಾಕಾವ್ಯಗಳು ಲಿಖಿತವಾಗಿಯೋ ಮುದ್ರಣದಿಂದಲೋ ಹುಟ್ಟಿಕೊಂಡವಲ್ಲ, ಬದಲಾಗಿ ಜನರು ತಮ್ಮ ಅನುಭವಗಳ ಪ್ರತಿಪಾದನೆಗಳು ಮೌಖಿಕ ಮಹಾಕಾವ್ಯಗಳಾಗಿ ಜನ್ಮ ತಳೆದವು. ಮೌಖಿಕ ಕಾವ್ಯಗಳು ಸಮುದಾಯದ ಒಳಗೆ ಅನೇಕ ಮಜಲುಗಳನ್ನು ಹಿಡಿದಿಟ್ಟುಕೊಂಡಿವೆ. ಆದ್ದರಿಂದಲೇ ಮಹಾಕಾವ್ಯಗಳು ಒಂದು ಸಮುದಾಯದ ಸಂಸ್ಕೃತಿ ಮೌಲ್ಯಗಳನ್ನು ಅನಾವರಣಗೊಳ್ಳುತ್ತದೆ.

ಮೌಖಿಕ ಮಹಾಕಾವ್ಯಗಳು ಒಂದು ಸಮುದಾಯದಿಂದ ಮತ್ತೊಂದು ಸಮುದಾಯಕ್ಕೆ ವಿಭಿನ್ನವಾಗಿದ್ದು ನಾಯಕ ಪ್ರಭಾವದಿಂದ ವರ್ಗಾವಣೆ ಆಗುವ ಸಂದರ್ಭದಲ್ಲಿ ಉಂಟಾಗುವ ಸಂಕ್ರಮಾಣಾವಸ್ಥೆಯ ಮೂಲಕ ಧೀರ್ಘ ಮಹಾಕಾವ್ಯಗಳು ಹುಟ್ಟಿಕೊಳ್ಳುತ್ತವೆ. ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಮಾಳಿಂಗರಾಯನಂತ ಕಾವ್ಯಗಳು ನಮ್ಮ ಕರ್ನಾಟಕ ಸಂಸ್ಕೃತಿಯಲ್ಲಿ ವಿಭಿನ್ನ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ. ಈ ಕಾವ್ಯಗಳು ಮೌಖಿಕ ಚರಿತ್ರೆಯನ್ನು ಅನನ್ಯವಾಗಿಸುವಲ್ಲಿ ಪ್ರಮುಖವಾಗಿದೆ. ಅಲ್ಲದೆ ಯಾವುದೇ ಪಂಥ, ಧರ್ಮಗಳಿಂದ ಹೊರತಾಗಿ ಹುಟ್ಟಿಕೊಂಡ ಕಾವ್ಯಗಳಾಗಿವೆ. ಪ್ರತಿಯೊಂದು ಕಾವ್ಯಗಳು ಇಂದಿನ ಯುಗದಲ್ಲಿ ಜಾಗತಿಕ ಮಟ್ಟದಲ್ಲಿ ರೂಪುಗೊಳ್ಳುತ್ತಿದ್ದು ವಿವಿಧ ಮಜಲುಗಳಲ್ಲಿ ಸಮಾಜಕ್ಕೆ ತೆರೆದುಕೊಳ್ಳುತ್ತವೆ. ಭಾರತ ಮಾತ್ರವಲ್ಲದೆ ಪಾಶ್ಚಾತ್ಯರು ಸಹ ಅನೇಕ ಮೌಖಿಕ ಮಹಾಕಾವ್ಯಗಳನ್ನು ಶಿಷ್ಟರೂಪಕ್ಕೆ ತಂದರು. ಮೌಖಿಕ ಕಾವ್ಯಗಳಲ್ಲಿ ಲಿಂಗ ಸಮಾನತೆ, ಅಸಮಾನತೆ, ಸಂಘರ್ಷಗಳು, ದ್ವಂದ್ವತೆಗಳು ನಡೆಯುತ್ತಲೇ ಬಂದಿವೆ. ಈ ಎಲ್ಲ ವಿಷಯಗಳನ್ನು ನನ್ನ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

## ಅಧ್ಯಯನದ ಉದ್ದೇಶ

"ಮೌಖಿಕ ಮಹಾಕಾವ್ಯಗಳಲ್ಲಿ ಲಿಂಗ ಸಂಬಂಧ" ಎಂಬ ಶೀರ್ಷಿಕೆಯಡಿಯಲ್ಲಿ ಕೈಗೊಂಡಿರುವ ಈ ಅಧ್ಯಯನವನ್ನು ಅಂತರ್‌ಶಿಸ್ತೀಯ ನೆಲೆಯಲ್ಲಿಯೂ ಗಮನಿಸುವ ಪ್ರಯತ್ನ ಮಾಡಲಾಗುತ್ತಿದೆ. ಇದುವರೆಗೂ ಸಮಾಜದಲ್ಲಿ ಇರುವಂತಹ ಸ್ತ್ರೀ- ಪುರುಷರ ಸ್ಥಾನಮಾನಗಳನ್ನು, ಕಾವ್ಯಗಳ ಮೂಲಕ ಅವರ ಅಸ್ಥಿತ್ವವನ್ನು ಕಂಡುಕೊಳ್ಳುವುದು ಅನಿವಾರ್ಯವಾಗಿದೆ ಏಕೆಂದರೆ ಸಮಾಜದ ಸಂರಚನೆಯಲ್ಲಿ ಪುರುಷನಿಗಿದ್ದಷ್ಟು ಅಧಿಕಾರ ಮಹಿಳೆಯರಿಗಿಲ್ಲ. ಸ್ತ್ರೀ-ಪುರುಷರ ನಡುವಿನ ತಾರತಮ್ಯ, ಅಸಮಾನತೆ ಸಂಸ್ಕೃತಿ ಸಮಾನತೆಗಳ ಹಿನ್ನೆಯಲ್ಲಿ ಈ ಅಧ್ಯಯನವನ್ನು ಕಟ್ಟಿಕೊಡುತ್ತಿದ್ದೇನೆ. ಈ ಪರಬಂಧದ ಪ್ರಮುಖ ಉದ್ದೇಶಗಳು ಈ ಕೆಳಗಿನಂತಿವೆ.

೧. ಮೌಖಿಕ ಮಹಾಕಾವ್ಯಗಳಲ್ಲಿನ ಲಿಂಗಸಂಬಂಧಗಳ ಅನನ್ಯತೆಗಳನ್ನು ವಿವೇಚಿಸುವುದು.

೨. ಸಮಾಜ, ಕುಟುಂಬ, ಮತ್ತು ಸಮುದಾಯಗಳಲ್ಲಿ ಸ್ತ್ರೀ- ಪುರುಷರ ನಡುವಿನ ಅಧಿಕಾರದ ನೆಲೆಗಳನ್ನು ತಿಳಿದುಕೊಳ್ಳುವುದು.

೩. ಅಧೀನ ಸಮುದಾಯಗಳ ಮೌಖಿಕ ಪರಂಪರೆಯಲ್ಲಿನ ಲಿಂಗಸಂಬಂಧಗಳ ಚಾರಿತ್ರಿಕ ಏರಿಳಿತಗಳನ್ನು ವಿವರಿಸುವುದು. ಅವರ ಕಸುಬುಗಳು, ಆ ಕಸುಬುಗಳಿಂದ ಪ್ರಾಪ್ತವಾಗಿರುವ ಸ್ಥಾನಮಾನ ಮತ್ತು ಅಧೀನತೆಯ ಸ್ವರೂಪವನ್ನು ವಿಶ್ಲೇಷಿಸುವುದು.

೪. ಮೌಖಿಕ ಮಹಾಕಾವ್ಯಗಳಲ್ಲಿನ ಕೇಂದ್ರದಲ್ಲಿರುವ ಲಿಂಗಾಧಾರಿತ ಅಧಿಕಾರದ ವಿನ್ಯಾಸಗಳನ್ನು ವಿವರಿಸುವುದು.

ಅಷ್ಟೆ ಅಲ್ಲದೆ ಈ ಅಧ್ಯಯನದ ಮೂಲಕ ಮೌಖಿಕ ಕಾವ್ಯಗಳು ಪಠ್ಯಗಳಾಗಿ ರೂಪುಗೊಳ್ಳುವಾಗ ಅಲ್ಲಿದ್ದಂತಹ ಲಿಂಗ ಸಂಬಂಧಗಳು, ಮಹಾಕಾವ್ಯಗಳಲ್ಲಿನ ಕೆಲವು ನಾಯಕರು ತಮಗಾಗಿಯೋ ತಮ್ಮ ಸಮುದಾಯಗಳಿಗಾಗಿಯೋ ಸ್ತ್ರೀಯರ ಮೇಲೆ ಹೇರಿದ ನಿಷೇಧಗಳು, ಅವುಗಳನ್ನು ಕೆಲ ಸಮುದಾಯಗಳು ಇಂದಿಗೂ ಪಾಲಿಸಿಕೊಂಡು ಬಂದಿರುವ ರೀತಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಂದಿನ ಆಧುನಿಕ ಸಂದರ್ಭದಲ್ಲೂ ಸಹ ನಾಯಕರು ವಿಧಿಸಿದ ಸಂಸ್ಕೃತಿ, ಧರ್ಮ ಅನುಸರಿಸಿಕೊಂಡು ಮೌಢ್ಯವಾಗಿ ಬದುಕುತ್ತಿದ್ದಾರೆ. ಅಲ್ಲದೆ ಸಾಂಸ್ಕೃತಿಕ ನಾಯಕರ ಹುಟ್ಟಿಗೆ ಕಾರಣವಾದ ಶ್ರಮಿಕರು, ಶೋಷಿತ ವರ್ಗದರೂ ಇಂದಿಗೂ ಸಹ ಪೌರೋಹಿತ್ಯ ಶಾಹಿಯ ಕೈಕೆಳಗೆ ಮೂಲೆಗುಂಪಾಗಿವೆ.

ಸಾಹಿತ್ಯದ ನಾಯಕರು ಆಳುವ ವರ್ಗದ ವಿರುದ್ಧ ಪ್ರತಿರೋಧವನ್ನು ವ್ಯಕ್ತಪಡಿಸಿ ಒಂದು ಹೊಸ ಚರಿತ್ರೆಯನ್ನು ಸೃಷ್ಟಿಸಿದರು. ಆದರೆ ದುಡಿಯುವ ಸಮುದಾಯಗಳು ಆ ಚರಿತ್ರೆಯನ್ನು ನಿರ್ಮಿಸುವಲ್ಲಿ ಸೋತು ಮೇಲ್ವರ್ಗಕ್ಕೆ ತಲೆಬಾಗಿದ್ದಾರೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಉಪಯುಕ್ತವಾಗಿದೆ. ಹಾಗೂ ಇಲ್ಲಿರುವ ಲಿಂಗ ಸಂಬಂಧಗಳನ್ನು ಪ್ರಸ್ತುತ ಸಮಾಜಕ್ಕೆ ಅರ್ಥೈಸುವ ರೀತಿಯಲ್ಲಿ ಅಧ್ಯಯನ ಮಹತ್ವದ್ದೆನಿಸುತ್ತದೆ.

**ಅಧ್ಯಯನದ ವ್ಯಾಪ್ತಿ & ಮಹತ್ವ**

ಮೌಖಿಕ ಮಹಾಕಾವ್ಯಗಳು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಒತ್ತಡಗಳ ಆಧಾರದ ಮೇಲೆ ರಚನೆಗೊಂಡು ಇಂದಿಗೂ ವಿಸ್ತಾರವಾದ ರೂಪದಲ್ಲಿ ಅಸ್ತಿದಲ್ಲಿವೆ. ಮೌಖಿಕ ಕಾವ್ಯಗಳನ್ನು ಹಾಡುವ ಸಮುದಾಯಗಳು ತಮ್ಮದೇ ನಾಯಕನನ್ನು ಪದಗಳಲ್ಲಿ ನಿರ್ಮಿಸಿದರು. ಇದರಿಂದ ನಾಯಕರ ಕುರಿತ ಅಧ್ಯಯನಗಳು ಹುಟ್ಟಿಕೊಂಡವು. ನನ್ನ ಅಧ್ಯಯನಕ್ಕೆ ಆಯ್ದುಕೊಂಡ ಕಾವ್ಯಗಳಾದ ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಮಾಳಿಂಗರಾಯ, ಕಾವ್ಯಗಳು ಕರ್ನಾಟಕದಾದ್ಯಂತ ವಿಸ್ತಾರವಾದ ನೆಲೆಯನ್ನು ಕಂಡುಕೊಂಡವು, ಆ ನೆಲೆಗಳು ಸಾಂಸ್ಕೃತಿಕ ಪರಂಪರೆಯಾಗಿ ಮುಂದುವರೆದುಕೊಂಡುಬಂದಿವೆ.

ಮಲೆಮಾದೇಶ್ವರ ಕಾವ್ಯದ ಅಧ್ಯಯವು ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಏಳುಮಲೆ ಬೆಟ್ಟದ ಸುತ್ತಮುತ್ತಲೂ, ಸುತ್ತೂರು, ಕುಂತೂರು, ಸುತ್ತಮುತ್ತಲಿನ ಹಳ್ಳಿಗಳಾದ ನಾಗಮಲೆ, ಇಂಡಿಗನತ್ತ, ಇನ್ನೂ ಅನೇಕ ಪ್ರದೇಶಗಳಲ್ಲಿ  ಪ್ರಚಲಿತದಲ್ಲಿದೆ.

ಮಂಟೇಸ್ವಾಮಿಯ ಕಾವ್ಯವು ಕುರುಬನಕಟ್ಟೆ, ಮೈಸೂರು, ಬೊಪ್ಪಗೊಂಡನಪುರ ಚಿಕ್ಕಲೂರು, ಕಪ್ಪಡಿ, ಮುತ್ತನಳ್ಳಿ ಮೊದಲಾದ ಕ್ಷೇತ್ರದಲ್ಲಿ ಚಾಲ್ತಿಯಲ್ಲಿದ್ದು, ಮೈಸೂರು, ಮಂಡ್ಯ ಮತ್ತು ಚಾಮರಾಜನಗರ ಪ್ರದೇಶಗಳಲ್ಲಿ ಹಾಡಲ್ಪಡುತ್ತಿದೆ.

ಜುಂಜಪ್ಪ ಕಾವ್ಯವು ಸಿರಾ, ಹಿರಿಯೂರು, ಚಿತ್ರದುರ್ಗ, ಕಳುವೋರಳ್ಳಿ, ಬೇವಿನಳ್ಳಿ ತಾಲ್ಲೂಕುಗಳಲ್ಲಿ ಜೀವಂತವಾಗಿದೆ.

ಮಾಳಿಂಗರಾಯನ ಕಾವ್ಯವು ಬೆಳಗಾವಿ, ವಿಜಯಪುರ, ಬಾಗಲಕೋಟೆ, ಧಾರವಾಡ, ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿ ಭಾಗಗಳಲ್ಲಿ ಕಾಣುತ್ತೇವೆ. ಹುಲಜಂತಿ, ಬುಹ್ಯಾರ, ಹುನೂರುಮಠ, ಪ್ರದೇಶಗಳಲ್ಲಿದೆ.

ಮೈಲಾರಲಿಂಗನ ಕಾವ್ಯದ ಅಧ್ಯಯನವು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಕ್ಷೇತ್ರದಲ್ಲಿ ಹಾಡಲ್ಪಡುತ್ತಿದೆ.

ಈ ಮೇಲ್ಕಾಣಿಸಿದ ಐದು ಮಹಾಕಾವ್ಯಗಳನ್ನು ಮುಖ್ಯವಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಪ್ರಸುತ ಅಧ್ಯಯನಕ್ಕೆ ಈ ಐದು ಮಹಾಕಾವ್ಯಗಳೇ ಮುಖ್ಯ ಆಕರಗಳಾಗಿವೆ. ಸಂದರ್ಭೋಚಿತವಾಗಿ ಉಳಿದ ಮಹಾಕಾವ್ಯಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಮೌಖಿಕ ಮಹಾಕಾವ್ಯಗಳಲ್ಲಿ ವ್ಯಕ್ತವಾಗಿರುವ ಸಮುದಾಯಗಳು, ಸಂಸ್ಕೃತಿ, ಲಿಂಗ ಸಂಬಂಧವನ್ನು ಅಧ್ಯಯನ ಮಾಡುವುದಾಗಿದೆ. ಈ ಅಧ್ಯಯನದಲ್ಲಿ ಮೌಖಿಕ ಮಹಾಕಾವ್ಯ ಅವುಗಳ ವಿಸ್ತಾರ, ಸಂಸ್ಕೃತಿ ಪ್ರಸ್ತುತ ಕಾವ್ಯಗಳು ಮತ್ತು ಅವುಗಳ ಸ್ಥಾನ–ಮಾನ, ನಾಯಕ–ನಾಯಕಿಯರು, ನಾಯಕ–ಪ್ರತಿನಾಯಕ ಮೊದಲಾದವುಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಮೌಖಿಕ ಕಾವ್ಯಗಳಿಗೆ ಸಂಬಂಧಿಸಿದಂತೆ ಅನೇಕ ಅಧ್ಯಯನಗಳ ನಡುವೆಯೇ ಈ ಕಾವ್ಯಗಳನ್ನು ಅಧ್ಯಯನ ಮಾಡುವುದರಿಂದ ಅನಕ್ಷರಸ್ಥ ಮಹಿಳೆಯರ ಜೀವನ, ದೈವಗಳ ಸಾಂಸ್ಕೃತಿಕತೆ, ಸಮುದಾಯದಲ್ಲಿ ಮಹಿಳೆಯರ ಅಲಕ್ಷ್ಯತೆಯನ್ನು ಮುನ್ನೆಲೆಗೆ ತರುವಲ್ಲಿ ಈ ಅಧ್ಯಯನ ಮಹತ್ವ ಪಡೆದಿದೆ.

ಮೌಖಿಕ ಮಹಾಕಾವ್ಯಗಳಲ್ಲಿ ಮಹಿಳೆಯರ ಸಂವೇದನೆಗಳು, ಮಹಿಳೆಯರು ಶೋಷಣೆಗೆ ಒಳಪಟ್ಟು ಅನುಭವಿಸಿದ ಹೇರಿಕೆಗಳು, ಅವರ ಕಥನಗಳನ್ನು ತಿಳಿಸುವುದರ ಮೂಲಕ ನಾಯಕರು ಮಹಿಳಾ ಅಸ್ತಿತ್ವ ಮತ್ತು ಅಧಿಕಾರವನ್ನು ಸ್ಥಾಪಿಸಲು ಪ್ರಯತ್ನಿಸುತ್ತಾರೆ. ಕೆಲವು ಬಾರಿ ನಾಯಕರು ಸಂಧಿ ಮಾಡಿಕೊಂಡು ಮತ್ತೆ ಕೆಲವು ಸಲ ಸಂಘರ್ಷ ನಡೆಸಿದರೂ ಅವರವರ ಬದುಕನ್ನು ರೂಪಿಕೊಳ್ಳಲು ಅವಕಾಶ ಕಲ್ಪಿಸುತ್ತದೆ. ಮಲೆಮಾದೇಶ್ವರ, ಮಂಟೆಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಮಾಳಿಂಗರಾಯ ಕಾವ್ಯಗಳನ್ನು ಆಯ್ಕೆ ಮಾಡಿಕೊಂಡು ಇಲ್ಲಿ ವ್ಯಕ್ತವಾಗಿರುವ ಲಿಂಗ ಸಂಬಂಧದ ಅನೇಕ ಮಜಲುಗಳನ್ನು ಶೋಧಿಸಿಸುವ ಪ್ರಯತ್ನವೇ ಈ ಅಧ್ಯಯನದ ಮುಖ್ಯ ಆಶಯವಾಗಿದೆ.

ಪ್ರಸ್ತುತ ಅಧ್ಯಯನವು ನಾಯಕರನ್ನು ನಂಬಿ ಆಚರಿಸುವ ಸಮುದಾಯಗಳ ಜೀವನ ಕ್ರಮ, ಸಂಪ್ರದಾಯ, ಅಳಿವು, ಉಳಿವು ಅಸ್ತಿತ್ವತೆ, ಸಾಮಾಜಿಕತೆ ಇವುಗಳನ್ನು ಸಂದರ್ಭಾನುಸಾರವಾಗಿ ತಿಳಿಸುತ್ತಾ ಹೋಗಲಾಗಿದೆ. ಕಾವ್ಯಗಳಲ್ಲಿ ಸ್ತ್ರೀಯರ ಮೇಲೆ ಸಾಂಸ್ಕೃತಿಕ ನಾಯಕರು ನಡೆಸಿರುವ ಶೋಷಣೆಯನ್ನು ಲಿಂಗತಾರತಮ್ಯವೆಂದು ಕರೆಯದೆ ಆ ನಾಯಕರ ಉದ್ದೇಶ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನಕ್ಕಾಗಿ ನಾಯಕರು ನಡೆಸಿದ ಹೋರಾಟಗಳು ಹೇಗಿವೆ ಎಂಬುದನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

ಮಹಾಕಾವ್ಯಗಳಲ್ಲಿನ ನಾಯಕರನ್ನು ಹೊರತುಪಡಿಸಿ ನಾಯಕಿಯರ, ಪಾತ್ರಗಳು ಇಂದಿಗೂ ಸಮಾಜ ಸಮುದಾಯಗಳ ಪೂಜೆಗೆ ಅರ್ಹರಾಗಿದ್ದು, ಆದರ್ಶ ಪಾತ್ರಗಳಂತೆ ಗದ್ದುಗೆಗಳ ರೂಪದಲ್ಲಿ ಪೂಜಿಸುತ್ತಿದ್ದಾರೆ. ಆ ನಾಯಕಿಯರಿಗೂ ಒಂದು ಸಾಂಸ್ಕೃತಿಕ ಅನನ್ಯತೆಯನ್ನು ಕಂಡುಕೊಳ್ಳಲು ಅವಕಾಶವಾಗಿದೆ. ಇಂದಿನ ಪ್ರಸ್ತುತ ಸಮಾಜದಲ್ಲಿ ನಾಯಕ ಪರ ಪ್ರತಿಭಟನೆಯ ಫಲವಾಗಿ ಅಥವಾ ಮೌನವಾಗಿದ್ದು ಸಹಿಸಿದ ಮನಸ್ಸಿಗೆ ದೊರೆತ ಅಸ್ತಿತ್ವವನ್ನು ಉಳಿಸಿಕೊಂಡು ಬಂದ ರೀತಿಯನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

ಮೌಖಿಕ ಕಾವ್ಯಗಳಲ್ಲಿ ಸ್ತ್ರೀ–ಪುರುಷರಿಗೆ ಸಂಬಂಧಿಸಿದ ಧೋರಣೆಗಳು ಬಹುತೇಕವಾಗಿ ಶಿಷ್ಟ ಸಮಾಜದ ಧೋರಣೆಗಳಿಗೆ ಬದ್ದವಾಗಿವೆ. ಏಕೆಂದರೆ ಕಾವ್ಯಗಳಲ್ಲಿ ಇದ್ದ ವ್ಯವಸ್ಥೆ, ಸಮಾಜ ಮತ್ತು ಪುರುಷರ ಆಶಯಗಳೇ ಪ್ರಸ್ತುತ ಸಮಾಜದಲ್ಲಿ ಕಾಣುತ್ತಿವೆ. ಆದ್ದರಿಂದಲೇ ಸ್ತ್ರೀಯು ಪುರುಷರ ಆಶಯಗಳಿಗೆ, ನಾಯಕರು ವಿಧಿಸಿದ ಆಶಯಗಳ ಅನುಕೂಲಕ್ಕೆ ತಕ್ಕಂತೆ ತಮ್ಮ ಜೀವನವನ್ನು ರೂಪಿಸಿಕೊಂಡು ಬಂದಿದ್ದಾರೆ. ನಾಯಕರು ಸಹ ಸಮಾಜ, ಸಮುದಾಯ ಸಮಷ್ಟಿಯ ಒಳಿತಿಗಾಗಿ ಹೆಣಗಾಡುತ್ತಲೇ ಬಂದಿದ್ದಾರೆ. ಕಾವ್ಯಗಳ ದೈನಂದಿನ ಬದುಕಿನ ತಮ್ಮ ನೋವು, ನಿರಾಶೆ, ಸುಖ–ದುಃಖ ಸಂಭ್ರಮಾಚರಣೆ, ಮಾನವೀಯ ಸಂಬಂಧಗಳನ್ನು ಒಂದು ಚೌಕಟ್ಟಿನಲ್ಲಿ ಅಭಿವ್ಯಕ್ತಿಸುತ್ತಾರೆ. ಇವುಗಳನ್ನು ಕೂಲಂಕುಷವಾಗಿ ಅಧ್ಯಯನ ಮಡಿದಾಗ ಮಾತ್ರ ಸಮಾಜದಲ್ಲಿ ಪುರಷ ಪ್ರಧಾನತೆಯ ವ್ಯವಸ್ಥೆಯು ಕಂಡು ಬರುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ೫ ಮೌಖಿಕ ಕಾವ್ಯಗಳನ್ನು ಆಯ್ಕೆ ಮಾಡಿಕೊಂಡು ಸಾಂಸ್ಕೃತಿಕ ವೈವಿದ್ಯತೆಯನ್ನು ಕಟ್ಟಿಕೊಡಲಾಗುತ್ತದೆ. ಈ ಕಾವ್ಯಗಳ ಮೂಲಕ ಮಹಿಳೆ–ಪುರುಷರು ಸಮಾಜದಲ್ಲಿ ಅನುಭವಿಸಿದ ಅಧೀನತೆಯ ಜೀವನ, ಪ್ರತಿರೋಧದ ನೆಲೆಗಳು, ಪರಾಧೀನತೆ ಹೇರಿಕೆಯನ್ನು ಒಳಗೊಂಡಿರುವುದನ್ನು ಕಾಣಬಹುದು ಕಾವ್ಯಗಳ ಸಾಂಸ್ಕೃತಿಕ ನೆಲೆಗಳು ಅವುಗಳನ್ನು ಮುಂದುವರೆಸಿಕೊಂಡು ಬಂದ ಸಮುದಾಯಗಳು ಒಂದೊಂದು ಸಂಸ್ಕೃತಿಯನ್ನು ಧರ್ಮವನ್ನು ಪ್ರತಿನಿಧಿಸುತ್ತವೆ. ಈ ಎಲ್ಲಾ ಮಹಾಕಾವ್ಯಗಳು ವಿವಿಧ ಪಠ್ಯಗಳನ್ನು ಹೊಂದಿದ್ದು ಕನ್ನಡ ವಿಶ್ವ ವಿದ್ಯಾಲಯದಿಂದ ಪ್ರಕಟವಾಗಿವೆ ಎಂಬುದು ಹೆಮ್ಮೆಯ ವಿಚಾರವಾಗಿದೆ.

**ಅಧ್ಯಯನದ ವಿಧಾನ.**

ಪ್ರಸ್ತುತ ಮೌಖಿಕ ಮಹಾಕಾವ್ಯಗಳ ಅಧ್ಯಯನವನ್ನು ಚಾರಿತ್ರಿಕ ಮತ್ತು ವಿಶ್ಲೇಷಣಾತ್ಮಕ ವಿಧಾನದಲ್ಲಿ ಅಧ್ಯಯಿಸಲಾಗಿದೆ. ಈ ಅಧ್ಯಯನದಿಂದ ಉಂಟಾಗಿರುವ ಪ್ರಶ್ನೆಗಳಿಗೆ ಕಾವ್ಯಗಳ ಮೂಲಕ ವಾಸ್ತವ ಸಮಾಜದ ಮೂಲಕ ಉತ್ತರವನ್ನು ಕಂಡುಕೊಳ್ಳುವ ದೃಷ್ಟಿಯಿಂದ ಅನುಷಂಗಿಕ ಆಕರಗಳು, ವ್ಯಕ್ತಿಗಳನ್ನು ಬಳಸಿಕೊಳ್ಳಲಾಗಿದೆ. ದ್ವಿತೀಯ ಆಕರಗಳು, ಕಾವ್ಯಗಳಿಗೆ ಪೂರಕವಾದ ವಿಮರ್ಶಾ ಬರಹಗಳು, ಕೃತಿಗಳು, ಲೇಖನಗಳು, ಪುಸ್ತಕಗಳು, ಪ್ರಬಂಧಗಳು, ನಿಯತಕಾಲಿಕೆಗಳು ಅಧ್ಯಯನಕ್ಕೆ ಅಗತ್ಯವಾದ ಸಾಮಗ್ರಿಗಳಾಗಿವೆ.

ಮೌಖಿಕ ಕಾವ್ಯಗಳಲ್ಲಿ ಕೆಲವು ಬಾರಿ ಅಸ್ಪಷ್ಟತೆ ಮತ್ತು ಸ್ಥಳ ವ್ಯಕ್ತಿಗಳ ಇರುವಿಕೆಯ ಗೊಂದಲ ಕಂಡುಬಂದಾಗ ಕ್ಷೇತ್ರಕಾರ್ಯದಿಂದ ಮಾಹಿತಿಯನ್ನು ಪಡೆದುಕೊಂಡು ಮಾರ್ಗದರ್ಶಕರು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರೊಂದಿಗೆ ಚರ್ಚಿಸಿ ಸ್ಪಷ್ಟಪಡಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನಗಳ ಮೂಲ ಮತ್ತು ಅನುಷಾಂಗಿಕ ಆಕರಗಳಿಂದ ಮೌಖಿಕ ಕಾವ್ಯಗಳಲ್ಲಿರುವ ಸ್ತ್ರೀ–ಪುರುಷರ ಲಿಂಗ ಸಂಬಂಧ, ಸಾಂಸ್ಕೃತಿಕ ಆಯಾಮಗಳನ್ನು ಚಾರಿತ್ರಿಕ ಮತ್ತು ವಿಮರ್ಶಾತ್ಮಕ ವಿಧಾನಗಳ ಮೂಲಕ ಕಟ್ಟಿಕೊಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

**ಇಲ್ಲಿಯವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಮೌಖಿಕ ಕಾವ್ಯಗಳ ಕುರಿತಂತೆ ನಡೆದಿರುವ, ನಡೆಸುತ್ತಿರುವ ಅಧ್ಯಯನಕ್ಕೆ ಸುಮಾರು ಮೂವತ್ತು ವರ್ಷಗಳ ಹಿಂದಿನ ಅಧ್ಯಯನಗಳ ಹಿನ್ನೆಲೆ ಇದೆ, ಇದುವರೆಗೂ ಮೌಖಿಕ ಮಹಾಕಾವ್ಯಗಳ ಕುರಿತು ಸಂಶೋಧನೆಗಳು, ಅಧ್ಯಯನಗಳನ್ನು ಭಾಷಾಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಅನೇಕರು ಕೈಗೊಂಡಿರುವುದನ್ನು ಗಮನಿಸಬಹುದಾಗಿದೆ.

ಮೌಖಿಕ ಮಹಾಕಾವ್ಯಗಳ ಬಗ್ಗೆ ಪ್ರಥಮಬಾರಿಗೆ ತನ್ನದೇ ಪ್ರಬಂಧವನ್ನು ಮಂಡಿಸಿದವರೆಂದರೆ ಶ್ರೀ ಮತಿಘಟ್ಟ ಕೃಷ್ಣಮೂರ್ತಿಯವರು, ಇವರು ಮೌಖಿಕವಾಗಿದ್ದ ಸವದತ್ತಿ ಎಲ್ಲಮ್ಮನ ಕಾವ್ಯವನ್ನು ಮೌಖಿಕದಿಂದ ಬರಹ ರೂಪಕ್ಕೆ ತಂದವರು. ನಂತರ ಮೌಖಿಕ ಕಾವ್ಯಗಳ ಪರಂಪರೆಗಳ ಅಧ್ಯಯನಕ್ಕೆ ನಾಂದಿ ಹಾಡಿದರು. ಜೀ.ಶಂ.ಪ ರವರು ಇವರು ಮೌಖಿಕ ಕಾವ್ಯಗಳಾದ ಮಲೆಮಾದೇಶ್ವರ, ಮಂಟೇಸ್ವಾಮಿ, ಮೈಲಾರ, ಜುಂಜಪ್ಪ, ಎಲ್ಲಮ್ಮ ಕಾವ್ಯಗಳನ್ನು ಸಂಗ್ರಹಿಸಿ ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಸಂಪ್ರದಾಯಗಳೆಂದು ಗುರಿತಿಸಿದರು. ಈ ಆಧಾರದ ಮೇಲೆ ಅನೇಕ ಪಠ್ಯಗಳ ಸಂಗ್ರಹಣೆ ಕಾರ್ಯ ನಡೆಯಿತು.

**ತೀ.ನಂ ಶಂಕರನಾರಾಯಣರವರು "ಕಾಡುಗೊಲ್ಲರ ನಂಬಿಕೆ ಮತ್ತು ಸಂಪ್ರದಾಯಗಳು"** ಎಂಬ ವಿಷಯದ ಮೇಲೆ ಸಂಶೋಧನೆ ಕೈಗೊಂಡು ಜುಂಜಪ್ಪನ ಪುರಾಣವನ್ನು ಗದ್ಯರೂಪದಲ್ಲಿ ಸಂಗ್ರಹಿಸಿದರು, ಜೀ.ಶಂ ಪರಮಶಿವಯ್ಯರವರು ಮತ್ತೆ ಮಂಟೇಸ್ವಾಮಿ ಕಾವ್ಯವನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ, ಹಾಗೂ

ಪಿ.ಕೆ.ರಾಜಶೇಖರ್‌ರವರು ಮಾದೇಶ್ವರ ಕಾವ್ಯವನ್ನು ವಿವಿಧ ಗಾಯಕರು ಹಾಡಿದ ಪಠ್ಯದಲ್ಲಿ ಸಂಗ್ರಹಿಸಿ ಎರಡು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ, ಇವೆರಡೂ ಸಂಪುಟಗಳು ಮೌಖಿಕ ಕಾವ್ಯಗಳು ಅಧ್ಯಯನದ ಸಮಯದಲ್ಲಿ ಪ್ರಮುಖ ಸ್ಥಾನವಿದೆ. ನಂತರ ಎಂ.ಬಿ.ನೇಗಿನಾಳ ಮತ್ತು ಚಕ್ಕರೆ ಶಿವಶಂಕರ ರವರು ಸಂಗ್ರಹಿಸಿದ ಮೈಲಾರಲಿಂಗನ ಕಾವ್ಯಗಳು ಮೈಲಾರನ ಆಚರಣೆಯ ಬಗ್ಗೆ ನೆಲೆಯ ಬಗ್ಗೆ ಮಹತ್ವದ ದಾಖಲೆಗಳಾಗಿವೆ.

ನಂತರದ ಅಧ್ಯಯನಗಳು ಕಾವ್ಯಗಳ ಬಗ್ಗೆ ತೀವ್ರಗತಿಯಲ್ಲಿ ನಡೆದವು. ಕಾವ್ಯಗಳನ್ನು ಗುರುತಿಸಿ ಪಠ್ಯರೂಪಕ್ಕೆ ತರುವ ಪರಂಪರೆ ಆದಷ್ಟು ೧೯೯೦ರ ದಶಕದ ನಂತರ ಬಂದಿದ್ದರಿಂದ ಶಿಷ್ಟ ವಿದ್ವಾಂಸರು ಮೌಖಿಕ ಕಾವ್ಯಗಳ ಸಂಗ್ರಹಣೆಯಲ್ಲಿ ತೊಡಗಿದರು. ಅವರಲ್ಲಿ ಬಿ.ಎಸ್.ಸ್ವಾಮಿಯವರು ಸಂಗ್ರಹಿಸಿದ ಮಲೆಯ ಮದೇಶ್ವರ ಕಾವ್ಯವು ಮಲೆಯ ಮಾದೇಶ್ವರನ ಐತಿಹಾಸಿಕತೆ, ಸಾಂಸ್ಕೃತಿಕ ನೆಲೆಗಳು, ಮೊದಲಾದವುಗಳನ್ನು ಒಳಗೊಂಡಿದೆ. ಈ ಕೃತಿಯ ನಂತರ ತೀ.ನಂ.ಶಂಕರನಾರಾಯಣರವರು R.R.Cಯ ಸಹಯೋಗದಲ್ಲಿ The Epic of Junjuppa, Text and performance ಎನ್ನುವ ಯೋಜನೆ ಕೈಗೊಂಡು ಜುಂಜಪ್ಪನ ಕಾವ್ಯವನ್ನು ಅಧ್ಯಯನ ನಡೆಸಿದ್ದಾರೆ. ಈ ಅಧ್ಯಯನವು ಮೇಲಿನ ಶೀರ್ಷಿಕೆಯಲ್ಲಿ ೧೯೯೮ರಲ್ಲಿ ಪ್ರಕಟಗೊಂಡಿದೆ. ಪಿ.ಬಿ.ಶಿವಣ್ಣ ಅವರು ಕಾಡುಗೊಲ್ಲರ ಇಬ್ಬರೂ ಸಾಂಸ್ಕೃತಿಕ ವೀರರು ಪುಸ್ತಕದಲ್ಲಿ ಎತ್ತಪ್ಪ ಮತ್ತು ಜುಂಜಪ್ಪ ಅವರ ಕಾವ್ಯಗಳನ್ನು, ಪುರಾಣಗಳನ್ನು ಸಂಗ್ರಹಿಸಿದ್ದಾರೆ.

೧೯೭೦ ರಿಂದ ೧೯೯೫ ವರೆಗೆ ಕೆಲವೆ ವಿದ್ವಾಂಸರು ಕೆಲ ಮೌಖಿಕ ಕಾವ್ಯಗಳನ್ನು ಲೇಖನಗಳಾಗಿ, ಸಂಚಿಕೆಯಾಗಿ, ಕಿರು ಪುಸ್ತಿಕೆಯಲ್ಲಿ ಪ್ರಕಟಪಡಿಸುತ್ತಾ ಹೋದರು. ೧೯೯೫ರ ನಂತರ ಮೌಖಿಕ ಕಾವ್ಯಗಳ ಸಂಗ್ರಹಣೆ ಪ್ರಕಟಣೆ ಹಾಗೂ ಅವುಗಳ ಅಧ್ಯಯನ ವೇಗವಾಗಿ ಸಾಗಿತು. ಈ ಹಿನ್ನೆಲೆಯಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗ, ಬುಡಕಟ್ಟು ವಿಭಾಗ, ಸಾಹಿತ್ಯ ವಿಭಾಗಗಳು ಮೌಖಿಕ ಕಾವ್ಯಗಳ ಸಂಗ್ರಹ ಹಾಗೂ ಅಧ್ಯಯನವನ್ನು ಕೈಗೊಂಡ ಸಂದರ್ಭದಲ್ಲಿ ಹಿ.ಚಿ.ಬೋರಲಿಂಗಯ್ಯ, ಕೇಶವನ್ ಪ್ರಸಾದ್.ಕೆ, ಕೆ.ಎಂ.ಮೈತ್ರಿ ಚಲುವರಾಜು, ಗಂಗಾಧರ ದೈವಜ್ಞ, ಎ.ಎಸ್. ಪ್ರಭಾಕರ್, ಮಂಜುನಾಥ ಬೇವಿನಕಟ್ಟೆ ನಾಗೇಶ್.ಹೆಚ್.ವಿ, ಸ.ಚಿ.ರಮೇಶ್, ರಹಮತ್ ತರೀಕೆರೆ, ವೆಂಕಟೇಶ್ ಇಂದ್ವಾಡಿ, ವಿರೂಪಾಕ್ಷಿ ಪೂಜಾರಹಳ್ಳಿ, ಮೊದಲಾದ ವಿದ್ವಾಂಸರು ಮೌಖಿಕ ಕಾವ್ಯಗಳ ಸಂಗ್ರಹ ಮತ್ತು ಅವುಗಳ ಕುರಿತ ಅಧ್ಯಯನವು ಉಲ್ಲೇಖಾರ್ಹವಾಗಿದೆ. ಇವರೆಲ್ಲರ ಪರಿಶ್ರಮದಿಂದಾಗಿ ಸುಮಾರು ೧೫ಕ್ಕೂ ಹೆಚ್ಚಿನ ಮೌಖಿಕ ಮಹಾಕಾವ್ಯಗಳು ಪ್ರಕಟಗೊಂಡವು, ಅವುಗಳೆಂದರೆ ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಮಾಳಿಂಗರಾಯ, ಕುಮಾರರಾಮ, ಮ್ಯಾಸಬೇಡರ ಕಥೆಗಳು, ಕೃಷ್ಣಗೊಲ್ಲರ ಕಾವ್ಯ, ಸ್ಯಾಸಿ ಚೆನ್ನಮ್ಮ, ಕಾಳಿಂಗರಾಯನ ಕಾವ್ಯ, ಗಾದ್ರಿ ಪಾಲನಾಯಕ ಕಾವ್ಯ, ಜಗಳೂರು ಪಾಪನಾಯಕ, ಬೋರೇದೇವರ ಕಾವ್ಯ, ಮಾರಮ್ಮನ ಕಾವ್ಯ ಮೊದಲಾದವರು ಸಂಗ್ರಹಿಸಿರುವ ಮೌಖಿಕ ಕಾವ್ಯಗಳ ಸ್ವರೂಪ ಪರಿಕಲ್ಪನೆ, ಸಂಸ್ಕೃತಿಯ ದೃಷ್ಟಿಯಿಂದ

ಈ ಕಾವ್ಯಗಳು ಅನನ್ಯವಾಗಿವೆ. ಇವುಗಳಲ್ಲಿ ಏಕವ್ಯಕ್ತಿ ಹಾಡಿದ ಕಾವ್ಯಗಳು ಇವೆ. ಒಟ್ಟಾರೆ ಸಮೂಹದಿಂದ ಹಾಡಿದ ಮಹಾಕಾವ್ಯಗಳು ಒಳಗೊಂಡಿವೆ.

*ಡಾ. ಹಿ. ಚಿ. ಬೋರಲಿಂಗಯ್ಯರವರ ಬುಡಕಟ್ಟು ದೈವಾರಾಧನೆ* "ಕೃತಿಯು ಬುಡಕಟ್ಟು ದೈವಗಳ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಈ ಪುಸ್ತಕವು ಸಹಕಾರಿಯಾಗಿದೆ. ಬುಡಕಟ್ಟುಗಳಲ್ಲಿ ಆತ್ಮಗಳನ್ನು ದೇವರಾಗಿ ಕಾಣುವ, ನಿಸರ್ಗವನ್ನು ಪೂಜಿಸುವ, ದೇವರನ್ನು ತಾವು ಅವಾಹಿಸಿಕೊಳ್ಳುವ ವಿವಿಧ ಆಚರಣೆಗಳು ಮತ್ತು ಅವುಗಳ ನಂಬಿಕೆಗಳ ಹಿಂದಿರುವ ಸಮುದಾಯದ ಆದಿಮ ಲಕ್ಷಣಗಳನ್ನು ಕುರಿತು ವಿವರವಾದ ಮಾಹಿತಿಯನ್ನು ನೀಡುತ್ತಾರೆ. ಬುಡಕಟ್ಟು ದೇವರುಗಳು ಶಿಷ್ಟ ದೈವಗಳಿಗಿಂತ ಹೇಗೆ ಭಿನ್ನ ಮತ್ತು ಆಪ್ತ ಎಂಬುದರ ಕುರಿತ ಮಾಹಿತಿಯನ್ನು ನೀಡುತ್ತದೆ. ಫಣಿ ಎರವರ ದೈವಗಳ ಪರಿಚಯವನ್ನು ಮಾಡುವುದರೊಂದಿಗೆ ಅದರ ಆಚರಣೆಯ ವಿಧಿ ವಿಧಾನಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುತ್ತದೆ. ಹಾಗೆಯೇ ಸೋಲಿಗರ ಸಂಕಮ್ಮನ ಕಥೆಯಲ್ಲಿ ಸ್ತ್ರೀ ಸ್ವಾಭಿಮಾನದ ಸಂಕೇತವಾಗಿ ಸಂಕಮ್ಮ ಕಂಡು ಬರುತ್ತಾಳೆ. ವೈವಾಹಿಕ ಸಂಬಂಧದ ಬಂಧನವನ್ನು ಧಿಕ್ಕರಿಸುವುದರೊಂದಿಗೆ ಮಾದೇಶ್ವರನಿಂದ ಕಾರಯ್ಯ ಮತ್ತು ಬಿಲ್ಲಯ್ಯರೆಂಬ ಸೋಲಿಗೆ ಮೂಲಪುರುಷರಿಗೆ ಜನ್ಮ ನೀಡುತ್ತಾಳೆ. ಆದ್ದರಿಂದ ಸೋಲಿಗರ ಮಾತೃದೇವತೆಯಾಗಿ ಪೂಜೆಗೊಳಪಡುತ್ತಾಳೆ. ಶಿಷ್ಟ ದೈವಕ್ಕೆ ಪ್ರತಿರೋಧವಾಗಿ ಪಾತಿವೃತ್ಯ ಶೀಲದ ಕಲ್ಪನೆಯ ಹೊರತಾಗಿ ಪುರುಷಾಧಿಕಾರವನ್ನು ಧಿಕ್ಕರಿಸಿ ದೈವತ್ವಕ್ಕೇರುವ ಸಂಕಮ್ಮನ ಕಥೆಯನ್ನು ಈ ಕೃತಿಯು ವಿಭಿನ್ನವಾಗಿ ಪರಿಚಯಿಸುತ್ತದೆ. ಮಲೆಮಾದೇಶ್ವರ ಕಾವ್ಯದ ಸೋಲಿಗರ ಸಂಕಮ್ಮನ ಸಾಲು ಮಾತೃ ದೇವಾತಾರಾಧನೆಯ ಆಚರಣೆಯ ಹಿಂದೆ ಬುಡಕಟ್ಟು ಮಹಿಳೆಗಿರುವ ಬದುಕಿನ ಸ್ವಾತಂತ್ರ್ಯದ ಬಗೆಗೆ ಹೆಚ್ಚಿನ ಬೆಳಕು ಚೆಲ್ಲುತ್ತದೆ. ಹಾಗೆಯೇ ಬಿಳಿಗಿರಿರಂಗ ಕುಸುಮಾಲೆಯ ಪ್ರಣಯ ಪ್ರಸಂಗವನ್ನು ವಿವರಿಸುತ್ತಾರೆ.

ಜನಪದ ದೈವಗಳು ಮತ್ತು ಅವುಗಳ ಆಚರಣಾ ವಿಧಾನಗಳ ಹಿಂದಿನ ನಂಬಿಕೆಗಳು ಸಂಶೋಧಕರಿಗೆ ಅತ್ಯಮೂಲ್ಯ ಮಾಹಿತಿಯನ್ನು ಒದಗಿಸುತ್ತದೆ. ಬುಡಕಟ್ಟುಗಳು ಮುಖ್ಯವಾಗಿ ಮಾತೃ ದೇವತಾರಾಧಕರು. ಆದಿಮ ಚಹರೆಯ ಈ ನಂಬಿಕೆಗಳು, ಆಚರಣೆಗಳು ಪ್ರತಿಯೊಂದು ಜಾತಿ, ಸಮುದಾಯದಲ್ಲಿ ವಿಭಿನ್ನ ಹಾಗು ವಿಶಿಷ್ಟವಾಗಿದ್ದು ಇಲ್ಲಿ ಹೆಣ್ಣು ವಿಶೇಷ ಸ್ಥಾನಮಾನವನ್ನು ಹೊಂದಿದ್ದಾಳೆ. ಈ ಎಲ್ಲಾ ವಿಚಾರಗಳು ಬುಡಕಟ್ಟು ದೈವಗಳನ್ನು ಅರ್ಥಮಾಡಿಕೊಳ್ಳಲು ಬೇಕಾದ ಅತ್ಯಮೂಲ್ಯವಾದ ಪ್ರಾಥಮಿಕ ಮಾಹಿತಿಯನ್ನು ಒದಗಿಸುತ್ತದೆ".

*ಡಾ. ಎ. ಎಸ್. ಪ್ರಭಾಕರ್‌ರವರ "ಆದಿವಾಸಿ ಅಖ್ಯಾನ"* "ಕೃತಿಯು ಬುಡಕಟ್ಟು ಸಮುದಾಯಗಳ ಕುರಿತ ವಿವಿಧ ವಿದ್ವಾಂಸರ ಲೇಖನಗಳ ಸಂಗ್ರಹವಾಗಿದೆ. ಸಂಶೋಧನಾ ವಿದ್ಯಾರ್ಥಿಗಳಿಗೆ ಬುಡಕಟ್ಟು ಸಮಾಜವನ್ನು ಅರ್ಥಮಾಡಿಕೊಳ್ಳಲು ಇದು ಬಹಳ ಉಪಯುಕ್ತವಾದ ಕೃತಿಯಾಗಿದೆ. ಭಾರತದಲ್ಲಿ ಪ್ರಮುಖವಾಗಿ ಬುಡಕಟ್ಟು ಎಂದು ಗುರುತಿಸಿರುವ ಸಮುದಾಯಗಳನ್ನು ಕುರಿತು ಅಧ್ಯಯನ ನಡೆಸಿರುವ ಕೆಲವು ಅಧ್ಯಯನಕಾರರ ಲೇಖನಗಳನ್ನು ಈ ಕೃತಿ ಒಳಗೊಂಡಿದೆ. ಪ್ರಸ್ತುತ ಕೃಅತಿಯು ವಸಾಹತುಶಾಹಿ

ಕಾಲಘಟ್ಟದಲ್ಲಿ ಪಾಶ್ಚಾತ್ಯ ಮಾನವ ಶಾಸ್ತ್ರೀಯ ಅಧ್ಯಯನದ ಮಾದರಿಯಲ್ಲಿ ನಡೆದ ಭಾರತೀಯ ಬುಡಕಟ್ಟುಗಳ ಅಧ್ಯಯನವನ್ನು ಕುರಿತಂತೆ ಭಾರತೀಯ ವಿದ್ವಾಂಸರ ಅಭಿಪ್ರಾಯಗಳ ಸಂಗ್ರಹವಾಗಿದೆ. ಬುಡಕಟ್ಟು ಅಧ್ಯಯನಕ್ಕೆ ಸಂಬಂದಿಸಿದಂತೆ ವಿಭಿನ್ನ ಒಳನೋಟಗಳನ್ನು ನಮ್ಮೆದುರಿಗಿಡುತ್ತದೆ. ವಿದೇಶಗಳಲ್ಲಿ ತಳಸಮುದಾಯಗಳನ್ನು ಕುರಿತ ಅಧ್ಯಯನ ನಡೆದು ಬಂದ ದಾರಿ ಮತ್ತು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಅವುಗಳನ್ನು ನೋಡಬೇಕಾದ ರೀತಿಯನ್ನು ನಮಗೆ ಪರಿಚಯಿಸುತ್ತದೆ, ಬುಡಕಟ್ಟು ಮಹಾಕಾವ್ಯಗಳು, ಮೌಖಿಕ ಪರಂಪರೆ, ಬುಡಕಟ್ಟು ನಂಬಿಕೆಗಳು, ಬುಡಕಟ್ಟು ಪರಿಕಲ್ಪನೆ, ಬುಡಕಟ್ಟು ನ್ಯಾಯವ್ಯವಸ್ಥೆ, ವೈದ್ಯ ಪದ್ಧತಿ, ಚಿತ್ರಕಲೆ, ಪರಿಸರ ಪ್ರಜ್ಞೆ, ಬುಡಕಟ್ಟು ಮಹಿಳೆ, ಬುಡಕಟ್ಟು ಹೋರಾಟಗಳು, ಸರಕಾರದ ಅಭಿವೃದ್ಧಿ ಯೋಜನೆಗಳು ಈ ಮುಂತಾದ ಹಲವಾರು ವಿಷಯಗಳ ಕುರಿತ ಆಳವಾದ ಮಾಹಿತಿಯನ್ನು ಹೊಂದಿರುವ ಈ ಕೃತಿಯು ಓದುಗರನ್ನು ಚಿಂತನೆಗೆ ಹಚ್ಚುವ ಮೂಲಕ ಬುಡಕಟ್ಟು ಸಮುದಾಯಗಳನ್ನು ಹಾಗೆಯೇ ಈ ಸಮುದಾಯಗಳ ಅಧ್ಯಯನವನ್ನು ಸೂಕ್ಷ್ಮವಾಗಿ ಮತ್ತು ಅತ್ಯಂತ ಗಂಭೀರವಾಗಿ ನೋಡಬೇಕಾದ ಅನಿವಾರ್ಯತೆಯನ್ನು ಮತ್ತು ಅಗತ್ಯವನ್ನು ಅತ್ಯಂತ ವೈಜ್ಞಾನಿಕ ಹಿನ್ನಲೆಯೊಂದಿಗೆ ನಮ್ಮ ಮುಂದಿಡುತ್ತದೆ.

ಬುಡಕಟ್ಟುಗಳನ್ನು ಕುರಿತು ಅತ್ಯಂತ ಆಸ್ಥೆಯಿಂದ ಅಧ್ಯಯನ ನಡೆಸಿ, ಆಳವಾದ ಅನುಭವದಿಂದ ಬರೆದಿರುವ ಪ್ರತಿಯೊಬ್ಬ ಲೇಖಕರ ಪ್ರತಿಯೊಂದು ಲೇಖನವು ಸಮುದಾಯ ಅಧ್ಯಯನ ನಡೆಸುವ ವಿದ್ಯಾರ್ಥಿಗಳಿಗೆ ಅತ್ಯುತ್ತಮ ಮಾರ್ಗದರ್ಶನವಾಗಿದೆ. ವಿಚಾರಗಳ ರಚನೆಯ ಮೂಲಭೂತ ತೊಡಕುಗಳು, ಸಾಂಸ್ಕೃತಿಕ ವೀರರು, ಬೇಟೆ, ಪಶುಪಾಲನೆ ಮೊದಲಾದ ಕುಲ ಕಸುಬುಗಳ ಚಾರಿತ್ರಿಕ ಹಿನ್ನೆಲೆಯನ್ನು ಈ ಕೃತಿ ನಮಗೆ ಪರಿಚಯಿಸುತ್ತದೆ. ಮತ್ತು ಈ ಸಾಂಸ್ಕೃತಿಕ ವೀರರನ್ನು ಕುರಿತಂತೆ ತಳ ಸಮುದಾಯದ ಕಲಾವಿದರು ತಮ್ಮ ಕಲೆಯ ಮೂಲಕ ಅಭಿವ್ಯಕ್ತಿಯಿಸುವ ರೀತಿಯನ್ನು ನಮಗೆ ಪರಿಚಯಿಸುತ್ತದೆ. ಪ್ರಸ್ತುತ ಕಾಲಮಾನದಲ್ಲಿ ಈ ಸಾಂಸ್ಕೃತಿಕ ನಾಯಕರು ಹಾಗು ಸಮುದಾಯವು ಸಾಮಾಜಿಕ ಆರ್ಥಿಕ, ರಾಜಕೀಯ ಸಂದರ್ಭದಲ್ಲಿ ಬಳಕೆಯಾಗುತ್ತಿರುವ ಹಾಗು ಬಳಸಲ್ಪಡುವ ಚಿತ್ರಣವನ್ನು ಚರ್ಚಿಸಿದ್ದಾರೆ. ಪ್ರಸ್ತುತ ಕೃತಿಯು ಅಧ್ಯಯನಕಾರರಿಗೆ ಸಂಶೋಧನೆಯ ವಿವಿಧ ಆಯಾಮಗಳನ್ನು ಪರಿಚಯಿಸಿ ವಿಸ್ತೃತವಾದ ಜ್ಞಾನವನ್ನು ನೀಡುತ್ತದೆ".

***ಡಾ. ಎಂ. ಎಸ್. ಮುತ್ತಯ್ಯರವರ 'ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ'*** "ಕೃತಿಯು ಮೌಖಿಕ ಸಾಹಿತ್ಯವನ್ನು ಕುರಿತು ಅಧ್ಯಯನ ನಡೆಸುತ್ತಿರುವ ಸಂಶೋಧಕರಿಗೆ ಹೊಸ ಕಣ್ಣೋಟವನ್ನು ನೀಡುತ್ತದೆ. ಮೌಖಿಕ ಮಹಾಕಾವ್ಯಗಳನ್ನು ಕುರಿತು ಅರ್ಥೈಸಿಕೊಳ್ಳಬೇಕಾದ ಬಗೆಯನ್ನು ವಿವಿಧ ಆಯಾಮಗಳ ಮೂಲಕ ಲೇಖಕರು ಪರಿಚಯಿಸಿದ್ದಾರೆ. ಮೌಖಿಕ ಸಾಹಿತ್ಯದ ಪರಿಕಲ್ಪನೆಗಳು, ಸೈದ್ಧಾಂತಿಕ ನೆಲೆಗಳು, ಪುರಾಣಗಳು ಎಂಬ ವಿಷಯಗಳ ಕುರಿತ ಹಲವು ವ್ಯಾಖ್ಯಾನಗಳು ನಮಗೆ ಹೊಸ ರೀತಿಯಲ್ಲಿ ಅರ್ಥ ಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಶಿಷ್ಟ ಮತ್ತು ಜನಪದ ಪುರಾಣಗಳ ಸೂಕ್ಷ್ಮತೆ, ಪುರಾಣಗಳು ಮತ್ತು ಚರಿತ್ರೆ. ಸಾಂಸ್ಕೃತಿಕ ವೀರರು ದೈವೀಕರಣಗೊಳ್ಳುವ ಪ್ರಕ್ರಿಯೆ,

ಮಾಟ ಮಂತ್ರ, ಭಿಕ್ಷೆ, ಭಂಗಿ ಈ ಎಲ್ಲಾ ವಿಚಾರಗಳನ್ನು ಚರ್ಚಿಸುತ್ತಾ ಕರ್ನಾಟಕದ ಸಾಂಸ್ಕೃತಿಕ ಮಹಾಕಾವ್ಯಗಳ ನಾಯಕರುಗಳಾದ ಮಂಟೇಸ್ವಾಮಿ, ಮಾದೇಶ್ವರ, ಜುಂಜಪ್ಪ, ಮೈಲಾರಲಿಂಗನನ್ನು ಚರ್ಚೆಗೆ ಒಳಪಡಿಸುತ್ತಾರೆ.

ಈ ಸಾಂಸ್ಕೃತಿಕ ವೀರರ ಮುಖ್ಯ ಉದ್ದೇಶ ಸಾಮಾಜಿಕ ನ್ಯಾಯ ಮತ್ತು ಸಮಾನತೆ, ಮತ್ತು ಜಾತಿಗಳ ಹೆಸರಿನಲ್ಲಿ ಉಚ್ಚ-ನೀಚ ತಾರತಮ್ಯದಿಂದ ಕಲುಷಿತಗೊಂಡಿರುವ ಸಮಾಜದ ಸ್ವಾಸ್ಥ್ಯವನ್ನು ಸ್ಥಿರಗೊಳಿಸುವುದು. ಹಾಗಾಗಿ ಪ್ರಭುತ್ವದ ನಾಶ ಮತ್ತು ಪ್ರತಿನಿರ್ಮಾಣ ಎಂಬ ಲೇಖನದ ಅಡಿಯಲ್ಲಿ ಅಂದಿನ ಕಾಲಘಟ್ಟದ ಸಾಮಾಜಿಕ ಬದುಕಲ್ಲಿ ಪ್ರಭುತ್ವದ ಪಾತ್ರ ಮತ್ತು ಅದಕ್ಕೆ ಪ್ರತಿರೋಧವಾಗಿ ಪ್ರತಿ ನಿರ್ಮಾಣ ಸಾಧ್ಯವಾದ ಬಗೆಯನ್ನು ಚರ್ಚಿಸುತ್ತಾರೆ.

ಜನಪದ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸ್ತ್ರೀವಾದಕ್ಕೆ ಭಿನ್ನವಾದ ಪ್ರತಿ ಸಾಂಸ್ಕೃತಿಕ ಸ್ತ್ರೀವಾದದ ಚರ್ಚೆಯನ್ನ ಪ್ರಮುಖ ಜನಪದರ ಗ್ರಾಮದೇವರುಗಳು ಗೌರಸಂದ್ರ ಮಾರಿ, ಕಾಳಮ್ಮರ ಮೂಲಕ ಮುಟ್ಟು ಮೈಲಿಗೆ, ಶೀಲ, ಪಾವಿತ್ರ್ಯತೆ ಬಂಜೆತನ, ವಿಧವೆ ಈ ಎಲ್ಲಾ ವೈಯುಕ್ತಿಕ ಆರೋಪಗಳನ್ನು ಈ ಜನಪದ ಸ್ತ್ರೀ ಎದುರಿಸಿದ ರೀತಿಯನ್ನು ಅತ್ಯಂತ ಸೂಕ್ಷ್ಮ ಸಂವೇದನಗಳ ಮೂಲಕ ನಮ್ಮ ಮುಂದಿಟ್ಟಿದ್ದಾರೆ. ಒಟ್ಟಿನಲ್ಲಿ ಈ ಕೃತಿಯು ಒಂದು ಅತ್ಯುತ್ತಮವಾದ ಮಾಹಿತಿಯ ಅಗರವಾಗಿದೆ".

***ಎಂ. ಚಂದ್ರ ಪೂಜಾರಿಯವರ ಸಮಾಜ ಸಂಶೋಧನೆ*** "ಎಂಬ ಪುಸ್ತಕವು ಸಂಶೋಧಕರಿಗೆ ಸಂಶೋಧನೆಗೆ ತೊಡಗುವ ಮುನ್ನ ತಿಳಿದಿರಬೇಕಾದ ಜ್ಞಾನವನ್ನು ಮಾರ್ಗದರ್ಶನವನ್ನು ನೀಡುತ್ತದೆ. ಸಂಶೋಧನೆ ಕೇವಲ ಯಾಂತ್ರಿಕ ಎಂದಾಗದೆ ಅದು ಕೊಡುಕೊಳ್ಳುವಿಕೆಯ ಭಾಗವಾಗಬೇಕು. ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯವನ್ನು ವಸ್ತು ಎಂಬಂರೆ ಪರಿಗಣಿಸುವ ನಮ್ಮ ಆಲೋಛನೆಗಳು ಬದಲಾಗಬೇಕು. ಸಮಾಜದಲ್ಲಿ ನಡೆಯುವ ಸಂಶೋದನೆಯು ಸಮಾಜಕ್ಕೆ ಕೊಡುಗೆಯಾಗಬೇಕು ಎಂಬ ಆಶಯವನ್ನು ಮೂಡಿಸುತ್ತದೆ, ಸಂಶೋಧಕನಿಗಿಂಬೇಕಾದ ಗುಣಗಳು, ಪೂರ್ವತಯಾರಿ, ಸಂಶೋದಕನ ಜವಾಬ್ಧಾರಿಗಳನ್ನು ತಿಳಿಸಿಕೊಡುತ್ತದೆ".

***ಡಿ. ಆರ್. ನಾಗರಾಜರವರ ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ,*** ಕೃತಿಯಲ್ಲಿ ಶೂನ್ಯ ಸಂಪಾದನೆಗಳು ಮತ್ತು ಮಂಟೇಸ್ವಾಮಿ ಕಾವ್ಯವನ್ನು ಅಂತರ್ಪಠ್ಯೀಯತೆಯ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ನಿಂಗಪ್ಪ ಮುದೇನೂರು ರವರು ೨೦೦೪ರಲ್ಲಿ 'ಜನಪದ ಮಹಾಕಾವ್ಯಗಳು ಸಾಂಸ್ಕೃತಿಕ ವೀರರು' ಎಂಬ ಪುಸ್ತಕದಲ್ಲಿ ಮಾದೇಶ್ವರ, ಮುಂಟೇಸ್ವಾಮಿ, ಮೈಲಾರ, ಜುಂಜಪ್ಪರ ಕುರಿತ ಮೌಖಿಕ ಕಾವ್ಯ ಹಿನ್ನೆಲೆಯನ್ನು ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ರಾಜಕೀಯದ ಹಿನ್ನೆಲೆಯಲ್ಲಿ ಅನಾವರಣಗೊಳಿಸಿದ್ದಾರೆ.

***ಸಿ. ಎನ್. ರಾಮಚಂದ್ರನ್‌ರವರ ಹೊಸಮಡಿಯ ಮೇಲೆ ಚದುರಂಗ*** ಎಂಬ ಪುಸ್ತಕದಲ್ಲಿ ಮೌಖಿಕ ಕಾವ್ಯಗಳನ್ನು ಪರಿಚಯಾತ್ಮಕವಾಗಿ ವಿಶ್ಲೇಷಿಸಿದ್ದಾರೆ, ಹಾಗೂ ಡಾ.ಎ.ಎಸ್.ಪ್ರಭಾಕರ್ ಅವರ ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಆದಿವಾಸಿ ಆಖ್ಯಾನ ಮೌಖಿಕ ಕಾವ್ಯಗಳ ಜೀವನ ವಿಧಾನದ ಬಗ್ಗೆ ಬೆಳಕು ಚೆಲ್ಲುತ್ತವೆ. ವೆಂಕಟೇಶ್ ಇಂದ್ವಾಡಿಯವರ ಮಂಟೇಸ್ವಾಮಿ ಕಾವ್ಯ ಸಾಂಸ್ಕೃತಿಕ ಮುಖಾಮುಖಿ,

ಮಲೆಮಾದೇಶ್ವರ ಕಾವ್ಯ ಸಾಂಸ್ಕೃತಿಕ ಮುಖಾಮುಖಿ ಪುಸ್ತಕಗಳು ಈ ನಾಯಕರ ಸಾಂಸ್ಕೃತಿಕ ವೀರನಾಗಿ ಅನಾವರಣಗೊಂಡದ್ದನ್ನು ನಿರೂಪಿಸಿದ್ದಾರೆ. ಎಂ.ಎಸ್.ಮುತ್ತಯ್ಯರವರು ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ ಪುಸ್ತಕವು ಸಾಂಸ್ಕೃತಿಕ ನಾಯಕರು ಹಾಗೂ ಮಹಿಳಾದೃಷ್ಟಿ ಕೋನಗಳನ್ನು ಪ್ರತಿರೋಧದ ಹಿನ್ನೆಲೆಯಲ್ಲಿ ನಿರೂಪಸಿದ್ದಾರೆ.

ಅಲ್ಲದೆ ಗಾಯತ್ರಿ ನಾವಡರವರ ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು,

ಭಾರತೀಯ ಸ್ತ್ರೀವಾದ ಒಂದು ಸಂಕಥನ.

ಶಂಕರನಪುರ ಮಹದೇವ ಅವರ – ಮಂಟೇಸ್ವಾಮಿ

ಹುಲಿಕುಂಟೇ ಮೂರ್ತಿ ಅವರ – ಮಂಟೇಸ್ವಾಮಿ ಪರಂಪರೆ ಕುಲಮೀಮಾಂಸೆ

ಪ್ರಕಾಶ್ ಮಂಟೇದರ – ಮಂಟೇದಯ್ಯನ ಸಾಂಸ್ಕೃತಿಕ ಚರಿತ್ರೆ, ಮಲೆಮಹದೇಶ್ವರನ ಸಾಂಸ್ಕೃತಿಕ ಚರಿತ್ರೆ

ಡಾ.ಸಿ.ಮಹದೇವ ಅವರ – ಮೈಲಾರ

ಸಿ.ಟಿ.ಗುರುಪ್ರಸಾದ್ ರವರ – ನೀಲಗಾರರು ಸಂಕಥನ

ಹಿ.ಚಿ.ಬೋರಲಿಂಗಯ್ಯ ಅವರ ದೇಸಿ ಕನ್ನಡ ಪರಂಪರೆ

ಕರ್ನಾಟಕ ಜನಪದ ಮಹಾಕಾವ್ಯ ಮೀಮಾಂಸೆ ಮತ್ತು ತಾತ್ವಿಕತೆ

***ಎಫ್.ಟಿ. ಹಳ್ಳಿಕೇರಿಯವರ ಮೈಲಾರಲಿಂಗ ಪರಂಪರೆ*** ಅನೇಕ ಪುಸ್ತಕಗಳು ೨೦೦೦ ದಿಂದ ಈಚೆಗೆ ಕನ್ನಡ ವಿಶ್ವವಿದ್ಯಾಲಯದ ಮೌಖಿಕ ಕಾವ್ಯಗಳ ಕುರಿತ ಸುಧೀರ್ಘವಾದ ಅಧ್ಯಯನವನ್ನು ನಡೆಸಿದರು. ಇವುಗಳಲ್ಲಿ ಮೌಖಿಕ ನಾಯಕರ ಹುಟ್ಟು ಜೀವನ ಸಂಘರ್ಷ, ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಚಾರಗಳು, ಪಂಗಡಗಳ ರಾಜಕೀಯತೆ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ಎಲ್ಲಾ ಅಧ್ಯಯನಗಳು ಮಲೆಮಾದೇಶ್ವರನ ಮಂಟೇಸ್ವಾಮಿ, ಮೈಲಾರಲಿಂಗ, ಜುಂಜಪ್ಪರ ಕಥೆಗಳ ಮೇಲೆ ಬೆಳಕುಚೆಲ್ಲುತ್ತದೆ. ಅದರಂತೆ ಮಾಳಿಂಗರಾಯನ ಕಾವ್ಯ ಕುರಿತಂತೆ ಗಂಗಾಧರ ದೈವಜ್ಞ ಅವರನ್ನು ಹೊರತುಪಡಿಸಿ

ಪ್ರೊ.ಡಾ.ವೀರಣ್ಣ ದಂಡೆಯವರ–ಜನಪದ ಹಾಲುಮತ ಕಾವ್ಯ,

ರಸ್ತಾಪೂರ ಭೀಮಕವಿ ವಿರಚಿತ–ಹಾಲುಮತೋತ್ತೇಜಕ ಪುರಾಣ

ಶಿವಲಿಂಗ. ಅ.ಕುಂಬಾರ: ಬೀರೇಶ್ವರ ಮಾಳಿಂಗರಾಯನ ಡೊಳ್ಳಿನ ಹಾಡುಗಳು.

ಜ್ಯೋತಿ ಹೊಸೂರ –ಹುಲಜಂತಿ ಮಾಳಿಂಗರಾಯ: ಚಾರಿತ್ರಿಕ ಅಂಶಗಳು

***ಜಿ.ಎಸ್. ವಡಗಾವಿ–ಮಾಳಿಂಗರಾಯನ ಕಾವ್ಯ*** ಹಾಗೂ ಮುಂತಾದ ಬಿಡಿ ಲೇಖನಗಳು, ಅನೇಕ ಹಾಲುಮತ ಕಾವ್ಯಗಳಲ್ಲಿ ಮೈಲಾರಲಿಂಗನ ಜೀವನ, ಸಾಧನೆ, ಸಾಂಸ್ಕೃತಿಯ ಬಗ್ಗೆ ಅಧ್ಯಯನ ನಡೆಸಿದ್ದಾರೆ.

ಮೌಖಿಕ ಕಾವ್ಯಗಳ ಕುರಿತ ಸಮೀಕ್ಷೆ ನಡೆದಿರುವುದು ಗಮನಿಸಿದರೆ ಮೌಖಿಕ ಕಾವ್ಯಗಳ ಪರಂಪರೆಯ ಅರ್ಥಗ್ರಹಿಕೆಗೆ ಹಾಗೂ ಕಾವ್ಯಗಳ ಸೈದ್ಧಾಂತಿಕ ಅಧ್ಯಯನಗಳ ಶೋಧನೆಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಿರುವುದನ್ನು ಗಮನಿಸಬಹುದು. ಈ ಎಲ್ಲಾ ಅಧ್ಯಯನಗಳನ್ನು ಪ್ರಧಾನವಾಗಿಟ್ಟುಗೊಂಡು ಮೌಖಿಕ ಕಾವ್ಯಗಳಲ್ಲಿ ಲಿಂಗ ಸಂಬಂಧ ಸಮಾನತೆ ಮತ್ತು ಅಸಮಾನತೆಯನ್ನು ಗುರಿತಿಸುವ ಪ್ರಯತ್ನವನ್ನು ಪ್ರಸ್ತುತ ಈ ಪ್ರಬಂಧದಲ್ಲಿ ಮಾಡಲಾಗಿದೆ.

**ಅಧ್ಯಾಯಗಳ ಸ್ವರೂಪ**

ಮೌಖಿಕ ಕಾವ್ಯಗಳು ಒಂದು ಸಮುದಾಯದ ಚರಿತ್ರೆಯಿದ್ದಂತೆ ಅವುಗಳು ಸಂಸ್ಕೃತಿ ಯಾವ ಸ್ವರೂಪದಲ್ಲಿದೆ ಎಂಬುದನ್ನು ವಿವೇಚಿಸುವುದರ ಮೂಲಕ ಮಹಾಕಾವ್ಯಗಳ ನಾಯಕರು ಸಮಾಜ, ಸಮುದಾಯ, ಮಹಿಳೆಯರೊಂದಿಗೆ ಇರುವ ಸಂಬಂಧ, ಸಂಘರ್ಷಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

**ಅಧ್ಯಾಯನ: ಒಂದು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ.**

ಈ ಅಧ್ಯಾಯನಲ್ಲಿ ಪ್ರಸ್ತಾವನೆಯೊಂದಿಗೆ ಈ ಪ್ರಸ್ತುತ ಪ್ರಬಂಧವನ್ನು ಕಟ್ಟಿಕೊಡಲು ಎತ್ತಿಕೊಂಡ ಉದ್ದೇಶಗಳು, ಅವುಗಳ ವ್ಯಾಪ್ತಿ, ಮಹತ್ವ ಹಾಗೂ ಸ್ವರೂಪವನ್ನು ವಿವರಿಸಲಾಗಿದೆ, ಹಾಗೂ ಕಾವ್ಯಗಳ ಕುರಿತು ಇದುವರೆಗೂ ನಡೆದ ಅಧ್ಯಯನ ಸಮೀಕ್ಷೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಅಧ್ಯಾಯ: ಎರಡು ಮೌಖಿಕ ಮಹಾಕಾವ್ಯ ಪರಂಪರೆ.**

ಈ ಅಧ್ಯಾಯದಲ್ಲಿ ಮೌಖಿಕ ಮಹಾಕಾವ್ಯ ಹುಟ್ಟು, ವಿಸ್ತಾರ, ಅರ್ಥ, ಸ್ವರೂಪ, ಬೆಳೆದು ಒಂದು ಬಗೆ ಹಾಗೂ ಹಾಡುವ ಗಾಯಕ ಪರಂಪರೆ, ಪುರಷ ಪಠ್ಯಗಳು, ಮಹಿಳಾ ಪಠ್ಯಗಳು, ಅವರಿಗಿರುವ ಸ್ಥಾನಮಾನಗಳನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ: ಮೂರು ಮೌಖಿಕ ಮಹಾಕಾವ್ಯಗಳ ಸಾಮಾಜಿಕ ನೆಲೆಗಳು**

ಮೌಖಿಕ ನಾಯಕರ ಸಮುದಾಯಗಳು ಅದರಲ್ಲಿ ಅವರ ಅಸ್ತಿತ್ವಕ್ಕಾಗಿ ಪಟ್ಟ ಹಂಬಲಗಳು, ನಡೆಸಿದ ಸಂಘರ್ಷಗಳು, ಸಮುದಾಯಗಳಲ್ಲಿರುವ ಕುಟುಂಬ ವ್ಯವಸ್ಥೆ, ಸ್ತ್ರೀ ಪುರಷನ ನಡುವಿನ ಸಂಬಂಧಗಳ, ಪರುಷರು ಸ್ತ್ರೀಯರ ಮೇಲೆ ಹೇರಲ್ಪಟ್ಟ ಸಮಾಜಿಕ ಮೌಲ್ಯಗಳು, ತನ್ನ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ ನಾಯಕರು, ಮಹಿಳೆಯರು ಇಬ್ಬರಲ್ಲೂ ಪ್ರಾಶಸ್ತ್ಯ ಕೊಟ್ಟ ಮೌಲ್ಯಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯನ: ನಾಲ್ಕು ಮೌಖಿಕ ಮಹಾಕಾವ್ಯ ಆರ್ಥಿಕ ಮತ್ತು ರಾಜಕೀಯ ನೆಲಗಳು**

ಈ ಅಧ್ಯಾಯನದಲ್ಲಿ ಪ್ರತಿಯೊಂದು ಸಮುದಾಯಗಳು ತಮ್ಮ ಜೀವನಕ್ಕಾಗಿ ಅವಲಂಬಿಸಿದ ವೃತ್ತಿಗಳು, ನಾಯಕರು ಉತ್ಪಾದನೆಯ ಮೇಲೆ ಸಾಧಿಸಿದ ಹಿಡಿತ, ಸಮುದಾಯಿಕವಾಗಿ ನಡೆದ

ಉತ್ಪಾದನೆ ಇದರಲ್ಲಿ ಮಹಿಳೆಯರ ಪಾತ್ರ, ಸಾಂಸ್ಕೃತಿಕ ನಾಯಕರ ಸುತ್ತ ಹೆಣೆದುಕೊಂಡ ರಾಜಕೀಯ ಒಳಾಡಳಿತಗಳನ್ನು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ: ಐದು ಮೌಖಿಕ ಮಹಾಕಾವ್ಯ ಸಾಂಸ್ಕೃತಿಕ ಮತ್ತು ಧಾರ್ಮಿಕ ನೆಲೆಗಳು**

ಈ ಅಧ್ಯಯದಲ್ಲಿ ಸಾಂಸ್ಕೃತಿಕ ನಾಯಕರ ನೆಲೆಗಳು, ನೆಲೆಗಳಲ್ಲಿ ಹುಟ್ಟಿಕೊಂಡ ಆಚರಣೆ, ಜಾತ್ರೆ, ಉತ್ಸವಗಳು, ಧರ್ಮದ ಹೆಸರಿನಲ್ಲಿ ಮಹಿಳೆಯರನ್ನು ನಡೆಸಿಕೊಂಡ ವಿಧಿಗಳು, ಹಾಗೂ ನಾಯಕರು ಸ್ತ್ರೀಯರಿಗೆ ಧರ್ಮದ ಹೆಸರಿನಲ್ಲಿ ಹೇರಿದ ತಾಯ್ತನ ಪಾತಿವ್ರತ್ಯ, ಮುಟ್ಟು, ಬಂಜೆತನ, ಇದರಿಂದ ಸ್ತ್ರೀಯರು ಅನುಭವಿಸಿದ ನಿಷೇಧಗಳ ಕುರಿತು ಸ್ಪಷ್ಟಪಡಿಸಲಾಗಿದೆ.

**ಅಧ್ಯಾಯ: ಆರು ಸಮಾರೋಪ**

ಸಮರೋಪದಲ್ಲಿ ನಾನು ಈ ಅಧ್ಯಯನದಿಂದ ಕಂಡುಕೊಂಡ ಒಟ್ಟಾರೆ ಫಲಿತಗಳನ್ನು ನೀಡಿದ್ದೇನೆ. ಹಾಗೂ ಅಧ್ಯಯನಕ್ಕೆ ಪ್ರಧಾನವಾಗಿ ಮತ್ತು ಪೂರಕವಾಗಿ ಬಳಸಿಕೊಂಡ ಪರಾಮರ್ಶನ ಗ್ರಂಥಗಳ ಪಟ್ಟಿ ನೀಡಲಾಗಿದೆ.

# ಅಧ್ಯಾಯ : ಎರಡು

# ಮೌಖಿಕ ಮಹಾಕಾವ್ಯ ಪರಂಪರೆ

# ಅಧ್ಯಾಯ : ಎರಡು

# ಮೌಖಿಕ ಮಹಾಕಾವ್ಯ ಪರಂಪರೆ – ಮಿಮರ್ಶಾತ್ಮಕ ನೆಲೆಯಲ್ಲಿ

ಭಾರತ ದೇಶವು ಹಲವು ಜೀವನ ವಿಧಾನಗಳನ್ನು ಒಳಗೊಂಡ ಬಹು ಸಾಂಸ್ಕೃತಿಕ ದೇಶವಾಗಿದೆ. ಇಲ್ಲಿ ವಿಭಿನ್ನ ಭಾಷೆ, ಪ್ರಾದೇಶಿಕತೆ, ಸಂಪ್ರದಾಯ, ನಂಬಿಕೆ, ವಿಧಿ ನಿಷೇಧಗಳು. ಆಹಾರ, ಉಡುಗೆ, ತೊಡುಗೆ ಸಂಸ್ಕೃತಿ, ಆಚರಣೆಗಳನ್ನು ಒಳಗೊಂಡ ಜೀವನ ಪದ್ದತಿ ಇಂದಿಗೂ ಜೀವಂತವಾಗಿದೆ. ನಮ್ಮ ದೇಶ ಯಾವುದೇ ಒಂದು ಸಂಸ್ಕೃತಿ, ಸಮುದಾಯಕ್ಕೆ ಸೀಮಿತವಾಗಿರದೆ ವಿವಿಧತೆಯಲ್ಲಿ ಏಕತೆಯನ್ನು ಒಳಗೊಂಡ ಭೂ ಭಾಗವಾಗಿದೆ. ಭಾರತವು ಆಧುನೀಕರಣಗೊಳ್ಳುವ ಮುಂಚೆ ಆದಿವಾಸಿಗಳು, ಅಲೆಮಾರಿಗಳು, ಜನಪದರು ತಮ್ಮದೇ ಆದ ಆಚರಣೆ, ಸಂಪ್ರದಾಯಗಳ ಮೂಲಕ ಅಪಾರ ಕೊಡುಗೆ ನೀಡಿದ್ದಾರೆ.

ಸಂಸ್ಕೃತಿಯು ವಿಕಾಸವಾದಂತೆಲ್ಲ ಸಮಾಜದಲ್ಲಿನ ಸಮುದಾಯಗಳು ತಮ್ಮದೇ ಆಚಾರ, ವಿಚಾರ, ನಂಬಿಕೆ, ಸಂಪ್ರದಾಯಗಳು, ಪದ್ಧತಿಗಳನ್ನು ರೂಪಿಸಿಕೊಂಡು ಬಂದವು. ಅನಾದಿಕಾಲದ ವ್ಯಾಪಾರ, ಬೇಟೆ, ಬೇಸಾಯ, ಬೆಂಕಿ, ವಸತಿ ಎಲ್ಲವನ್ನು ಮನುಷ್ಯ ತನ್ನ ವಿಕಾಸದುದ್ದಕ್ಕೂ ಅರಿಯ ತೊಡಗಿದ, ಜೊತೆಯಲ್ಲಿ ಭಾಷೆಯನ್ನು ರೂಢಿಸಿಕೊಳ್ಳುತ್ತಾ ಹೋದ. ಮೊದಲಿಗೆ ಕೇವಲ ಸಂಜ್ಞೆ, ಸಂಕೇತಗಳು, ಚಿತ್ರಗಳು ಮೂಲಕ ಸಂವಹನ ಕ್ರಿಯೆಯನ್ನು ನಡೆಸುತ್ತಿದ್ದ ಮಾನವ, ವಿಕಾಸವಾದಂತೆ ಭಾಷೆಯ ಪರಿಣಾಮದಿಂದಾಗಿ ಭಾಷೆ ಮಾತಾಗಿ ಪರಿಣಮಿಸಿತು.

ಮಾನವ ವಿಕಾಸವಾದಂತೆಲ್ಲ ತಾನು ಕಂಡು ಅನುಭವಿಸಿದ ಜೀವನ ನಡೆದ ದಾರಿ, ಬಳಸಿದ ಸಲಕರಣೆಗಳು ಇವೆಲ್ಲವೂ ಅವನಲ್ಲಿ ಜ್ಞಾನವನ್ನು ಉಂಟುಮಾಡಿದವು. ಇದರ ಜೊತೆಯಲ್ಲಿಯೇ ಅವನು ರೂಢಿಸಿಕೊಂಡು ಬಂದ ಮಾತು ಕತೆ, ಹಾಡು, ಕುಣಿತ, ಹಬ್ಬ ಆಚರಣೆ, ಸಂಪ್ರದಾಯ, ನಂಬಿಕೆಗಳಲ್ಲಿ ಮಾನವನ ಜೀವನದೊಂದಿಗೆ ಅವಿನಾಭಾವ ಸಂಬಂಧವಾಗಿ ವಿಕಾಸವಾಗುತ್ತಾ ಬೆಳೆದವು.

"ಮನುಷ್ಯ ಹುಟ್ಟಿನಿಂದ ಸಾಯುವವರೆಗೆ ಅವನ ಜೀವನ ಚಕ್ರದಲ್ಲಿ ಆಚರಿಸುವ ಸಂಭ್ರಮಾಚರಣೆಗಳಿಗೆ, ಮಾಡುವ ಕೆಲಸಗಳಿಗೆ ತಕ್ಕಂತೆ ಹಾಡುಗಳನ್ನು ರೂಪಿಕೊಳ್ಳತೊಡಗಿದನು. ಉದಾಹರಣೆ: ತಾಯಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಹಾಡುವ ಪದಗಳು

"ಜೋ ಜೋ ಮುದ್ದಿನ ಪುಟಾಣಿ ಕಂದ
ಜೋ ಜೋ ಲಲ್ಲೆಯ ಮಾತಿನ ಅಂದ
ಜೋ ಜೋ ಗೆಜ್ಜೆಯ ಝುಣ ಝುಣ ಚಂದ
ಜೋ ಜೋ ತಾರಾಕುವರಿ ಆನಂದ"[೧]

ಭತ್ತಕುಟ್ಟುವಾಗ ಹಾಡುವ ಪದಗಳು

"ಸುವ್ವಾ ಬಾ ಸುವ್ವಿ ಸುವ್ವ ಬಾ
ಸುವ್ವಾ ಬಾ ಸುವ್ವಿ ಸುವ್ವ ಬಾ (ಪಲ್ಲವಿ)
ಅಕ್ಕಂದು ಆಲೂರು, ತಂಗೀದು ಬೇಲೂರು
ಸುವ್ವಾ ಬಾ ಸುವ್ವಿ ಸುವ್ವ ಬಾ
ಅಕ್ಕಂದು ಆಲೂರು ತಂಗೀದು ಬೇಲೂರು
ಚಿಕ್ಕಕ್ಕನೂರು ಚಿಕ್ಕಬದರೆ...........।[೨]

**ಬೀಸುವ ಪದಗಳು**

"ಕಲ್ಲು ಕೋಟಮ್ಮಗೆ ಎಲ್ಲ ಭಾಗ್ಯವು ಬರಲಿ
ಕಲ್ಲತ್ತಿ ಮಗಬರಲಿ ನಮ್ಮನಿಗೆ ಮಲ್ಲಿಗೆ ಮುಡಿಯೋ ಸೊಸೆ ಬರಲಿ
ಕಂಡುಗ ರಾಗಿ ಬೀಸೋ ನನ್ನ ಮುತ್ತಿನ ಕಲ್ಲೆ
ದಂಡೆ ತಂದಿವ್ನಿ ಕೊರಳಿಗೆ –ನಮ್ಮನಿಯ
ಕಂಬದ ಸಾಲಲ್ಲಿ ಇಡುಬಾರೋ
ರಾಗಿಯ ಕಲ್ಲಿಗೆ ರನ್ನದ ಕೈಗೊಟ
ರಾಮ ದೇವರೆಂಬೊ ಹಿಡಿಗೂಟ–ಹಿಡಕೊಂಡು
ರಂಜುಣದೇವನ ಕೊರಳಿಗೆ"[೩]

ಹೀಗೆ ಮಾನವರು ತಾವು ಮಾಡುವ ಕೆಲಸಗಳಿಗೆ, ಗಾಡಿ ಹೊಡಯುವಾಗ, ಬಟ್ಟೆ ಒಗೆಯುವಾಗ, ದೋಣಿ ನಡೆಸುವಾಗ, ಹೇಳುವ ಪದಗಳೆಲ್ಲವೂ ಹಾಡಾದವು, ಅಷ್ಟೆಅಲ್ಲದೆ ಮಳೆಗಾಲ, ಚಳಿಗಾಲ, ಬೇಸಿಗೆಕಾಲ ಬೀದಿಗಳಲ್ಲಿ, ಚಾವಡಿಗಳಲ್ಲಿ, ಮನೆಯ ಪಡಸಾಲೆಗಳಲ್ಲಿ, ಹಬ್ಬಹರಿದಿನಗಳಲ್ಲಿ, ಹರಟೆಗಳಲ್ಲಿ ಹಾಡುಗಳನ್ನು ಹೇಳತೊಡಗಿದರು ಬದುಕಿಗೆ ಸಂಬಂಧಿಸಿದಂತೆ ನಡೆದ ಘಟನೆಗಳಿಗೆ, ದಿನನಿತ್ಯ ಅನುಭವಗಳನ್ನೇ ಜೀವನದೊಂದಿಗೆ ಇರುವ ವೈವಿಧ್ಯಗಳನ್ನು ಗುರುತಿಸಿ ಅನೇಕ ಗಾದೆ, ಒಗಟುಗಳನ್ನು ಮಾತುಗಳಲ್ಲಿ ಬಳಸತೊಡಗಿದರು.

ಉದಾ: ಗಾದೆ: 'ಉಳಿ ಸಣ್ಣದಾದರೂ ಮರ ಕಡಿಯೋದು ಬಿಡೊಲ್ಲ'

'ಅಗಸ ಮಾಡಿದ್ದು ಬಟ್ಟೆಗೆ, ಅಕ್ಕಸಾಲೆ ಮಾಡಿದ್ದು ಅಗಷ್ಟಿಕೆಗೆ

ಕುರುಬ ಕೂಡಿ ಕೆಟ್ಟ ದೊಂಬ ಅಗಲಿಕೆಟ್ಟ

ಕುಂಬಾರನಿಗೆ ವರ್ಷ ದೊಣೆಗೆ ನಿಮಿಷ

ದೊಸೆ ಊಟವಲ್ಲ, ದಾಸಯ್ಯ ನೆಂಟನಲ್ಲ

ಒಡೆದ ಬಳೆ, ಒಡೆದ ಗಾಜು ಮನಮಾಗ ಇಡಬಾರದು'

ಜಾಲಿ ಸಾಕಿದರೆ ಕಾಲಿಗೆ ಮೂಲ, ಬೇಡನ್ನ ಸಾಕಿದರೆ ಜೀವಕ್ಕೆ ಮೂಲ

ಹಾಲಿನುಗಿದ್ದರೂ ಹಾರುದನ್ನ ನಂಬಬಾರದು

ಗೊಲ್ಲ ಗೆಣೆಯ ಅಲ್ಲ, ತುರುಕ ದಾಸನಲ್ಲ,

ತುಪ್ಪದಂಗಿದ್ದರೂ ತುರುಕನ್ನ ನಂಬಬಾರದು

ಒಗಟು– ಚಿಪ್ಪುಂಟು ಆಮೆಯಲ್ಲಿ, ಜಟ್ಟುಂಟು ಪೂಜಾರಿಯಲ್ಲ

ಮೂರು ಕಣ್ಣುಗಳುಂಟು ಮುಕ್ಕಣ್ಣನಲ್ಲ (ತೆಂಗಿನಕಾಯಿ)

ಹಿಂದಿನ ಕತ್ತೆಗೆ ಮುಂದೆರೆಡು ಕತ್ತೆ

ಮುಂದಿನ ಕತ್ತೆಗೆ ಹಿಂದೆರಡು ಕತ್ತೆ

ನಡುವಿನ ಕತ್ತೆಗೆ ಹಿಂದೊಂದು ಮುಂದೋಂದು ಕತ್ತೆ

ಹಾಗಾದರೆ ಒಟ್ಟು ಕತ್ತೆಗಳೆಷ್ಟು ? (ಮೂರು)

ಗಿಡ್ಡಿ ಗುದ್ದಿದರ ಮನೆ ತುಂಬಾ ಮಕ್ಕಳು (ಬೆಳ್ಳೊಳ್ಳಿ)

ಹೀಗೆ ಮನುಷ್ಯರು ಇವೆಲ್ಲವುನ್ನು ಓದಿ ಕಲಿತವರಲ್ಲ, ಆಡಿದ್ದನ್ನ, ಹಾಡಿದ್ದನ್ನು, ಮಾಡಿದ್ದನ್ನು ಕೇಳಿ, ನೋಡಿ ಕಲಿತದ್ದಾಗಿದೆ, ಈ ಪರಂಪರೆ ಮಾನವ ಸಮಾಜದಲ್ಲಿ ಹೆಚ್ಚು ವ್ಯಾಪಕವಾಗಿ, ಪ್ರಭಾವಶಾಲಿಯಾಗಿ ಜನಪ್ರಿಯವಾಗತೊಡಗಿತು. ಮಾನವ ತಾನು ಮೌಖಿಕವಾಗಿ ಕೇಳಿ ನೋಡಿ ಮಾಡಿದ್ದನ್ನು  ಮನನ ಮಾಡಿಕೊಳ್ಳುತ್ತಾ. ಅನುಸರಿಸಿಕೊಂಡು ಬಂದ ಸಂಪ್ರದಾಯ ಮುಂದೆ ಮೌಖಿಕ ಸಂಪ್ರದಾಯವಾಗಿ ಬೆಳೆದು ಬಂದಿತು. ಇದು ಮುಂದೆ ಪುರಾಣ, ಐತಿಹ್ಯ, ಗೀತೆಗಳು, ಕತೆ, ಒಗಟು, ಗಾದೆ, ಲಾವಣಿ, ಹಾಡಿನ ಮೂಲಕ ಉಳಿದು ಬೆಳೆದುಕೊಂಡು ಬಂದಿತು. ಹೀಗೆ ಹುಟ್ಟಿಕೊಂಡು ಬಂದ ಮೌಖಿಕ ಸಂಪ್ರದಾಯ ಮಾನವನ ವ್ಯವಹಾರಗಳಲ್ಲಿ ಜ್ಞಾನದ ವಾಹಕವಾಗಿ ತನ್ನ ಅನುಭವಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳತೊಡಗಿದ.

ಮೌಖಿಕ ಸಂಪ್ರದಾಯವು ಜನರ ನಾಲಿಗೆಯ ತೂಗುತೊಟ್ಟಿಲಿನ ಮೇಲೆ ಸರ್ವತೋಮುಖವಾಗಿ ಅಭಿವ್ಯಕ್ತವಾಗುತ್ತಾ ಜನರೊಂದಿಗೆ ಅವಿನಾಭಾವ ಸಂಬಂಧವಾಗಿ ತಲೆತಲಮಾರುಗಳವರೆಗೆ ವಿಸ್ತರಿಸಿತು.

ಮೌಖಿಕ ಸಂಪ್ರದಾಯ ಮಾತಿನಿಂದ ಪ್ರಾರಂಭವಾಗಿ ತಮ್ಮದೇ ದೈವದ ಕುರಿತ ಹಾಡಿನತ್ತ ಸಾಗಿತು. ಇದು ಮನುಷ್ಯನನ್ನು ವಿವಿಧ ಸಂಸ್ಕೃತಿಯ ಅವಸ್ಥೆಗಳಲ್ಲಿ ಅನಾವರಣಗೊಳಿಸಿತು. ಪ್ರತಿಯೊಂದು ರಾಷ್ಟ್ರವೂ ತನ್ನ ವಿಶಿಷ್ಟ ಸಾಂಸ್ಕೃತಿಕತೆಯನ್ನು ಪಡೆದಿರುತ್ತದೆ. ಈ ಸಂಸ್ಕೃತಿಯು ಸಾಮಾನ್ಯ ಅನಕ್ಷರಸ್ಥ ಜನರ ಭಾಷೆ ಹಾಗೂ ಜನಪದರ ಜೀವನದುದ್ದಕ್ಕೂ ಕಂಡುಬರುತ್ತದೆ. ಅನಕ್ಷರಸ್ಥರ ಸಂಸ್ಕೃತಿ, ಜೀವನ ಪದ್ದತಿ, ಆಚಾರ, ವಿಚಾರ, ಭಾಷೆ, ಹಾಡು, ಹುಟ್ಟು, ಸಾವು, ದೇವರು, ಮಾಟಮಂತ್ರ ತಂತ್ರ ಮೊದಲಾದ ಜೀವನ ಸಂಗತಿಗಳನ್ನು ತಮ್ಮ ಮೌಖಿಕ ಕಾವ್ಯಗಳ ಮೂಲಕವೇ ಕಟ್ಟಿ ಅದನ್ನು ಮುಂದಿನ ತಲಮಾರುಗಳಿಗೂ ಉಳಿಸುತ್ತಿದ್ದವರು ಮೌಖಿಕರಾಗಿದ್ದಾರೆ. ಮೌಖಿಕರ ಕುರಿತು ಒಂದು ಜಾನಪದ ಹಾಡು

"ಜಾನಪದ ಕೋಶ ಇವಳೋ
ಕನ್ನಡದ ಕಣ್ಣಮಣ್ಣೋವೋ
ಲಕ್ಷ್ಮೀ ಬಾಯಿ ಮರತೂರವರೂ
ಸಾಕ್ಷರತೇಗೆ ಮಡಿದವರು
ಶಾಲೆ ಕಲಿಯದವರಿಗೆ
ಕಲಿಸಲು ಮುಂದಾದವರು
ಬಡತನದ ರೇಖೆಯಲ್ಲಿ
ನೋಂದು ಬೆಂದು ಬೆಳೆದವಳೂ
ನೀವೇ ನನ್ನ ಮಕ್ಕಳೆಂದೂ
ಸಂತೋಷ ಪಡುತ್ತಿದ್ದವಳು..."೪

ತಮ್ಮ ಗುಡ್ಡಗಾಡಿನ ಹಾಡ್ಗಥೆಗಳು ಸಾಹಿತ್ಯವನ್ನು ಒಂದು ಶಿಸ್ತಿನ ಜ್ಞಾನವಾಗಿ ಬೆಳೆಸತೊಡಗಿದರು. ಇವರಿಗೆ ಅಕ್ಷರ ಜ್ಞಾನದ ಅರಿವಿಲ್ಲ! ಆದರೂ ಓದಲೂ ಬರೆಯಲು ತಿಳಿಯದ ಜನರು ಅಜ್ಞಾನರಲ್ಲ. ಅವರಿಗೆ ತಮ್ಮ ಜೀವನ ಜ್ಞಾನದ ಬಗ್ಗೆ ತಿಳುವಳಿಕೆ ಇದೆ, ಹಾಗಾಗಿಯೋ ತಾವು ಹಾಡಿಕೊಂಡು ಹೇಳಿಕೊಂಡು ಬಂದ ದೊಡ್ಡ ದೊಡ್ಡ ಕಥೆ, ಹಾಡು ಕಾವ್ಯ ,ಲಾವಣಿ, ಒಗಟು, ಗಾದೆಗಳನ್ನು ತಾತ ಮುತ್ತಾತರ ಕಾಲದಿಂದ ಪರಂಪರಾನುಗತವಾಗಿ ವರ್ಗಾಯಿಸುತ್ತಾ ಬಂದಿದ್ದಾರೆ.

ಮಾತಿನ ಮೂಲಕ ಜನರು ಹೇಳುವ ಪದ, ಹಾಡು, ಕಾವ್ಯ, ಲಾವಣಿಗಳನ್ನು ಮೌಖಿಕ, ತೋಂಡಿ, ಬಾಯಿಮಾತು ಎಂದೆಲ್ಲ ಕರೆಯಬುಹುದು. "ಮೌಖಿಕ ಮಾತು ಕ್ಷಣಿಕ, ಅಶಾಶ್ವತ ಇಲ್ಲವೆ ನೆನಪಿಗೆ ದಕ್ಕುವ, ನಿಲ್ಲುವ ಸಹಜ ಅವಧಿ ಕಡಿಮೆ ನಿಜ ಮೌಖಿಕರು ಮಾತನ್ನು ಕ್ಷಣಿಕ, ತಾತ್ಕಾಲಿಕ ಎಂದು ತಾತ್ಸಾರವಾಗಿ ಕಾಣುವುದಿಲ್ಲ, ತಮಗನಿಸಿದಷ್ಟನ್ನು ತಮಗೆ ದಕ್ಕಿದಷ್ಟು ಕಾಲ ಅದನ್ನು ಮತ್ತೆ ಮತ್ತೆ ಬಳಸಿ, ಪುನರುಕ್ತಿ ಮಾಡಿ ಮನನ ಮಾಡಿಕೊಂಡು ಅದರ ಬಂಧವನ್ನು ಹಾಗೆಯೇ

ಹಿಡಿದಿಟ್ಟುಕೊಳ್ಳುತ್ತಾರೆ."[9] ಜನ ಸ್ಮೃತಿಯಲ್ಲಿ ಇರುವಂತಹ ಮೌಖಿಕ ಸಾಹಿತ್ಯ ಒಬ್ಬ ವ್ಯಕ್ತಿಯಿಂದಲೇ ಅಥವಾ ಒಂದು ಕಾಲಘಟ್ಟದಲ್ಲಾಗಲೀ ಹುಟ್ಟಿದ್ದಲ್ಲ. ಇದಕ್ಕೆ ಯಾವುದೇ ಸಾಂಪ್ರದಾಯಿಕ ಚೌಕಟ್ಟು ಇಲ್ಲ. ಆದ್ದರಿಂದಲೇ ಮೌಖಿಕ ಪರಂಪರೆಯ ಅಭಿವ್ಯಕ್ತಿಗಳು ಸಾಹಿತ್ಯದ ಅಭಿವ್ಯಕ್ತಿಗಿಂತ ಭಿನ್ನವಾಗಿರುತ್ತವೆ. ಮೌಖಿಕ ಪರಂಪರೆ ಜನರ ಬದುಕಿನ ಶ್ರಮದ ಜೊತ ಜೊತೆಗೆ ಹುಟ್ಟಿದೆ ಹಾಗೂ ಸರಳ ಜೀವನ, ಸುಖ, ದು:ಖ ನೋವು–ನಲಿವುಗಳು ಇಲ್ಲಿ ಅಭಿವ್ಯಕ್ತಿಗೊಳ್ಳುತ್ತವೆ.

ಬರಹವೇ ತಿಳಿಯದ ಮಾತು ಸಂವಹನವಾಗಿರುವ ಸಂಸ್ಕೃತಿಯೇ ಆದಿವಾಸಿ ಮತ್ತು ಬುಡಕಟ್ಟುಗಳು ಮೌಖಿಕ ಸಾಹಿತ್ಯ ರೂಪವಾಗಿದೆ. ಇವರ ಮೌಖಿಕ ಸಾಹಿತ್ಯದ ಸೊಗಸು, ಸೊಗಡು, ಸ್ವರೂಪ ಬೇರೆಯಾಗಿರುತ್ತದೆ, ಒಂದೇ ಸಮನೆ ಮಾತು. ಮಾತಿನ ಮಧ್ಯೆ ಬಿಡುವು ಉದ್ಗಾರ: ಚಲನೆಯೇ ಬೇರೆಯಾಗಿರುತ್ತದೆ. ಮೌಖಿಕ ಪರಂಪರೆಯ ಕಾವ್ಯಭಿವ್ಯಕ್ತಿಯ ಪರಿಗಳೇ ವಿಧವಿಧವಾಗಿರುತ್ತವೆ ಹಾಗೂ ಈ ಪರಂಪರೆಯಲ್ಲಿ ಎಲ್ಲವೂ ಮಾತಿನ ಪ್ರಜ್ಞೆಯ ಆಧಾರವಾಗಿದ್ದು, ಹಾಡಿ ಹಟ್ಟಿಗಳಲ್ಲಿ ದೈವೀ ನಂಬಿಕೆ ಗಾಢವಾದದ್ದಾಗಿದೆ. ಇದಕ್ಕೆ ಸಂಬಂಧಿಸಿದ ಆಚರಣೆಗಳಲ್ಲವೂ ಮೌಖಿಕವಾದವು. ಮೌಖಿಕ ಸಾಹಿತ್ಯದಲ್ಲಿಯೇ ಮೌಖಿಕ ಮಹಾಕಾವ್ಯಗಳು ಅತ್ಯಂತ ಮಹತ್ವವಾದವು. ಮೊದಲಿಗೆ ಪಾಶ್ಚಿಮಾತ್ಯರು ಮಹಾಕಾವ್ಯಗಳ ಸಂಪಾದನೆ ಮಾಡಿದರು. ೧೮೩೫ರಲ್ಲಿ 'ಕಲೆವಾಲ'ದಂತಹ ಮಹಾಕಾವ್ಯ ಸಂಪಾದಿಸಲಾಯಿತು. ಇದು ಜಗತ್ತಿನ ಮೊದಲ ಮಹಾಕಾವ್ಯವೆಂದು, ಹಾಗೂ ಫಿನ್‌ಲ್ಯಾಂಡಿನ ಜನರಿಗೆ ಮಹತ್ವದ ಕಾವ್ಯವಾಗಿ ಪರಿಚಿತವಾಯಿತು. ನಂತರ ಬಂದತಹ ಹೋಮರ್‌ನು 'ಒಡೆಸ್ಸಿ' ಮತ್ತು 'ಇಲಿಯಟ್' ಮಹಾಕಾವ್ಯಗಳನ್ನು ರಚಿಸಿದನು. ಬ್ಯಾಬಿಲೋನಿಯಾದಲ್ಲಿ ರಚನೆಯಾದ 'ಗಿಲ್ಗಮಿಷ್' ಎಂಬ ಮಹಾಕಾವ್ಯ ಪಾಶ್ಚತ್ಯರ ಪ್ರಪಂಚದಲ್ಲಿ ಪ್ರಾಚೀನವಾದ ಮಹಾಕಾವ್ಯವೆಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಇವರ ಪ್ರೇರಣೆಯಿಂದಾಗಿ ಕರ್ನಾಟಕದಲ್ಲಿ ಕಾವ್ಯಗಳ ಕುರಿತು ಅಧ್ಯಯನ ಪ್ರಾರಂಭವಾಯಿತು. ಹಾಗಾಗಿ ಕರ್ನಾಟಕದಲ್ಲಿ ಮೌಖಿಕ ಮಹಾಕಾವ್ಯಗಳು ಲಿಪಿಯ ರೂಪಕ್ಕೆ ಬರಲಾರಂಭಿಸಿದವು ಇದಕ್ಕೆ ಮೌಖಿಕ ಸಾಹಿತ್ಯವೇ ಮೂಲಾಧಾರವಾಯಿತು.

ಬಿ.ಎಂ. ಶ್ರೀ ಯವರ ಜನವಾಣಿ ಬೇರು,ಕವಿವಾಣಿ ಹೂ ಎನ್ನುವ ಮಾತು ಮೌಖಿಕ ಸಾಹಿತ್ಯವು ಸಮೃದ್ಧವಾಗಿ ಬೆಳೆಯಲು ಕಾರಣವಾಯಿತು. ಈ ಮೌಖಿಕ ಸಾಹಿತ್ಯವೇ ಇತಿಹಾಸ, ಪುರಾಣಗಳಾಗಿ ಜನರ ಬಾಯಿಯಿಂದ ಬಾಯಿಗೆ ರವಾನೆಯಾಗುತ್ತದೆ. ಇದು ಒಂದು ಅದ್ಭುತ ಸೃಜನಶೀಲ ಪ್ರತಿಭೆಗೆ ಸಿಕ್ಕ ಪುರಸ್ಕಾರವಾಗಿ ಮಹಾಕಾವ್ಯಗಳು ರೂಪಗೊಂಡವು. ಈ ಮಹಾಕಾವ್ಯವು ಅದು ಹುಟ್ಟಿದ ರಾಷ್ಟ್ರ ಜನಾಂಗ, ಕಾಲ, ಪರಿಸರಕ್ಕೆ ಬದ್ಧವಾಗಿರುತ್ತದೆ.

**ಮಹಾಕಾವ್ಯದ ಅರ್ಥ**

ಮಹಾಕಾವ್ಯ ಎಂದ ಕೊಡಲೇ ನಮ್ಮ ಪ್ರಜ್ಞೆಗೆ ಬರುವುದು ರಾಮಾಯಣ ಮಹಾಭಾರತದಂತಹ ಶಿಷ್ಟ ಕಾವ್ಯಗಳು ಇವು ಲಿಖಿತ ರೂಪದಲ್ಲಿಯೇ ಇದ್ದು, ಈ ಮಹಾಕಾವ್ಯಗಳು ಪುರಾಣ, ಕಥೆ, ಪಾತ್ರ, ಘಟನೆಗಳನ್ನು ಹೇಳುತ್ತವೆ, ಈ ಎರಡು ಕಾವ್ಯಗಳು ನಮ್ಮ ಭಾರತದ ಆಧುನಿಕ

ಮಹಾಕಾವ್ಯಗಳಾಗಿವೆ. ಅದೇ ರೀತಿಯಾಗಿ ಮೌಖಿಕ ಸಾಹಿತ್ಯದಲ್ಲಿಯೂ ಮಹಾಕಾವ್ಯಗಳ ರಚನೆಗಳಾಗಿವೆ. ಈ ಮಹಾಕಾವ್ಯಗಳು ಒಂದು ಸಮುದಾಯದ ಕೃತಿಯಾಗಿದ್ದು ಆ ಜನರ ನಂಬಿಕೆ, ಜೀವನ, ಪರಂಪರೆ, ಸಂಪ್ರದಾಯ ಸಂಸ್ಕೃತಿಗಳನ್ನು ಒಳಗೊಂಡಿರುತ್ತದೆ. ಮಹಾಕಾವ್ಯ ಎಂಬುದು Epic ಎಂಬುದರ ಸಮನಾರ್ಥಕ ಪದವಾಗಿದ್ದು ಪಾಶ್ಚಿಮಾತ್ಯರ ವಿವಿಧ ಪರಿಕಲ್ಪನೆಗಳ ಮೂಲಕ ಚರ್ಚೆಗೊಳಪಟ್ಟಿದೆ, ಸಾಹಿತ್ಯ ವಿಮರ್ಶೆಯಲ್ಲಿ ಕೃತಿಯ ಮೌಲ್ಯ, ಸ್ವರೂಪ, ಮಹತ್ವವನ್ನು ಗುರುತಿಸುವಾಗ ಈ ಪದ ಬಳಕೆ ಇದೆ. ಆದರೆ ಭಾರತೀಯರಲ್ಲಿ ಇದರ ಕುರಿತ ಚರ್ಚೆ ಅಷ್ಟಾಗಿ ನಡೆದಿಲ್ಲ, ಪಾಶ್ಚಿಮಾತ್ಯರ ಸಾಹಿತ್ಯದಲ್ಲಿ ವಾಗ್ವಾದಗಳು ನಡೆಯುತ್ತಾ ಬೆಳೆದಿದೆ. ಭಾರತೀಯರಲ್ಲಿ ಮಹಾಕಾವ್ಯವು ಪದ್ಯ ಗದ್ಯ ಮಿಶ್ರಿತ ಚಂಪೂ ರೂಪದಲ್ಲಿಯೇ ಬಳಕೆಯಾಗಿದೆ.

"ಮಹಾಕಾವ್ಯದ ಅರ್ಥವನ್ನು ಬೆಕ್ ಬ್ರೆಂಡರವರು ಹೀಗೆ ವಿವರಿಸುತ್ತಾರೆ ಮಹಾಕಾವ್ಯವೆಂಬುದು ಒಂದು ಉತ್ಕೃಷ್ಟ ಕಥೆ, ಅದೊಂದು ಜನಪದ ಪ್ರಕಾರವಾಗಿದ್ದು ಮೊದಲ ದರ್ಜೆಯ ನಿರೂಪಣ ಕಾವ್ಯ ಎಂದಿದ್ದಾರೆ" ಮಹಾಕಾವ್ಯಗಳಲ್ಲಿ ಅನೇಕ ಪ್ರಕಾರಗಳಿವೆ, ಇವುಗಳಲ್ಲಿ ಮುಖ್ಯವಾಗಿ ಎರಡು ವಿಧಗಳನ್ನು ಡಾ. ನಿಂಗಪ್ಪ ಮುದೇನೂರು ರವರು ತಮ್ಮ ಕನ್ನಡ ಜನಪದ ಮಹಾಕಾವ್ಯಗಳು ಸಾಂಸ್ಕೃತಿಕ ವೀರರು ಎಂಬ ಪುಸ್ತಕದಲ್ಲಿ ಹೇಳುತ್ತಾರೆ. ಅವುಗಳೆಂದರೆ

೧. ಸಮುದಾಯ ನಿರ್ಮಿತ ಮಹಾಕಾವ್ಯಗಳು

೨. ವ್ಯಕ್ತಿ ನಿರ್ಮಿತ ಮಹಾಕಾವ್ಯಗಳು"[೬]

ಸಮುದಾಯ ನಿರ್ಮಿತ ಮಹಕಾವ್ಯಗಳು ಹೆಚ್ಚಾಗಿ ಒಂದು ಸಮುದಾಯದ ವೀರನ ಸಾಹಸಗಾಥೆಯಾಗಿರುತ್ತದೆ. ವೀರನು ತನ್ನ ಗುಂಪಿನ ರಕ್ಷಣೆಗಾಗಿ ವಿರೋಧಿಗಳೊಡನೆ ಹೋರಾಡಿ ಪ್ರಾಣತ್ಯಾಗ ಮಾಡುತ್ತಾನೆ. ಇಲ್ಲಿನ ಕಥೆ, ಪಾತ್ರ, ಇದರ ಗಾತ್ರವೂ ಕಾಲಕ್ಕೆ ತಕ್ಕಂತೆ ವಿಸ್ತಾರವಾಗುತ್ತಾ ಹೋಗುತ್ತೇದೆ. ಇದು ಒಬ್ಬ ವ್ಯಕ್ತಿಗೆ ಸಂಬಂಧಿಸದೆ ಇಡೀ ಸಮುದಾಯದ ಸಂಸ್ಕೃತಿಯ ಪ್ರತೀಕವಾಗಿ ರೂಪುಗೊಳ್ಳುತ್ತದೆ.

ಉದಾ:– ಕಲೇವಾಲಾ ಗಿಲ್ಗಮಿಶ್ ಬೋವುಲ್ಫ್, ಸಾಂಗ್ ಆಫ್ ರೋಲಂಡ್, ಕನ್ನಡದಲ್ಲಿ ಆದರೆ ಮಲೆಮದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರ, ಕುಮಾರರಾಮ, ಎಲ್ಲಮ್ಮ ಇತ್ಯಾದಿ

ವ್ಯಕ್ತಿ ನಿರ್ಮಿತ ಮಹಾಕಾವ್ಯಗಳು ಲಿಖಿತ ರೂಪದಲ್ಲಿದ್ದು ಒಬ್ಬ ವ್ಯಕ್ತಿ ಅಥವ ಕವಿಯಿಂದ ರಚನೆಗೊಂಡಿರುತ್ತವೆ. ಈ ಕಾವ್ಯಗಳು ಅದರ ಕವಿತ್ವದ ಹೆಸರಿನಲ್ಲಿಯೇ ಅಧಿಕೃತಗೊಂಡು ಏಕಕವಿ ಕೃತ ಪಠ್ಯವಾಗಿ ರಚನೆಯಾಗಿರುತ್ತದೆ

ಉದಾಹರಣೆ: ಹೋಮರನ ಇಲಿಯಟ್, ಒಡಿಸ್ಸಿ,

ಡಾಂಟೆಯ – ಡಿವೈನ್ ಕಾಮಿಡಿ

ಕಾಳಿದಾಸನ– ಮೇಘದೂತ

ವಾಲ್ಮೀಕಿ– ರಾಮಾಯಣ

ವ್ಯಾಸರ– ಮಹಾಭಾರತ ಇವೆಲ್ಲ ಒಬ್ಬ ಕರ್ತೃವಿನಿಂದ ರಚನೆಗೊಂಡು ಸಮಕಾಲೀನ ಜಗತ್ತನ್ನು ಕಾವ್ಯದೊಳಗೆ ಬಿಂಬಸುತ್ತವೆ.

**ಮಹಾಕಾವ್ಯದ ಲಕ್ಷಣಗಳು**

ಮೌಖಿಕ ಮಹಾಕಾವ್ಯಗಳು ಒಂದು ಕಾಲಘಟ್ಟದ ಆಚರಣೆ, ಸಂಪ್ರದಾಯ ಬಿಕ್ಕಟ್ಟು ಒತ್ತಡ. ಅಪೇಕ್ಷೆ, ಸಂಘರ್ಷ ಇವುಗಳನ್ನು ಬಿಂಬಿಸುವ ದೈವಾಚರಣೆ ಕ್ರಿಯೆ, ಇವೆಲ್ಲವೂ ಆಯಾ ಕಾಲಘಟ್ಟದ ಸಮುದಾಯವೊಂದರ ರೀತಿ ನೀತಿಗಳನ್ನು ದರ್ಶಿಸುತ್ತವೆ, ಮೌಖಿಕ ಮಹಾಕಾವ್ಯಗಳು ಭಾರತ ದೇಶವನ್ನಾಳಿದ ರಾಜ ಮಹಾರಾಜರ ಮನೆತನಗಳ ಕುರಿತು ರಚನೆಯಾಗಿಲ್ಲ, ಕದಂಬರು, ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ಗಂಗರು, ವಿಜಯನಗರದರಸರು ಹೀಗೆ ರಾಜಾಧಿರಾಜ ಮನೆತನಗಳು ಕರ್ನಾಟಕಕ್ಕೆ ವಿಶೇಷ ಸಾಂಸ್ಕೃತಿಕ ಕೊಡುಗೆಯನ್ನು ಕೊಟ್ಟಿದ್ದಾರೆ. ಎಷ್ಟೊ ಯುದ್ಧ, ಕೋಟೆ, ಸಾಮ್ರಾಜ್ಯ ವಿಸ್ತರಣೆಯನ್ನು ಮಾಡಿ ಸಾರ್ವಭೌಮರೆನಿಸಿದ್ದಾರೆ. ಅಪ್ರತಿಮ ವೀರರು ಆಳ್ವಿಕೆ ನಡೆಸಿದ್ದಾರೆ. ಆದರೆ ಇಂತಹ ಶೂರರ ಬಗ್ಗೆ ಯಾವಾಗೂ ಮೌಖಿಕವಾಗಿ ಒಂದು ಕಾವ್ಯ ಸೃಷ್ಟಿಯಾಗಿಲ್ಲ, ಅದರ ಬಗ್ಗೆ ಮಾಹಿತಿಯೂ ಕಡಿಮೆಯೇ, ಹಾಗೆಂದ ಮಾತ್ರಕ್ಕೆ ಅದರ ಸಾಧನೆಯೇನು ಕಡಿಮೆ ಇಲ್ಲ. ಆದರೆ ಇವರ ಶೌರ್ಯ ಪರಾಕ್ರಮಗಳು ಜನಪದರನ್ನು ಮುಟ್ಟಿಲ್ಲ, ಒಬ್ಬ ಸಾರ್ವಭೌಮನ ಬದುಕು ಯುದ್ಧಭೂಮಿ, ಕೋಟೆಕೊತ್ತಲಗಳ ವಿಸ್ತಾರದಲ್ಲಿಯೇ ಇರುತ್ತದೆ ಹೊರತು ಸಾಮಾನ್ಯ ಜನರ ಜೀವನಕ್ಕೆ ಎಂದೂ ಹತ್ತಿರವಾಗಿಲ್ಲ. "ನಮ್ಮ ದೇಶದ ಹೆಚ್ಚು ರಾಜರುಗಳು ಅತಿ ಸಾಮಾನ್ಯನ ಬಗ್ಗೆ ಸ್ಪಂದಿಸಿರುವುದು ಕಡಿಮೆ ಎನಿಸುತ್ತದೆ ಭವ್ಯ ಶಿಲ್ಪ ಸೌಂದರ್ಯದ ಲೆಕ್ಕಕ್ಕೆ ಸಿಗದಷ್ಟು ಶಿವ, ವಿಷ್ಣು, ರಾಮ, ಕೃಷ್ಣ, ದೇವಾಲಯಗಳನ್ನು ಮಸೀದಿ, ಮದರಸ, ಸಮಾಧಿಗಳನ್ನು ಕಟ್ಟಿದ್ದಾರೆ, ಜನಸಾಮಾನ್ಯರ ದೇವರಾದ ಮಾರಮ್ಮ, ಮಾತಂಗಿಯರ ಗುಡಿ ಕಟ್ಟಿದ್ದಿಲ್ಲ"[೭] ಹಾಗಾಗಿ ರಾಜರು ಮೌಖಿಕರ ಕಡೆಗೆ ಗಮನವನ್ನು ಹರಿಸಿಲ್ಲ. ಇಂತಹ ಸಂದರ್ಭದಲ್ಲಿ ಸಾಮಾನ್ಯ ಜನರಿಗೆ ಅರ್ಥವಾಗುವ ರೀತಿಯಲ್ಲಿ ಅವರದೇ ಜೀವನವನ್ನು ಅವರದೇ ಅನುಭವಗಳಲ್ಲಿ ನಿರ್ಮಿಸುವ ಸಲುವಾಗಿ ಮೌಖಿಕ ಕಾವ್ಯಗಳ ರಚನೆ ಅನಿವಾರ್ಯವಾಯಿತು.

ಮೌಖಿಕ ಮಹಾಕಾವ್ಯಗಳ ರಚನೆಕಾರರು ಬಹಳ ಹಿಂದುಳಿದ ಜನರಾಗಿದ್ದಾರೆ, ಇವುಗಳನ್ನು ಹಾಡುವ ಗಾಯಕರು ಇಂದಿಗೂ ಹಿಂದುಳಿದ ಪಂಗಡಕ್ಕೆ ಸೇರಿದವರಾಗಿದ್ದು ಅನೇಕ ಕಾವ್ಯಗಳನ್ನು ಹಗಲು–ರಾತ್ರಿ ಹಾಡುವ ವರ್ಗವನ್ನು ಸೃಷ್ಟಿಸಿಕೊಂಡಿದ್ದಾರೆ. ಇವರು ಹಾಡಲು ಕಟ್ಟಿದ ಹಾಡು ಯಾವುದೇ ಬಿಡಿ ಭಾಗವಾಗಿ ಖಂಡಕಾವ್ಯ ಕಥೆ, ಕಾದಂಬರಿ, ಕಾವ್ಯ ಮಹಾಕಾವ್ಯ ಯಾವುದೇ ಪ್ರಕಾರಗಳಲ್ಲಿದ್ದರೂ ಸಹ ಈ ಹಾಡಿನ ಹಿಂದೆ ಜನಪದರ ಸೃಜನ ಶೀಲತೆ ಇರುತ್ತದೆ. ಇಲ್ಲ ಒಬ್ಬರಿಂದ ಆರಂಭಗೊಂಡ ಕಾವ್ಯವು ಸಮೂಹವನ್ನು ಸೃಷ್ಟಿಸಿ ಅದಕ್ಕೆ ಒಂದು ಆಕಾರ, ರೂಪ ವಿಸ್ತಾರತೆಯನ್ನು ನೀಡುತ್ತದೆ. ಹಾಡು ಬಾಯಿದ ಬಾಯಿಗೆ ವ್ಯಕ್ತಿಯಿಂದ ವ್ಯಕ್ತಿಗೆ, ಸಮೂಹದಿಂದ ಸಮೂಹಕ್ಕೆ,

ಸಮುದಾಯದಿಂದ ಸಮುದಾಯಕ್ಕೆ ಪರಿಷ್ಕಾರಗೊಳ್ಳುತ್ತಾ ಸಾಗುತ್ತದೆ. ಇದು ಹಾಡನ್ನು ಕಟ್ಟುವ ಹಾಡುಗಾರನ ಸಾಮರ್ಥ್ಯದ ಮೇಲೆ ನಿರ್ಮಾಣಗೊಳ್ಳುತ್ತವೆ. ಮೌಖಿಕವಾಗಿ ತಮ್ಮ ಹಾಡನ್ನು ರೂಪಿಸುವಾಗ ಅವರದೇ ಆದ ಸಮಾಜ, ವೃತ್ತ, ವಲಯ, ಆವರಣಗಳಲ್ಲಿಯೇ ತಮ್ಮ ಮನಸ್ಸಿಗೆ ಬಂದ ಪಾತ್ರಗಳು ಕಂಡು ಅನುಭವಿಸಿದ ಸನ್ನಿವೇಶಗಳನ್ನು ತಮ್ಮದೇ ಮೌಖಿಕ ಭಾಷೆಯ ಮೂಲಕ ಕಟ್ಟುತ್ತಾರೆ. ಹೀಗೆ ಕಟ್ಟಿದ ಹಾಡು ಕಾವ್ಯ ರೂಪವಾಗಿ ಓದುಗನ ಮನಸ್ಸಿನಲ್ಲಿ ವಿಶಿಷ್ಟ ಸ್ಥಾನ ಪಡೆಯುತ್ತದೆ.

ಮೌಖಿಕ ಕಾವ್ಯಗಳನ್ನು ಹಾಡುವಾಗ ಗಾಯಕರು ಘಟನೆ, ಸನ್ನಿವೇಶ, ಪಾತ್ರಗಳು ಆಚರಣೆ, ಮಾಟ ಮಂತ್ರ ಜೀವನ, ಪ್ರೀತಿ, ಅಮಾಯಕತೆ, ಒತ್ತಡಗಳನ್ನು ಕಣ್ಣಿಗೆ ಕಟ್ಟುವಂತೆ ರೂಪಿಸುತ್ತಾರೆ. ಇವು ಮುಂದೆ ಮಹಾಕಾವ್ಯಗಳಾಗಿ ರೂಪುಗೊಂಡಿವು."ಇಂತಹ ಮಹಾಕಾವ್ಯಗಳನ್ನು ಹುಟ್ಟು ಬೆಳವಣಿಗೆಗಳ ದೃಷ್ಟಿಯಿಂದ ಮೂರು ವಿಧವಾಗಿ ವಿಂಗಡಿಸಬಹುದು ನಾಡಿಗಾಗಿ ದುಡಿದು ಮಡಿದ ವೀರರನ್ನು ನೆನೆಯುವ, ಪೂಜಿಸುವ ಆರಾಧಿಸುವ ಅವರ ಕೀರ್ತಿಯನ್ನು ಹೊಗಳುವ, ಪದ ಕಟ್ಟಿ ಹಾಡುವ ಕುಣಿಯುವ ಪದ್ದತಿ, ಎಲ್ಲ ಜನಾಂಗಗಳಲ್ಲಿಯೂ ಸಾಮಾನ್ಯವಾಗಿ ಕಂಡು ಬಂದಿದೆ. ಕಾಲ ಹಿಂದೆ ಸರಿದಂತೆಲ್ಲಾ ಆ ವೀರರೇ ಆಯಾ ಜನಾಂಗದ ಸರ್ವೋತ್ತಮ ಸಾಹಸ, ಸರ್ವೋಚ್ಚಸಿದ್ಧಿ ಸಕಲ ಆಶೋತ್ತರಗಳಿಗೆ ಪ್ರತೀಕಗಳಾಗಿ ಪ್ರತಿಮೆಗಳಾಗಿ ನಿಲ್ಲುತ್ತಾರೆ. ಅವರು ಕೇವಲ ವ್ಯಕ್ತಿಗಳಾಗಿರದೆ ಶಕ್ತಗಳಾಗಿರುತ್ತಾರೆ, ಅವರು ನರರಾಗಿ ಉಳಿಯದೆ ಅಮರರಾಗಿ ರಾರಾಜಿಸುತ್ತಾರೆ"[೮] ಈ ದೀರ್ಘ ಮಹಾಕಾವ್ಯಗಳು ಒಂದು ಸಮುದಾಯದ ಕುಲಚರಿತೆಯನ್ನು ಒಳಗೊಂಡಿದೆ. ಇಲ್ಲಿ ಸಮುದಾಯಗಳು ತಮ್ಮ ಜೀವನದಲ್ಲಿ ನಡೆದ ಸಂಘರ್ಷಗಳಲ್ಲಿ ಸಾಂಸ್ಕೃತಿಕ ವೀರರ ಪವಾಡಗಳನ್ನು ಕಟ್ಟಿಕೊಡುತ್ತವೆ.

ದಕ್ಷಿಣ ಭಾರತದ ಮೌಖಿಕ ಕಾವ್ಯಗಳು ರೂಪಗೊಂಡಿದ್ದು ೧೫-೧೬ನೇ ಶತಮಾನದ ಕಾಲಘಟದಲ್ಲಿ ಇವು ಆಯಾ ಸಮುದಾಯಗಳ ಪವಾಡ ಪುರುಷರ ಚರಿತ್ರೆಯಾಗಿದೆ. ಹಾಗೂ ಸಾಮಾಜಿಕ ಪರಿವರ್ತನೆಯ ಸಂಘರ್ಷದ ಮೂಲಕ ನಿರೂಪಿಸುತ್ತವೆ. ಅಲ್ಲದೆ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಪರಿವರ್ತನೆಯು ಕೂಡ ಈ ಕಾವ್ಯಗಳಲ್ಲಿ ಕಂಡುಬರುತ್ತದೆ. ಮಹಾಕಾವ್ಯಗಳ ನಾಯಕರು ಸಾಮಾನ್ಯ ಜನರ ಸಾಮಾಜಿಕ, ಸಾಂಸ್ಕೃತಿಕ ಏಳಿಗೆಗೆ ದುಡಿಯುತ್ತಾ ಅವರ ಕಷ್ಟ ಒತ್ತಡ, ಸಮಸ್ಯೆಗಳನ್ನು ಪರಿಹರಿಸುತ್ತಾ ಒಕ್ಕಲು ಮಾಡಿಕೊಂಡದ್ದನ್ನು ಕಾಣಬಹುದು. ಇಂತಹ ನಾಯಕರ ಆಕಾರ, ವೇಷ, ಭೂಷಣ, ಪವಾಡಗಳನ್ನು ಕಣ್ಣಿಗೆ ಕಟ್ಟುವಂತೆ ಹೇಳುವುದು ಹಾಡುಗಾರರ ಮನೋಭೂಮಿಕೆಯಲ್ಲಿದೆ. ಜನಹಿತಕ್ಕಾಗಿ ದುಡಿದ ಪಾಳೆಗಾರರ ಸೊಕ್ಕು ಅಡಗಿಸಿ ತನ್ನದೇ ತತ್ವ ಸಿದ್ಧಾಂತಗಳೊಂದಿಗೆ, ಭಿನ್ನ ವ್ಯವಸ್ಥೆಯೊಂದಿಗೆ ಹೋರಾಡುತ್ತಾರೆ. ಇಂತಹ ಅಸಹಜ ಜೀವನ ಮಹಾಕಾವ್ಯದ ನಾಯಕರುಗಳಾದ್ದಾಗಿರುತ್ತದೆ. ಇವರ ಸಾವಿನ ನಂತರ ಈ ನಾಯಕರ ದೈವತ್ವಕ್ಕೇರುವುದರ ಮೂಲಕ ಜನರ ನಿತ್ಯ ಜೀವನ ಚಲನೆಯ ಭಾಗವಾಗಿ ದೈವೀ ಭಾವ ತುಂಬತೊಡುಗುತ್ತಾನೆ.

ಮೌಖಿಕ ಕಾವ್ಯಗಳ ಮೂಲ ಆದಿಮ ಗೀತೆಗಳು, ಲಾವಣಿಗಳು, ಆಗಿವೆ. ಅನಕ್ಷರಸ್ಥರು, ಸಾಮಾನ್ಯರು ಹಾಡಿದ ಗೀತೆಗಳು ಇಲ್ಲಿ ಪ್ರಮುಖವಾಗಿವೆ. ಮೌಖಿಕ ಕಾವ್ಯದ ಮುಂದುವರೆದ ವ್ಯಾಪ್ತಿಯೇ

ಖಂಡಕಾವ್ಯವಾಗಿದೆ. ಅನೇಕ ಕಥೆಗಳನ್ನು ಒಳಗೊಂಡ ಗುಚ್ಛವೇ ಮೌಖಿಕ ಮಹಾಕಾವ್ಯವಾಗಿದೆ. ವಿಂಟರ್ ನಿಟ್ಸ್ ಅವರ ಹಳೆಯ ಲಾವಣಿಗಳು ಮಹಾಕಾವ್ಯದ ಮೂಲ ವಿರಬಹುದು ಎಂದು ಅನೇಕ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಲಾವಣಿಗಳೇ ಬೆಳೆದು ಮಹಾಕಾವ್ಯಗಳಾಗುವುದರ ಜೊತೆಗೆ ಈ ಕಾವ್ಯಗಳಲ್ಲಿ ಸಾಮಾಜಿಕ, ರಾಜಕೀಯ ಸ್ಥಾನಮಾನಗಳಿಂದ ಅಲಕ್ಷಕ್ಕೆ ಒಳಗಾದ ಜನ ಸಮುದಾಯದಲ್ಲಿ ಹುಟ್ಟಿ ಬಂದಿದೆ ಎಂದೇ ಹೇಳಬಹುದು.

ಮೌಖಿಕ ಕಾವ್ಯಗಳಲ್ಲಿ ಹೀಗೆ ಜನ ಹಿತಕ್ಕಾಗಿ ಹೋರಾಡಿ ಮಡಿದ ದೈವತ್ವಕೇರಿದ ಅನೇಕ ಸಾಂಸ್ಕೃತಿಕ ನಾಯಕರು, ಸತಿಯರು, ವೀರರು, ತ್ಯಾಗಿಗಳು ಇದ್ದಾರೆ, ಅವರನ್ನು ಕುರಿತಂತೆ ಅನೇಕ ಹಬ್ಬ, ಆಚರಣೆ ಜಾತ್ರೆ, ಇತ್ಯಾದಿ, ಧಾರ್ಮಿಕ ಆಚರಣೆಗಳು ಇಂದಿಗೂ ನಡೆದುಕೊಂಡು ಬರುತ್ತಿವೆ. "ಮಹಾಕಾವ್ಯಗಳೆಂಬ ಶೀರ್ಷಿಕೆಯಡಿಯಲ್ಲಿ ನಿಂತಿರುವ ಕಾವ್ಯಗಳು ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಯನ್ನು ತೋರಿಸುವುದರ ಜೊತೆಗೆ ತಮ್ಮ ಸಮುದಾಯದ ಒಳಗಿನ ಜನರಿಗೂ ಅರಿವು ಮೂಡಿಸುವ ಆಶಯಗಳನ್ನು ಹೊಂದಿವೆ. ಸಮುದಾಯಗಳ ಇಂಥ ಪ್ರಜ್ಞೆಯಿಂದ ಇತಿಹಾಸದ ವಿವಿಧ ರೀತಿಯ ತಲ್ಲಣಗಳ ಸಂದರ್ಭದಲ್ಲಿ ಅತ್ಯಂತ ಕ್ರಿಯಾಶೀಲವಾಗಿರುತ್ತದೆ. ಆದ್ದರಿಂದಲೇ ಪರಂಪರೆಯಿಂದ ಬೇರೆ ಬೇರೆ ರೂಪದಲ್ಲಿ ಬೆಳವಣಿಗೆ ಸಾಧಿಸುತ್ತಾ ಬಂದಿರುವ ಕಾವ್ಯಗಳಂತೆ ಆಗಾಗ ಚಾರಿತ್ರಿಕ ಅನಿವಾರ್ಯತೆಗಳಿಂದ ಸೃಷ್ಟಿಯಾದ ಹೊಸ ಕಾವ್ಯಗಳು ಇದೆ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ"[೯] ಮೌಖಿಕ ಕಾವ್ಯಗಳನ್ನು ಹಾಡುವ ನಾಯಕರು ವಾಚನಕ್ಕೆ ಅಗತ್ಯವಾದ ಕಥೆ, ಸ್ಥಳ, ಕಾಲ, ಸಂದರ್ಭವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಕಾವ್ಯದಲ್ಲಿ ಬರುವ ನಾಯಕನೇ ಪ್ರಮುಖನಾದರೂ ಕೆಲವು ಸಂದರ್ಭದಲ್ಲಿ ಕಾವ್ಯದಲ್ಲಿ ಬರುವ ಕಥನಕ್ಕೆ ಪೂರಕವಾಗಿ ಇತರ ಮುಖ್ಯ ಪಾತ್ರಗಳು ಪ್ರಧಾನವಾಗಿರುತ್ತವೆ, ಆ ಪಾತ್ರಗಳೆ ಕಾವ್ಯದಲ್ಲಿ ಮರೆಯಾಗಿಯೂ ಮರೆಯಾಗದಂತೆ ಕಾವ್ಯವನ್ನು ಮುನ್ನಡೆಸುತ್ತಾ ಹೋಗುತ್ತಾರೆ, "ಅಚ್ಚರಿಯ ಘಟನೆ, ನಿರೀಕ್ಷಿತ–ಅನಿರೀಕ್ಷಿತ ತಿರುವುಗಳ ಸಾಹಸ, ಅತಿಮಾನುಷತ್ವದ ಪ್ರದರ್ಶನಗಳ ಮೂಲಕ ಕಥನದ ಒಡಲು ತೀವ್ರತೆಯಿಂದ ಕೂಡಿರುತ್ತದೆ. ಈ ಮಹಾಕಾವ್ಯಗಳು ಶಕ್ತ ಶರೀರವಾಗಿ ಬೆಳೆದು ಕೇಳುಗನನ್ನು ಹಿಡಿದಿಡುವ ಬಂಧ ಚುರುಕುತನ, ಕಥನ ಶೈಲಿ, ಇವೆಲ್ಲವೂ ಮೌಖಿಕರ ಕಥೆಯ ಧೀರ್ಘತೆಯನ್ನು ಗುರುತಿಸುತ್ತವೆ, ಅವು ಕಥೆಯ ಗಟ್ಟಿತನಕ್ಕೆ ಪೂರಕವಾಗಿ ಒಂದು ಆವರಣವನ್ನೇ ಸೃಷ್ಟಿಸುತ್ತದೆ."[೧೦] ಅಲ್ಲದೇ ಈ ಪಾತ್ರಗಳು ನಾಯಕರ ಉನ್ನತ ಸ್ಥಾನಕ್ಕೆ ಏರಲು ಸಹಾಯಕವಾದವು. ಕಾವ್ಯಗಳಲ್ಲಿ ಬರುವ ಕೆಲ ಪಾತ್ರಗಳು ನಾಯಕರ ವಿರುದ್ಧವಾಗಿ ನಿಂತರು ಸಹ ಅಲ್ಲಿ ನಾಯಕನ ಸ್ಥಾನವು ಭಕ್ತರಲ್ಲಿ ಚಿರಾಯುವಾಗಿ ಉಳಿಯುವಂತೆ ಮಾಡುತ್ತಾರೆ.

ಮೌಖಿಕ ಮಹಾಕಾವ್ಯಗಳನ್ನು ಹಾಡುವಾಗ ನಾಯಕರ ಶೌರ್ಯ, ಶಾಂತಿ ಸಂಧಾನ, ಪ್ರೀತಿ, ವಾತ್ಸಲ್ಯಗಳನ್ನು ಆಯಾ ಸಂದರ್ಭಕ್ಕೆ ತಕ್ಕಂತೆ ಪಲ್ಲವಿ ಸೊಲ್ಲುಗಳು, ಪರಸ್ಪರ ಸಂಬಂಧ ಇವುಗಳ ಮಿಶ್ರಣದ ಮೂಲಕ ಹಾಡುತ್ತಾರೆ

ಉದಾಹರಣೆ: – ಮಂಟೇಸ್ವಾಮಿಯ ಕುರಿತ ಸಾಲುಗಳು

" ನೀಲಗಾರರ ಭೋಗಿ ನೀಲಿಸಿದ್ದಯ್ಯ ಬನ್ನಿ

ಸಿದ್ದಯ್ಯ ಸ್ವಾಮಿ ಬನ್ನಿ

ಪವಾಡ ಗೆದ್ದಯ್ಯ ಸ್ವಾಮಿ ಬನ್ನಿ

ಆದಿ ಸಿದ್ದರಿಗೆಲ್ಲ ಅತಿಮುದ್ದು ಘನನೀಲ

ಸಿದ್ದಯ್ಯ ಸ್ವಾಮಿ ಬನ್ನಿ

ಬಾರದ ಪವಾಡಕ್ಕಲ್ಲ ಬಂದು ಬಡಗೊ

ಘನ ನೀಲ ಸಿದ್ದಯ್ಯ ಶಿವನೆ"[೧೧]

ಹೀಗೆ ಸಿದ್ದ ವರ್ಣಗಳನ್ನು ಒಂದೇ ಕಾವ್ಯದ ಒಳಗೆ ಅಗತ್ಯವೆನಿಸಿದಾಗಲೆಲ್ಲ ಬೇರೆ ಬೇರೆ ಕ್ರಮಗಳಲ್ಲಿ ತಂದು ಕಾವ್ಯಗಾಯನದಲ್ಲಿ ಹಾಡುತ್ತಾರೆ ಒಟ್ಟಿನಲ್ಲಿ ಈ ಮಹಾಕಾವ್ಯಗಳು ಒಂದು ಪ್ರದೇಶದ ಗುಣ ವೀರತನ ನಂಬುಗೆ, ಆರಾಧನೆಗಳನ್ನು ಸಮಾಜಕ್ಕೆ ಹೇಗೆ ಅಭಿವ್ಯಕ್ತಿಸಬಹುದು ಎಂಬುದನ್ನು ತಿಳಿಯಬಹುದು ಕೆಲ ಸಮುದಾಯಗಳು ಹಾಡಿಕೊಂಡು ಬಂದ ಕಾವ್ಯಗಳ ಸ್ವರೂಪ ಸಂಸ್ಕೃತಿಯು ಆಯಾ ಸಮುದಾಯಗಳ ಧಾರ್ಮಿಕ ರಚನೆಯನ್ನು ರೂಪಿಸಿದವುಗಳಾಗಿವೆ. ಈ ಕಾವ್ಯಗಳು ಸಮುದಾಯಗಳ ಪರಂಪರೆ ನಾಗರಿಕ ಕಾಲಘಟ್ಟದಲ್ಲಿ ಹೇಗೆ ತನ್ನ ಸಂಸ್ಕೃತಿಯನ್ನು ಅಭಿವ್ಯಕ್ತಿಸುತ್ತವೆ ಹಾಗೂ ಮೌಖಿಕವಾಗಿ ಜನರಿಗೆ ನವ ಮೌಖಿಕತೆಯೆಡೆಗೆ ಕರೆದೊಯ್ಯುವ ಸಾಧ್ಯತೆಗಳನ್ನು ಹೇಳಲಾಗಿದೆ. ಒಬ್ಬ ಸಾಂಸ್ಕೃತಿಕ ವೀರನ ನಾಯಕಗುಣ, ಗೀತೆ ಇವೆಲ್ಲವೂ ಕಾವ್ಯದ ಪರಿಸರ ನಿರ್ಮಾಣವಾಗಬಹುದು.

೨.೨ ಮೌಖಿಕ ಮಹಾಕಾವ್ಯ ಪರಂಪರೆ: ಪುರಷ ಪಠ್ಯಗಳು

ಮೌಖಿಕ ಕಾವ್ಯಗಳು ಅತ್ಯಂತ ವಿಸ್ತಾರವಾದ ಮತ್ತು ವ್ಯಾಪಕವಾದ ನೆಲೆಯನ್ನು ಹೊಂದಿವೆ. ಮೌಖಿಕ ಕಾವ್ಯಗಳಲ್ಲಿ ಅನೇಕ ಪಾತ್ರ ಮತ್ತು ಘಟನೆಗಳಿದ್ದು ಕೇಳುಗರನ್ನು ಆಕರ್ಷಿಸುತ್ತವೆ. ಈ ಕಾವ್ಯಗಳು ಒಂದು ಸಮುದಾಯದ ಆಶೋತ್ತರಗಳಿಗೆ ಬೆಳಕನ್ನು ಚೆಲ್ಲುವ ದೀರ್ಘವಾದ ಕತೆ ಹಾಗೂ ವಿಸ್ತಾರವಾದ ಹರವುಳ್ಳ ರಚನೆಯನ್ನು ಒಳಗೊಂಡಿವೆ. ಮೌಖಿಕ ಮಹಾಕಾವ್ಯ ಪರಂಪರೆ ಹೇಗೆ ರೂಪುಗೊಂಡು ಬೆಳೆದು ಬಂದಿತು ಎನ್ನುವ ಬಗ್ಗೆ ಅನೇಕ ವಾದಗಳು ಹುಟ್ಟಿಕೊಳ್ಳುತ್ತವೆ. ಅನಾದಿಕಾಲದ ಜನರು ತಮ್ಮ ಆಹಾರ ಸಂಗ್ರಹಣೆ, ಉತ್ಪಾದನೆ ಸಮಯದಲ್ಲಿ ತೊಡಗಿದಾಗ ಬಂದಂತಹ ಗೀತೆಗಳನ್ನು ಒಟ್ಟುಗೂಡಿಸಿದಾಗ ಆದಂತಹ ಸಂಪಾದನಾ ಕಾರ್ಯವೇ ಮಹಾಕಾವ್ಯವಾಯಿತು, ಎನ್ನುವ ವಿದ್ವಾಂಸರಿದ್ದರೆ ಒಂದು ಸಮುದಾಯದ ವೃತ್ತಿ ಆಚರಣೆ ಸಂಪ್ರದಾಯಗಳು ವೀರರಿಗೆ ಸಂಬಂಧಿಸಿದ ಕೆಲವು ಕಥನ ಗೀತೆಗಳನ್ನು ವ್ಯವಸ್ಥಿತ ರೂಪಕ್ಕೆ ಜೋಡಿಸಿದಾಗ ಅದಕ್ಕೊಂದು ಸಾಂಸ್ಕೃತಿಕ ರೂಪ ಕೊಟ್ಟಾಗ ಮಹಾಕಾವ್ಯ ರೂಪ ತಳೆಯಿತು ಈ ಹಿನ್ನೆಲೆಯಲ್ಲಿ ಮಹಾಕಾವ್ಯ ಪರಂಪರೆಯ ಮೊದಲು ಪ್ರಾರಂಭವಾಗಿದ್ದೆ ೧೮೩೫ರಲ್ಲಿ ಕಲೇವಾಲ ಎಂಬ ಮಹಾಕಾವ್ಯದೊಂದಿಗೆ. ಈ ಕಾವ್ಯ ಫಿನ್‌ಲೆಂಡ್ ಜನರಿಗೆ ಇಂದಿಗೂ ಒಂದು ಮಹತ್ವದ ಕಾವ್ಯವಾಗಿದೆ. ಇನ್ನೊಂದು ವಾದವೆಂದರೆ ಜನರು ಒಂದು

ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುವಾಗ ದಾರಿಯುದ್ದಕ್ಕೂ ತಮ್ಮ ಸಮುದಾಯದ ನಾಯಕನ ಕತೆಯನ್ನು ಹಾಡುತ್ತಾ ಹೋಗುವಾಗ ಚಿಕ್ಕದಾಗಿದ್ದ ಕಾವ್ಯಗಳು ಆ ನಾಯಕರನ್ನು ಕುರಿತು ಅನೇಕ ಪವಾಡಗಳನ್ನು ಸೃಷ್ಟಿಸುತ್ತಾ ಬಂದಿರುತ್ತಾರೆ. ಅವು ಉಪಕಥೆಗಳಾಗಿ ಸೇರಿ ಕಾಲಾನಂತರದಲ್ಲಿ ದೊಡ್ಡದಾಗಿ ಬೆಳೆಯುತ್ತಾ ಹೋದವು. ಇವು ಹಲವು ಪೀಳಿಗೆಗಳಲ್ಲಿ ಮುಂದುವರೆದಂತೆಲ್ಲಾ ಕಾವ್ಯಗಳು ಬೃಹತ್ತಾಗಿ ಬೆಳೆದು ಮಹಾಕಾವ್ಯಗಳಾದವು. "ಗ್ರಾಮೀಣ ಜನರು ತಮ್ಮ ಇಡೀ ಪ್ರದೇಶದ ಪರಿಸರದ ಜನಾಂಗದ ಆದರ್ಶ ವೀರರನ್ನು ಮುಖಂಡರನ್ನು ಅವನು ಮಾಡಿದ ಅಸಾಧಾರಣವಾದ ಸಾಧನೆಗಳನ್ನು ಮತ್ತು ತೋರಿಸಿದ ವಿಶಿಷ್ಟ ಸಾಹಸವನ್ನು ತನ್ನ ಬದುಕಿನ ಮೂಲಕ ಧ್ವನಿಸಿದ ಜೀವನ ತತ್ವವನ್ನು ಸುಧೀರ್ಘ ಕಾವ್ಯಗಳ ಮೂಲಕ ಅನನ್ಯವಾಗಿ ಅಭಿವ್ಯಕ್ತಿಸಿದ್ದಾರೆ. ಈ ಸುಧೀರ್ಘವಾದ ಅನನ್ಯ ಅಭಿವ್ಯಕ್ತಿಯೇ ಮಹಾಕಾವ್ಯವಾಗಿದೆ"[೧೨]

ಮೌಖಿಕ ಮಹಾಕಾವ್ಯ ಪರಂಪರೆ ಅನಾದಿ ಕಾಲದಿಂದಲೂ ಹುಟ್ಟಿ ಕ್ರಮೇಣ ತಲಮಾರುಗಳು ಬದಲಾದಂತೆ ಮಹಾಕಾವ್ಯವು ಬೆಳೆಯುತ್ತಾ ಹೋಯಿತು. ಗಿಲ್ಲಮಿಷ್ ಎನ್ನುವ ಬ್ಯಾಬಿಲೋನಿಯನ್ನರ ಮೌಖಿಕ ಮಹಾಕಾವ್ಯ ಪಾಶ್ಚಾತ್ಯ ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನವಾದ ಕಾವ್ಯವಾಗಿದೆ. ಈ ಮೌಖಿಕ ಕಾವ್ಯಗಳು ಮೇಲ್ವರ್ಗದಲ್ಲಿ ರಾಜ ಪರಿವಾರದ ಗಾಯಕರಲ್ಲಿ ಹುಟ್ಟಿತು. ನಂತರ ಅದನ್ನು ವೃತ್ತಿಗಾಯರರು ಅನುಸರಿಸಿ ಬೆಳೆಸಿಕೊಂಡು ಹೋದರು, ಈಗ ಕಾವ್ಯಗಳು ಸಂಪೂರ್ಣವಾಗಿ ಬದಲಾಗಿ ಸಾಮಾನ್ಯ ಜನರ, ರೈತಾಪಿ ಜನ, ಕಾರ್ಮಿಕ ಜನರ ತುಳಿತಕ್ಕೆ ಒಳಗಾದವರ ಸಂವೇದನೆಯನ್ನು ಒಳಗೊಂಡಿದೆ.

"ಒಂದು ಜನಾಂಗದ ಸಾಂಸ್ಕೃತಿಕ ವೀರನ ಇತಿಹಾಸವು ಜನತೆಯ ಹೃದಯಾಂತರಾಳವನ್ನು ಸೂರೆಗೊಂಡಾಗ ಐತಿಹ್ಯವಾಗಿ, ಪುರಾಣವಾಗಿ, ಪರಿವರ್ತನೆ ಹೊಂದಿ ಕಥನ ರೂಪದಲ್ಲಿ ಅಭಿವ್ಯಕ್ತಿಗೊಂಡಾಗ ವಸ್ತುನಿಷ್ಟ ಕಾವ್ಯವೊಂದು ರೂಪುಗೊಳ್ಳುತ್ತದೆ. ಈ ಕಾವ್ಯ ಪರಂಪರೆಯು ನುಡಿ ನಾಲಿಗೆಯಲ್ಲಿ ಹರಿದು ಬರುವಾಗ ಕಾಲ ಕಾಲಕ್ಕೆ ಬದಲಾವಣೆಯನ್ನು ಹೊಂದುತ್ತಾ, ಬೆಳೆಯುತ್ತಾ, ತನ್ನ ಗಾತ್ರ, ಪಾತ್ರ, ಮತ್ತು ಸೂತ್ರಗಳನ್ನು ವಿಸ್ತರಿಸಿಕೊಳ್ಳುತ್ತಾ ಹೋಗುತ್ತದೆ. ಹೀಗೆ ಬೆಳೆದ ಕಾವ್ಯ ಒಬ್ಬ ವ್ಯಕ್ತಿಯಾದಗಿರದೆ ಸಮಗ್ರ ದೇಶದ ಅಥವಾ ಜನಾಂಗದ ವಾಣಿಯಾಗಿದ್ದು ಮಹಾ ವೃಕ್ಷದಂತೆ ಆ ಜನಾಂಗಕ್ಕೆ ಆಶ್ರಯ ಛಾಯೆಯನ್ನು ದಾನಮಾಡುವಂತೆ ತೋರುತ್ತದೆ."[೧೩]

"ಲೌರಿ ಹಾಂಕೊ ಅವರು ಒಂದು ಮಹಾಕಾವ್ಯ ಬಹುಮುಖ್ಯವಾಗಿ ಸುಧೀರ್ಘವಾಗಿದ್ದು ಕನಿಷ್ಟ ಸಾವಿರ ಪಂಕ್ತಿಗಳಿರಬೇಕು ಹೀಗಿಲ್ಲವಾದಾಗ ಅದು ಕವಿತೆಯಾಗುತ್ತದೆ ಎನ್ನುತ್ತಾರೆ"[೧೪] ಮೌಖಿಕ ಕಾವ್ಯಗಳು ಹಾಡುಗಾರನಿಂದ ಪ್ರಾರಂಭವಾಗಿ ಅನೇಕ ಮಜಲುಗಳಿಂದ ಪುನರ್ ಸೃಷ್ಟಿಯಾಗುತ್ತದೆ. ಒಬ್ಬಗಾಯಕನ ಕಾವ್ಯ ಒಂದು ರೀತಿ ಇದ್ದರೆ ಮತ್ತೊಬ್ಬ ಗಾಯಕನ ಕಾವ್ಯ ಇನ್ನೊಂದು ರೀತಿ ಇರುತ್ತದೆ. ಪ್ರತಿಯೊಂದು ಸಂದರ್ಭದಲ್ಲಿ ಪ್ರಕಟ ಅಥವಾ ಪ್ರದರ್ಶನಗೊಳ್ಳುವ ಸಂದರ್ಭದಲ್ಲಿ ಮೌಖಿಕ ಕಾವ್ಯಗಳು ಬದಲಾಗುತ್ತಾ ಹೋಗುತ್ತವೆ. ಈ ಬದಲಾವಣೆಗಳು ಹಾಡುವ ಗಾಯಕರಲ್ಲಿ

ಕೆಲ ವ್ಯತ್ಯಾಸಗಳೊಂದಿಗೆ ಬದಲಾವಣೆ ಆಗಬಹುದು. ಗಾಯಕರಿಂದಲೇ ನಿರ್ಮಾಣವಾಗುವ ಮೌಖಿಕ ಕಾವ್ಯಗಳು ಅವರಿಂದಲೇ ಹಾಡಲ್ಪಟ್ಟು ಶಿಷ್ಯರ ಕೈಯಲ್ಲಿ ಭಿನ್ನ ಭಿನ್ನ ಪಠ್ಯಗಳಾಗಿ ಬದಲಾಗುತ್ತವೆ. ಮೌಖಿಕ ಕಾವ್ಯಗಳ ಲಕ್ಷಣಗಳನ್ನು ಅನೇಕ ವಿದ್ವಾಂಸರು ಬೇರೆ ಬೇರೆ ದೃಷ್ಟಿಕೋನಗಳಿಂದ ವಿಶ್ಲೇಷಿಸಿದ್ದಾರೆ. ಇಂದಿಗೂ ಕಾವ್ಯಗಳು ಜೀವಂತವಾಗಿರುವುದು ಅವುಗಳನ್ನು ಪಠ್ಯೀಕರಣರೂಪಕ್ಕೆ ತಂದಿರುವ ಫಲವಾಗಿ ಎನ್ನುಬಹುದು. ಕರ್ನಾಟಕದಲ್ಲಿ ಡಾ.ತೀ.ನಂ.ಶಂಕರನಾರಾಯಣ, ಡಾ.ಕೆ.ಪಿ.ರಾಜಶೇಖರ್. ಡಾ.ಎವ್.ಬಿ. ನೇಗಿನಾಹಾಳ ಡಾ.ಹೆಚ್.ಜೆ.ಲಕ್ಕಪ್ಪಗೌಡ, ಡಾ.ಬಿ.ಎ.ವಿವೇಕ ರೈ, ಡಾ.ಹಿ.ಚಿ.ಬೋರಲಿಂಗಯ್ಯ ಡಾ.ವಾಮನ ನಂದಾವರ ಪ್ರೊ. ಎ.ವಿ. ನಾವಡ ಡಾ. ಚನ್ನಪ್ಪಗೌಡ ಮೊದಲಾದವರು ಮೌಖಿಕ ಕಾವ್ಯಗಳ ಸಂಗ್ರಹ ಮಾಡುತ್ತಿದ್ದಾರೆ. ಕನ್ನಡದಲ್ಲಿ ಮಲೆಮಾದೇಶ್ವರ, ಮಾಟೇಸ್ವಾಮಿ ಜುಂಜಪ್ಪ. ಮೈಲಾರಲಿಂಗ, ಮಾಳಿಂಗರಾಯ, ಕುಮಾರರಾಮ, ಕಾಳಿಂಗರಾಯ ಕಾವ್ಯಗಳು ಸಂಗ್ರಹವಾಗಿವೆ.

ಮೌಖಿಕ ಕಾವ್ಯಗಳ ಪರಂಪರೆ ಮಹತ್ವವನ್ನು ಪಡೆದು ಇಂದಿಗೂ ಆಚರಣೆಯಲ್ಲಿರುವುದು ಒಬ್ಬ ಸಾಂಸ್ಕೃತಿಕ ವೀರನ ಸುತ್ತ ಒಂದು ಸಮುದಾಯದ ಜೀವನದ ಸುತ್ತ ಅನೇಕ ಮಜಲುಗಳಲ್ಲಿ ಸಾಗುವುದಾಗಿವೆ. ಆಯಾ ಸಮುದಾಯಕ್ಕೆ ಸೇರಿದ ಗಾಯಕರು ತಮ್ಮದೇ ಪಂಥದ ನಾಯಕರನ್ನು ಕುರಿತು ಹಾಡುವ ಮತ್ತು ಕೇಳುವ, ಸಂಪ್ರದಾಯವನ್ನು ಬೆಳೆಸಿಕೊಂಡಿರುತ್ತಾರೆ. ಈ ಪದ್ಧತಿ ತಮ್ಮ ಆಚರಣೆಗಳ ಒಂದು ಭಾಗವಾಗಿದೆ. ಮಹಾಕಾವ್ಯಕ್ಕೆ ಸಂಬಂಧಿಸಿದಂತೆ ಎಲ್ಲಾ ಭಾಗಗಳನ್ನು ಗಾಯಕ ಹಾಡುವುದಿಲ್ಲ ಅಥವಾ ಕೆಲವು ಬಾರಿ ಹಾಡಲು ಗೊತ್ತಿದ್ದರೂ ಹಾಡಲು ಸಾಧ್ಯವಾಗದೆ ಹೋಗಬಹುದು. ಮಹಾಕಾವ್ಯಗಳಲ್ಲಿ ಕೆಲವು ಆಸಕ್ತಿ, ಕುತೂಹಲ ಕೆರಳಿಸುವ ಕತೆಗಳು ಹೆಚ್ಚು ಜನಪ್ರಿಯವಾದಾಗ ಗಾಯಕರು ಅಂತಹ ಪ್ರಸಂಗಗಳನ್ನು ಮಾತ್ರ ಹಾಡುತ್ತಾರೆ. ತಮ್ಮ ಹಾಡಿನ ಮೂಲಕವೇ ತಮ್ಮ ನಾಯಕನನ್ನು ಸಾಂಸ್ಕೃತಿಕ ನಾಯಕನನ್ನಾಗಿಸುತ್ತಾರೆ ಪ್ರಾರಂಭದಲ್ಲಿ ಸಮುದಾಯದ ನಾಯಕನು ಸಾಮಾನ್ಯ ಮನುಷ್ಯ ಜೀವನ ನಡೆಸುತ್ತಿದ್ದು ನಂತರ ಅತಿಮಾನುಷ ದೈವವಾಗುವುದನ್ನು ಗಾಯಕ ಕಟ್ಟಿಕೊಡುತ್ತಾನೆ. ಗಾಯಕರು ಹಾಡುವಾಗ ಕೆಲವು ನಿಯಮಗಳನ್ನು ಪಾಲಿಸುತ್ತಾರೆ. ಮೌಖಿಕ ಕಾವ್ಯಗಳಲ್ಲಿ ಕಾವ್ಯ ಸ್ತುತಿಯೊಂದಿಗೆ ಪ್ರಾರಂಭವಾಗಿ ಕೊನೆಯಲ್ಲಿ ಮಂಗಳ ಇರುತ್ತದೆ. ಸ್ತುತಿ ಮತ್ತು ಮಂಗಳ ಕಾವ್ಯದ ನಡುವೆ ನಾಯಕನ ಸಾಹಸ, ಸಾಧನೆ, ಸಂಸ್ಕೃತಿ, ಕಥೆ, ಉಪಕಥೆಗಳನ್ನು ಹಾಡುತ್ತ ಹೋಗುವರು.

ಉದಾ:- ಮಂಟೇಸ್ವಾಮಿ ಕಾವ್ಯದ ಪ್ರಾರ್ಥನೆ

"ಗಜಮುಖ ಗರ್ಭಾಧಿಪನೆ ನಿನಗೆ ಶರಣೋ

ಜೊತೆಗೆ ಬಾಪುರೀ

ಮತಿಗೆ ಮಂಗಳಂ

ಅತಿರುದ್ರ ಗಣನಾಯಕ

ವಂದಿಪೆ ಶರಣು ದೇವಾ

ದೇವಾ

ನಿನಗೆ ಎತ್ತುಬಾರದ ಹೊಟ್ಟೆ
ಸುತ್ತ ಸರ್ಪನ ಕಟ್ಟು
ಪಟ್ಟದ ಪಾರ್ವತಿಯ ಮಗನೆ
ವೀರುಭದ್ರ ವಿನಿನಾಯಕ
ಜೋಯಿಸುವ ಕರ್ಣರ್‍ನೆ
ಕಾಲಾರು ಕಂಗಳಾರು ದೇವಾ
ಲಾಲಿಸಿ ಪೇಶ್ವವರಿಗೆ
ಮುಕ್ತಿ ಫೆಲವುಂಟು ಗಣನಾಯ್ಕ
ಶರಣು
ನಿನಗೆ ಕೈ ಎಡು ಕಾಲೆರಡು
ಕೋಟಿ ಮಾರ್ಬಲದಂಡು
ಪಾತಾಳ ಲೋಕಕಳಿಯಲು
ಮಿರಿದಾ ದಂಡು
ಕೈಲಾಸದಲಿರುವ ಲಾದವಿಲ್ಲದ ಗಂಟೆ
ಲಾದ ಶಬ್ದವ ಕೇಳ
ನರಲೋಕದಲಿ ನರ ಮಾನವರು ಪಂಚೈದು
ಜಗುಲಿಯೆನು ಏರಿ
ಪಂಚೈದು ಲಿಂಗವನು ಪೂಜೆ ಮಾಡಿ
ಶಿವನತ್ರ ಮೋಕ್ಷ ಪಡೆದವರು ಮೂರು ಶಂಕರಾ
ಶಂಕರಾ
ಒಂಬತ್ತು ಬಾಗಿಲೊಳು ಬಂದಂತ
ಸೊಂಡಿಲ ಭೀಮಯ್ಯ
ಅಲಕದೆ ಗಿಲಕದೆ ಗೆಲಸಿದೆ ಉಂಟೆ ಗಣನಾಯ್ನಾ
ದೇವಾ
ನಮ್ಮಯ ಗಣೆನಾಯಕಾ
ಗೌರಿಕುಮಾರ ನಮ್ಮಯ ಗಣೆನಾಯಕಾ ॥ನಮ್ಮಯ॥[೧೫]

ಮಂಗಳಾರತಿ ಮಂಟೇಸ್ವಾಮಿ ಕಾವ್ಯ

ಮಂಗಳ ಮಂಗಳ ಮಂಗಳಾರುತಿ

ಮಂಟೇ ಸ್ವಾಮಿಗೆ

ನಾವೆತ್ತುವೆವು ಧೂಪದಾರುತಿ

ಸಿದ್ದಪ್ಪಾಜಿಗೆ

ನನ್ನ ಚಿಕ್ಕಲ್ಲೂರಲ್ಲಿ ಪಡೆದು ಮೂಡಿರುವ

ಸಿದ್ದಾಪ್ಪಾಜಿಗೆ

ನನ್ನ ಬಪ್ಪಗೌಡ್ನ ಪುರದಲ್ಲಿ ವರಗಿರುವ

ಮಂಟೇಸ್ವಾಮಿಗೆ

ನನ್ನ ಕಪ್ಪಡಿ ಕೈಲಾಸದಲ್ಲಿರುವ

ರಾಚಪ್ಪಾಜನಿಗೆ

ನನ್ನ ಮುತ್ನಳ್ಳಿ ತೋಪಲ್ಲಿ ಮುಟ್ಟಾಗಿರುವ

ದೊಡ್ಡಮ್ಮ ತಾಯಿಗೆ

ನನ್ನ ಆಕಾಶವೇಣಿ ಭೂಮಿತಾಯಿ

ಸೂರ್ಯಚಂದ್ರರಿಗೆ

ನನ್ನ ಸೂರ್ಯದೇವ ಸುಕುಮಾರ

ಶನಿದೇವರಿಗೆ

ನನ್ನ ಚುಂಚನಗಿರಿವಿ ವರಗಿರುವ

ಭೈರುವ ಸ್ವಾಮಿಗೆ

ನನ್ನ ದಕ್ಷಿಣ ಕಾಶೀಲಿ ವರಗಿರುವ

ನಂಜುಂಡ ಸ್ವಾಮಿಗೆ

ನನ್ನ ಬೆಳ್ಳಿ ಬೆಟ್ಟದಲ್ಲಿ ವರಗಿರುವ

ರಂಗಸ್ವಾಮಿಗೆ

ನನ್ನ ಚೆನ್ನದ ಗಿರೀಲಿ ಮೆರೆದಿರುವ ಚಲುವ ರಾಯಸ್ವಾಮಿಗೆ.........[೧೫]

ಈ ರೀತಿಯಾಗಿ ಗಾಯಕರು ಕಾವ್ಯ ಹಾಡುವಾಗ ಪ್ರಾರ್ಥನೆ ಮತ್ತು ಮಂಗಳ ಪದ್ಯಗಳನ್ನು ತಮ್ಮ ಕಾವ್ಯಗಳಲ್ಲಿ ಅಳವಡಿಸಿಕೊಂಡಿರುತ್ತಾರೆ.

ಮೌಖಿಕ ಕಾವ್ಯಗಳಲ್ಲಿ ಪಲ್ಲವಿ ಪದೇ ಪದೇ ಪುನರಾವರ್ತನೆ ಆಗುತ್ತಿರುತ್ತದೆ "ಮೌಖಿಕ ಕಾವ್ಯಗಳಲ್ಲಿ ಸೊಲ್ಲು/ಪಲ್ಲವಿ ಕಾವ್ಯದ ಪುನರ್‌ಸೃಷ್ಟಿಗೆ ಪೂರಕವಾದ ಒಂದು ಪ್ರಧಾನವಾದ ಮೌಖಿಕ ಸೂತ್ರವಾಗಿದೆ"[೧೬] ಕಾವ್ಯಗಳಲ್ಲಿ ಬರುವ ಕಥೆಯ ಯಾವ ಪ್ರದೇಶಕ್ಕೆ ಸಂಬಂಧಪಟ್ಟಿರುತ್ತದೋ ಆ ಪ್ರಾದೇಶಿಕ ಭಾಷೆ ಕಾವ್ಯ ಒಳಗೊಂಡಿರುತ್ತದೆ. ಕೆಲವು ಕಾವ್ಯಗಳು ಗದ್ಯ, ಪದ್ಯ, ಮಿಶ್ರಿತ ಚಂಪೂ ರೀತಿಯಲ್ಲಿವೆ, ಮಲೆಮಾದೇಶ್ವರ, ಮಂಟೇಸ್ವಾಮಿ ಜುಂಜಪ್ಪ. ಮೊದಲಾದ ಕಾವ್ಯಗಳು ಗದ್ಯ ಪದ್ಯ ಮಿಶ್ರಿತದಲ್ಲಿದ್ದರೆ, ಹಾಲುಮತ ಕಾವ್ಯ ಪದ್ಯರೂಪದಲ್ಲಿ, ಕೃಷ್ಣ ಗೊಲ್ಲರ ಕಾವ್ಯ, ಕುಮಾರ ರಾಮನ ಕಾವ್ಯಗಳು ದೀರ್ಘ ಸಂಭಾಷಣೆಯ ರೂಪದಲ್ಲಿವೆ, ಮೌಖಿಕ ಕಾವ್ಯ ಪರಂಪರೆಯ ಸಂರಚನೆಯನ್ನು ಕುರಿತು ಪ್ರೊ. ಎ.ವಿ.ನಾವಡರವರು ಮೌಖಿಕ ಕಾವ್ಯ ಸಂಯೋಜನಾ ಪ್ರಕ್ರಿಯೆ ಎಂಬ ಪುಸ್ತಕದಲ್ಲಿ ೩ ಹಂತಗಳಲ್ಲಿ ತಿಳಿಸುತ್ತಾರೆ.

"ಮೊದಲ ಹಂತದಲ್ಲಿ ಪರಿಣಿತ ಗಾಯಕನೊಬ್ಬ ಹಾಡುವ ಹಾಡನ್ನು ಗಮನವಿಟ್ಟು ಆತ/ಆಕೆ ಕೇಳುವ ಹಾಡಿನ ಲಯ, ಗತಿ,ದಾಟಿ, ಉಕ್ತಿ, ವೈಚಿತ್ರ್ಯಗಳು ಅಂತಸ್ಥಗೊಳ್ಳುತ್ತಾ ಹೋಗುತ್ತಾವಲ್ಲದೆ. ಕತೆಯಲ್ಲಿ ಪಾತ್ರಗಳ ಕಾಲದೇಶ ಎಲ್ಲಾ ವಿಚಾರಗಳನ್ನು ಮನಸ್ಸಿನಲ್ಲಿ ದಾಖಲಿಸಿಕೊಳ್ಳುತ್ತಾರೆ.

ಎರಡನೇ ಹಂತದಲ್ಲಿ ಗಾಯಕನೊಬ್ಬನಿಗೆ ಅನುಕರಣಕ್ರಿಯೆ ಕೆಲಸ ನಿರ್ವಹಿಸುತ್ತದೆ. ಒಬ್ಬನೆ ಕುಳಿತು ಗ್ರಹಿಸಿದುದ್ದನ್ನು ಅತ್ಯಂತ ವಿಶಿಷ್ಟವಾದ ತಿರುಳನ್ನು ನೆನಪಿಸುತ್ತಾ ಅನುಕರಿಸುತ್ತಾಳೆ, ಆದರೆ ಬಾಯಿಪಾಠ ಪ್ರಯತ್ನಕ್ಕೆ ತೊಡಗುವುದಿಲ್ಲ,

ಮೂರನೇ ಹಂತದಲ್ಲಿ ಹಲವಾರು ಹಾಡುಗಳು ಪೂರ್ತಿಯಾಗಿ ಅಲ್ಲದಿದ್ದರೂ ಹಾಡಲು ಬರುತ್ತವೆ, ಹಾಡನ್ನು ಪೂರ್ತಿಗೊಳಿಸುವ ಸಾಮರ್ಥ್ಯಕ್ಕೆ ತಲುಪಿಸುತ್ತಾನೆ ಪ್ರೇಕ್ಷಕನಿಗೆ ಏನು ಬೇಕೆಂದು ತಿಳಿದು ಅದಕ್ಕೆ ತಕ್ಕಂತೆ ಕಾವ್ಯವನ್ನು ಆಯಾ ಸನ್ನಿವೇಶಕ್ಕೆ ತಕ್ಕ ಮಾತುಗಳನ್ನು ಜೋಡಿಸುತ್ತಾ ನಿರಂತರವಾಗಿ ಗಾಯಕ/ಗಾಯಕಿಯರು ಹಾಡುತ್ತಾರೆ. ಮುಂದೆ ಗಾಯಕರ ಕಾವ್ಯ ಭಂಡಾರವೂ ಹೆಚ್ಚಾಗುತ್ತವೆ.

"ಮೌಖಿಕ ಕಾವ್ಯ ನಿರ್ಮಾಣವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿದ್ದು ಯಾವ ಗಾಯಕರು ಕಾವ್ಯದ ಪೂರ್ಣ ಪಾಠವನ್ನು ಬಾಯಿಪಾಠ ಮಾಡುವುದಿಲ್ಲ. ಈ ಮೌಖಿಕ ಕಾವ್ಯಗಳನ್ನು ಹಾಡುವ ಗಾಯಕರಿಗೆ ಇದು ಕಾವ್ಯ ಎನ್ನುವ ಪರಿಕಲ್ಪನೆ ಇರುವುದಿಲ್ಲ. ಇದು ಕಥೆ ಅಥವಾ ಪದ ಎಂದು ತಿಳಿದಿರುತ್ತಾರೆ ಕಾವ್ಯದ ದೀರ್ಘತೆಯನ್ನು ಗಮನಿಸಿ ವಿದ್ವಾಂಸರು ಅದನ್ನು ಮಹಾಕಾವ್ಯಗಳು ಎನ್ನುತ್ತಾರೆ"[೧೭] ಉದಾ:– ಮಲೆಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯಗಳನ್ನು ಕಾವ್ಯ ಅಥವ ಮಹಾಕಾವ್ಯ ಎಂದು ಜನ ಸಾಮಾನ್ಯರು ಕರೆಯುವುದಿಲ್ಲ. ಬದಲಾಗಿ ಮಾದಪ್ಪನ ಕತೆ, ಮಂಟೇದಯ್ಯನ ಕತೆ ಅಥವಾ ಪುರಾಣ ಎನ್ನುತ್ತಾರೆ.

ಮೌಖಿಕ ಮಹಾಕಾವ್ಯಗಳಲ್ಲಿ ಪ್ರಧಾನವಾದ ಲಕ್ಷಣವೆಂದರೆ ಕಂಠಸ್ಥ ನಿರೂಪಣೆಯಾಗಿದೆ. ಅನಕ್ಷರಸ್ಥ ಗಾಯಕ ಪರಂಪರೆಯಿಂದ ಹಲವಾರು ತಲ ತಲಮಾರುಗಳಿಂದ ಕಾವ್ಯ ರೂಪದಲ್ಲಿ ಬಂದಿರುವ ಮಹಾಕಾವ್ಯಗಳೂ ವಸ್ತು ಕೆಲವೊಮ್ಮ ಹಿಗ್ಗುವಿಕೆಗೆ ಅಥವಾ ಕುಗ್ಗುವಿಕೆಗೆ ಒಳಗಾಗುತ್ತವೆ.

ಕಾವ್ಯಗಳ ಪಠ್ಯಗಳಲ್ಲಿ ಸ್ತ್ರೀ–ಪುರುಷರಿಬ್ಬರೂ ಭಾಗವಹಿಸುತ್ತಾರೆ ಇದು ಬರೀ ಹೆಂಗಸರಿಗಾಗಲೀ ಅಥವಾ ಗಂಡಸರಿಗಾಗಲೀ ಮೀಸಲಾದುದಲ್ಲ, ಕಾವ್ಯ ಹಾಡುವ ಸ್ತ್ರೀ–ಪುರುಷರ ಗಾಯನ ಕ್ರಮದಲ್ಲಿನ ವ್ಯತ್ಯಾಸಗಳನ್ನು ಗುರುತಿಸಲಾಗಿದೆ. ಸ್ತ್ರೀ–ಪುರುಷರ ಸಂವೇದನೆಗಳು ಭಿನ್ನವಾದ್ದರಿಂದ ಒಂದೇ ಕಥೆಯ ವಸ್ತು ಪಾತ್ರಗಳನ್ನು ಪರಿಭಾವಿಸುವ ರೀತಿ, ಪದ್ಯದ ಲಯ ಇವೆಲ್ಲದರಲ್ಲಿ ಬದಲಾವಣೆಗಳಾಗುತ್ತಿರುತ್ತವೆ.

ಮೌಖಿಕ ಕಾವ್ಯಗಳು ಹಾಡುವಾಗ ಸಾಹಿತ್ಯ, ಸಂಸ್ಕೃತಿ, ಘಟನೆಗಳ ವಿಶ್ಲೇಷಣೆ, ಪಾತ್ರಗಳ ವಿಶ್ಲೇಷಣೆಯೇ ಹೆಣ್ಣಿನ ಬಗ್ಗೆ, ಗಂಡಿನ ಬಗ್ಗೆ ಹೇಳುವಾಗ ಅವರ ಉದಾಹರಣೆಗಳನ್ನು ತೆಗೆದುಕೊಂಡಾಗ ಅದರಲ್ಲಿ ಬರುವ ವ್ಯಾತ್ಯಾಸಗಳನ್ನು ಗಮನಿಸಬೇಕಾಗುತ್ತದೆ, ಆ ಕಾವ್ಯಗಳ ತಂತ್ರಗಾರಿಕೆ ವಿಷಯ ತಂತ್ರಗಾರಿಕೆ, ಭಾಷಾ ತಂತ್ರಗಾರಿಕೆ, ಘಟನೆ ತಂತ್ರಗಾರಿಕೆ, ಇವುಗಳನ್ನು ಬೇರೆ ಬೇರೆ ಧಾಟಿಯಲ್ಲಿ ಹಾಡುತ್ತಾರೆ. ಹಾಗೂ ಅವರದೆ ಆದ ಸಂಪ್ರದಾಯ ಪರಂಪರೆಯವರು ಹಾಡುತ್ತಾರೆ "ಮಲೆಮಾದೇಶ್ವರ ಮಂಟೇಸ್ವಾಮಿ ಕಾವ್ಯಗಳನ್ನು ಹಾಡುವ ಕಂಸಾಳೆ ನೀಲಗಾರರು ಎನ್ನುವ ಒಂದು ಗುರು ವರ್ಗವೇ ಇದೆ. ಅತ್ಯಂತ ಕೆಳ ಸಮುದಾಯಗಳ ಗುರು ನೆಲೆಯಿಂದ ರಚಿತಗೊಂಡ ಪಠ್ಯಗಳಿವು. ಅದರಂತೆ ಜಂಜಪ್ಪನ ಕಾವ್ಯವನ್ನು ಹಾಡುವ ಗಣೆಯವರು, ಮೈಲಾರಲಿಂಗನ ಕಾವ್ಯದ ಗೊರವರು, ಕುಮಾರರಾಮನ ಕಾವ್ಯದ ಬುರ್ರಾಕಥಾ ಪಂಥದವರು ಹೀಗೆ ಪರಂಪರಾಗತ ಮೌಖಿಕ ಸಂಪ್ರದಾಯ ಬದ್ಧ ವರ್ಗವೇ ಈ ನಾಡಿನಲ್ಲಿದೆ."[೧೮] ಸಾಮಾನ್ಯವಾಗಿ ಸುಧೀರ್ಘವಾದ ಕಾವ್ಯಗಳನ್ನು ಹಾಡುತ್ತಾ ತಲೆಮಾರಿನಿಂದ ತಲೆಮಾರಿಗೆ ಆ ಕಾವ್ಯಗಳನ್ನು ಒಯುತ್ತಾ ತಮ್ಮದೇ ಆದ ಹಾಡುಗಾರಿಕೆಯ ಸಂಪ್ರದಾಯವನ್ನು ಕಾವ್ಯ ಪರಂಪರೆಯನ್ನು ಹೊಂದಿರುವ ಗಾಯಕ ಸಮೂಹವೇ ಕಾವ್ಯಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಇವರು ತಮ್ಮ ಗಾಯನ ಕಲೆಯನ್ನು ಅವಲಂಬಿಸಿ ಬದುಕುತ್ತಿದ್ದು ಗಾಯನ ಕಲೆ ಅವರಿಗೆ ವಂಶಪಾರಂಪರ್ಯವಾಗಿ ಬಂದಿರುತ್ತದೆ, ವಿವಿಧ ಪರಂಪರೆಯ ವೃತ್ತಿಗಾಯಕರು ವೈವಿಧ್ಯಮಯ ವೇಷ ಭೂಷಣಗಳಿಂದ ಶೋಭಿತವಾಗಿ ತಮ್ಮ ಸಮುದಾಯದ ನಾಯಕರ ಲಾಂಛನಗಳನ್ನು ಧರಿಸಿ, ವಿಶಿಷ್ಟ ಸ್ವರೂಪದ ವಾದ್ಯಗಳೊಂದಿಗೆ ಜಾತ್ರೆ, ಉತ್ಸವಗಳಲ್ಲಿ ಹಬ್ಬಹರಿದಿನಗಳಲ್ಲಿ ಭಾಗವಹಿಸುತ್ತಾರೆ. ತಮ್ಮ ಸಮುದಾಯದ ಸಾಂಸ್ಕೃತಿಕ ನಾಯಕನ ಪವಾಡಗಳನ್ನು ಹಾಡಿನ ರೂಪದಲ್ಲಿ ಹೇಳುತ್ತಾ, ಧರ್ಮ, ಶ್ರದ್ದೆ, ಭಕ್ತಿ ನಿಷ್ಠೆಗಳಿಂದ ಆಚರಣೆ ಮಾಡುತ್ತಾರೆ. ಒಂದೇ ಸ್ಥಳದಲ್ಲಿ ವಾರದಗಟ್ಟಲೆ ಹಗಲು ರಾತ್ರಿ ಕಥೆಗಳನ್ನು ಹೇಳುವಷ್ಟು ಪರಿಣಿತಿ ಪಡೆದಿರುತ್ತಾರೆ.

"ಮೌಖಿಕ ಕಾವ್ಯಗಳ ಗಾಯಕ–ಗಾಯಕಿಯರು, ಅಧಿಕೃತ ಶ್ರೋತೃಗಳು ಬಹುತೇಕ ಕಾವ್ಯಗಳು ನಾಯಕ– ನಾಯಕಿಯರು ಭಾರತೀಯ ಸಮಾಜದಲ್ಲಿ ಅತೀವ ಶೋಷಣೆಗೆ ಒಳಗಾದ ಕೆಳಜಾತಿಯ ದಲಿತರಾಗಿದ್ದಾರೆ.

ಉದಾ: ಗಾಯಕರಾದ ದೇವರಗುಡ್ಡರು. ನೀಲಗಾರರು, ಕಾಡುಗೊಲ್ಲರು, ಗೊರವರು, ಕುರುಬರು, ಗೊಂಡರು. ಮೊದಲಾದ ಸಮುದಾಯದವರು ಮತ್ತು ಈ ಕಾವ್ಯಗಳ ಅಧಿಕೃತ ಶ್ರೋತೃಗಳು ಇವೆಲ್ಲರೂ ಅನುಸೂಚಿತ ಜಾತಿ–ಜನಾಂಗಗಳಿಗೆ ಸೇರಿದವರು. ಹಾಗೆಯೇ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ

ಮೈಲಾರ ಲಿಂಗ, ಮುಂತಾದ ಕಾವ್ಯದ ನಾಯಕರು ಆಯಾ ಅನುಸೂಚಿತ ಜಾತಿ ಜನಾಂಗಗಳಿಗೆ ಸೇರಿದವರು ಆಗಿದ್ದಾರೆ"[೧೯] ಪ್ರತಿಯೊಂದು ಮಹಾಕಾವ್ಯವನ್ನು ಹಾಡುವ ಗಾಯಕರು ತಮ್ಮದೇ ಆದ ವಾದ್ಯ ಸಲಕರಣೆಯನ್ನು ಹೊಂದಿರುತ್ತಾರೆ. ಮಾದೇಶ್ವರ ಕಾವ್ಯವನ್ನು ಹಾಡುವ ದೇವರಗುಡ್ಡರು ಕಂಸಾಳೆ ಎಂಬ ಕಂಚಿನ ವಾದ್ಯವನ್ನು, ಚರ್ಮದಿಂದ ಮಾಡಿದ ಕಂಜರವನ್ನು ಬಳಸಿದರೆ ಮಂಟೇಸ್ವಾಮಿ ಕಾವ್ಯವನ್ನು ಹಾಡುವ ನೀಲಗಾರರು ತಂಬೂರಿ, ಗಗ್ಗರಗಳನ್ನು ಬಳಸುತ್ತಾರೆ, ಜುಂಜಪ್ಪ ಕಾವ್ಯವನ್ನು ಹಾಡುವವರು (ಗಣೆ) ಉದ್ದವಾದ ಕೊಳವನ್ನು ಬಳಸುತ್ತಾರೆ. ಮೈಲಾರ ಲಿಂಗನ ಕಾವ್ಯವನ್ನು ಹಾಡುವ ಗೊರವರು ಡಮರುಗ ಮತ್ತು ಕೊಳಲನ್ನು ಬಳಸಿದರೆ ಸವದತ್ತಿ ಎಲ್ಲಮ್ಮನ ಕಾವ್ಯ ಹಾಡುವವರು ಚೌಡಿಕೆಯವರು ತಂತಿವಾದ್ಯವಾದ ಚೌಡಿಕೆಯನ್ನು ಹಿನ್ನೆಲೆ ವಾದ್ಯವಾಗಿ ಬಳಸುತ್ತಾರೆ. ಧಾರ್ಮಿಕ ಆಚರಣೆಗಳನ್ನು ಪರಂಪರಾಗತವಾಗಿ ಆಚರಿಸಿಕೊಂಡು ಬಂದ ಗಾಯಕರಿಗೆ ಈ ವಾದ್ಯಗಳು ಪೂಜ್ಯನೀಯವಾಗಿರುತ್ತವೆ.

ಕಾವ್ಯಗಳನ್ನು ಹಾಡುವ ಗಾಯಕರನ್ನು ಎರಡು ವರ್ಗಗಳಲ್ಲಿ ಕಾಣಬಹುದಾಗಿದೆ "ಒಂದು ವರ್ಗದವರು ತಮಗೆ ಇಷ್ಟಬಂದಾಗ ಅಥವಾ ಕೆಲಸದ ವೇಳೆಯಲ್ಲಿ ಹಾಡಿಕೊಳ್ಳುತ್ತಾರೆ ಇಂಥವರನ್ನು ಸಾಮಾನ್ಯ ಗಾಯಕರು ಎಂದು ಕರೆಯಬಹುದು ಇನ್ನೊಂದು ವರ್ಗದವರು ಜೀವನೋಪಾಯಕ್ಕಾಗಿ ಈ ಹಾಡುಗಾರಿಕೆಯನ್ನು ತಮ್ಮ ಮುಖ್ಯ ಕಸುಬುವಾಗಿ ಮಾಡಿಕೊಂಡಿರುತ್ತಾರೆ. ಇದು ಅವರ ವೃತ್ತಿ. ಇಂಥಗಾಯಕರನ್ನು ವೃತ್ತಿಗಾಯಕರು ಎನ್ನಬಹುದು; ಇಂಥ ವೃತ್ತಿಗಾಯಕರು ಜಗತ್ತಿನ ಎಲ್ಲಾ ಕಡೆಗಳಲ್ಲೂ ಇದ್ದಾರೆ"[೨೦] ಸಾಮಾನ್ಯವಾಗಿ ಎಲ್ಲಾ ವೃತ್ತಿಗಾಯಕರು ಪುರುಷರೇ ಆಗಿರುತ್ತಾರೆ. ಎಲ್ಲಮ್ಮನ ಕಾವ್ಯ ಹಾಡುವವರಲ್ಲಿ ಮಹಿಳೆಯರನ್ನು ಕಾಣುತ್ತೇವೆ. ಇವರನ್ನು ಸಾಂಸ್ಕೃತಿಕ ಆಚರಣೆಯ ಸಂದರ್ಭದಲ್ಲಿ ಕರೆಯಿಸಿ ಹಾಡಿಸುತ್ತಾರೆ. ಹಾಡಲು ಇವರಿಗೆ ಯಾವುದೇ ನಿರ್ಭಂದಗಳಿರುವುದಿಲ್ಲ, ಇಂಥ ಹಾಡುಗಾರರಿಗೆ ದೀಕ್ಷೆಯನ್ನು ನೀಡಿರುತ್ತಾರೆ. ಇವರು ಕಾವ್ಯಗಳನ್ನು ಪದ್ಯ, ಗದ್ಯ, ಮಿಶ್ರಿತ ಚಂಪುವಿನಲ್ಲಿ ನಿರಂತರವಾಗಿ ಹಾಡುತ್ತಾರೆ. ವೃತ್ತಿಗಾಯಕರು ಅವರದ್ದೇ ಆದ ಒಂದು ಸರಳ ಪದಗಳನ್ನು ಹೆಣೆಯುತ್ತಾ ಹಾಡುತ್ತಾರೆ. ಸಂಪ್ರದಾಯಕ್ಕೆ ಅನುಸಾರವಾಗಿ ಕಾವ್ಯಗಳನ್ನು ಹಾಡುತ್ತಾರೆ, "ಯಾವುದಾದರೂ ದೇವರ ಸಂಪ್ರದಾಯಕ್ಕೆ ಸಂಬಂಧಪಟ್ಟ ಗಾಯಕರಾದರೆ ಅವರನ್ನು ಧಾರ್ಮಿಕ ವೃತ್ತಿಗಾಯಕರು ಎನ್ನುತ್ತಾರೆ. ಅವರು ತಮ್ಮ ದೇವರನ್ನು ಕುರಿತ ಕಾವ್ಯವನ್ನು ಭಕ್ತರ ಮನೆಗಳಲ್ಲಿ ಹಾಡುತ್ತಾರೆ, ಜೊತೆಗೆ ಇತರ ಕಾವ್ಯಗಳನ್ನು ಕಲಿತ್ತಿರುತ್ತಾರೆ. ಯಾವ ದೇವರ ಸಂಪ್ರದಾಯಕ್ಕೂ ಸಂಬಂಧಿಸದ ಲೌಖಿಕ ವೃತ್ತಿಗಾಯಕರು ಎಂಬ ಇನ್ನೊಂದು ವರ್ಗವಿದ್ದು ಇವರು ಯಾವ ಕತೆಯನ್ನು ಬೇಕಾದರೂ ಹಾಡುಬಹುದು ಯಾವಾಗ ಬೇಕಾದರೂ ಹಾಡಬಹುದು"[೨೧] ಈ ಹಿನ್ನೆಲೆಯಲ್ಲಿ ಕೆಲವು ಕಾವ್ಯಗಳನ್ನು ಹಾಡಿದ ಪುರುಷರು ಮೌಖಿಕ ಕಾವ್ಯಗಳ ಸಂಪಾದಿತ ಪಠ್ಯಗಳಲ್ಲಿ ವಕ್ತೃಗಳಾಗಿ ಕಂಡುಬರುತ್ತಾರೆ,

ಪುರುಷರು ಹಾಡುವ ಪಠ್ಯಗಳು ಮೂಲತ ಪುರುಷ ಪ್ರಧಾನ ಸಂಸ್ಕೃತಿಯನ್ನು ಒಳಗೊಂಡಿದ್ದು ಯಜಮಾನಿಕೆ ಮತ್ತು ಅಧಿಕಾರ ಶಾಹಿಯ ತತ್ವವನ್ನು ಪ್ರತಿನಿಧಿಸುತ್ತವೆ. ಅಲ್ಲದೆ ಪುರುಷ ಪಠ್ಯಗಳಲ್ಲಿ ಬಹುತೇಕ ಸಂಪ್ರದಾಯ ಬದ್ದತೆಯನ್ನು ಒಳಗೊಂಡಿದ್ದು ಪ್ರದರ್ಶನ ರೂಪವನ್ನು ಹೊಂದಿರುತ್ತವೆ.

ಕಾವ್ಯದಲ್ಲಿ ಬರುವ ಕೆಲವು ಕಥೆಗಳನ್ನು ವಾದ್ಯಗಳನ್ನು ನುಡಿಸುತ್ತಾ ಅಭಿನಯ ಮಾಡುತ್ತಾ ಕಾವ್ಯ ವಾಚನ ಮಾಡುವ ಸಂದರ್ಭವೂ ಇರುತ್ತದೆ. ಇಂತಹ ಸಂಪ್ರದಾಯ ಕಾವ್ಯಗಳು ವ್ಯಕ್ತಿನಿಷ್ಠವಾಗಿದ್ದು ಸಮುದಾಯ ನಿಷ್ಠವಾಗಿರುತ್ತವೆ ಎಂಬುದನ್ನು ಮಲೆಮಾದೇಶ್ವರ ಕಾವ್ಯ ಹಾಡಿದ ಹೆಬ್ಬಣಿ ಮಾದಯ್ಯ, ಮಂಟೇಸ್ವಾಮಿ ಮಹಾಕಾವ್ಯ ಹಾಡಿದ ಮಹದೇವಯ್ಯ, ಮೈಲಾರ ಮಹಾಕಾವ್ಯಹಾಡಿದ ಹನುಮಂತಪ್ಪ, ಜುಂಜಪ್ಪನ ಕಾವ್ಯ ಹಾಡಿದ ದಾಸಪ್ಪ, ಮಾಳಿಂಗರಾಯನ ಕಾವ್ಯ ಹಾಡಿದ ಅಡಿದೆಪ್ಪ ಒಡೆಯರು ಧಾರ್ಮಿಕ ವೃತ್ತಿಗಾಯಕರಾಗಿದ್ದಾರೆಂಬುದನ್ನು ನಿರೂಪಿಸಬಹುದಾಗಿದೆ.

**ಹೆಬ್ಬಣಿ ಮಾದಯ್ಯ ಹಾಡಿದ ಮಲೆಮಾದೇಶ್ವರ ಕಾವ್ಯ**

ಉದಾ: ಸಂಕಮ್ಮನ ಸಾಲು

"ಮಾದಪ್ಪಾ ಏಳುಮಲೆ ಕೈಲಾಸದಲ್ಲಿ ಕುತ್ನಂಡು
ಆನಂದವಾಗಿ ಬೇಡಗಂಪಣದವರ ಕೈಲ ಪೂಜೆ ಮಾಡಿಸ್ನಂಡು
ನಾನು ಕೊತಿದ್ದೀನಿ
ನನ್ನ ಗದ್ದುಗೆಯೊಳಗೆ ಮರೆಯುವಂತ ದೇವರಿಲ್ಲ
ನಾನು ಪುಟುಲಿಂಗವಾಗಬೇಕು ಕಲಿಯುಗದಲ್ಲಿ
ಮೆರೆಯುವಂತ ದೇವರು ಮಾಡಬೇಕಲ್ಲ
ಐದು ಜನ ಋಷಿಗಳಾಗಬೇಕು
ಈಗ ಮೂರು ಜನ ಇದ್ದಾರೆ
ಅವರಿಗೆ ಮರೆಯೋ ಪಟ್ಟವಾಗಬೇಕು
ನನಗೆ ಗೊರವ ಪಟ್ಟವಾಗಬೇಕು ಅಂತ್ಹೇಳಿ ನಾಗರಾಜನನ್ನು ಏಕವಾಗಿ ನೋಡ್ತಾ
ಆನಂದವಾಗಿ ಕುಳ್ತಿದ್ದಾರೆ.
ಈ ಕಡೆ ನೋಡಪ್ಪಾ
ಕೋಕ್ನರ ಕೋನಬೋಳ ಬೆಟ್ಟದ ಮಾಳದಲ್ಲಿ
ಬೊಪ್ಪೇಗೌಡ ಅಂತ್ಹೇಳಿ
ಬೊಪ್ಪೇಗೌಡನಿಗೆ ಆರು ಜನ ಗಂಡು ಮಕ್ಕಳಿದ್ದಾರೆ
ಆರು ಜನ ಗಂಡು ಮಕ್ಕಳಲ್ಲಿ
ಕರಿಯವನಾಗಿರ ತಕ್ಕಂಥವ ನೀಲೇಗೌಡ
ಆರು ಜನ್ದಲಿ ಐದು ಜನ್ಕೆ ಲಗ್ನವಾಗಿದೆ
ಕಿರೀಮಗ ನೀಲೇಗೌಡ್ನಿಗೆ ಲಗ್ನವಿಲ್ಲ

ನೀಲೆಗೌಡ ಅಂದರೆ ಅಸಮಾನುಕಾರ ದುಸುಮೊನಕಾರ
ಕಾಡು ಕಟ್ಟೋನು ಮೇಘ ಕಟ್ಟೋನು"[೨೨]
ಮಹದೇವಯ್ಯ ಹಾಡಿದ ಮಂಟೇಸ್ವಾಮಿ ಕಾವ್ಯ
ಕಲ್ಯಾಣ ಪಟ್ಟಣದ ಸಾಲು
"ಉತ್ತರ ದೇಸವನೆ ಬಿಟ್ಟು ಬಿಟ್ಟು ಗುರುವು
ಇಷ್ಟೊಂದು ಬಿರುದು ಲಾಂಚಾಣಗಳನೆ ಧರಿಸಿಕೊಂಡು
ಈಗ ಎಲ್ಲಿಂದ ಎಲ್ಲಿಗೆ ನಾನು ಹೋಗಬೇಕು ಎನುತ ಹೇಳಿ
ಜಗಂ ಜೋತಿಯವರು
ಪರಂಜ್ಯೋತಿಯವರು ಪಾತಾಳ ಜ್ಯೋತಿಯವರು
ಅಲ್ಲಮ ಪ್ರಭು ಮಂಟೇದಾ ಲಿಂಗಪ್ಪ
ಈಗ ಆದಿ ಕಲ್ಯಾಣಕ ನಾನು
ಹೋಗಬೇಕು ಎಂದರಲ್ಲಾ ॥ ಸಿದ್ದಯ್ಯ॥
ಇದು ಆದಿ ಕಲ್ಯಾಣ
ಆದಿ ಕಲ್ಯಾಣದ ಮಟಮನೆ ಎಂದರೆ
ಅದು ಒಂದನೆ ಕೈಲಾಸ
ಈ ಕಲ್ಯಾಣಕೆ ಹೋಗಬೇಕು
ಬಸವಣ್ಣದೇವರ ದುಡುವ ನೋಡಲೇಬೇಕು
ಅದರ ಮಡದಿ ನೀಲಮ್ಮನ ಸತ್ಯ ನೋಡಲೇಬೇಕು
ಈ ಗಂಡ ಹೆಂಡ್ತಿರ ದುಡುವ ನಾವೇ ನೊಡಬೇಕು ॥ ಸಿದ್ದಯ್ಯ"॥[೨೩]
ದಾಸಪ್ಪ ಹಾಡಿದ ಜುಂಜಪ್ಪನ ಕಾವ್ಯ
ಜುಂಜಪ್ಪನ ಹುಟ್ಟಿನ ಸಂದು
ಕೆಂಗರು ಮಲ್ಲೆಗೌಡ ಜಾಗ್ರತ ದನಕರಕಂಡು
ಕೊಂಕಿ ಜರುಮಲೆ ಸೀಮೆಗೆ
ಸರಿ ಉಂಡಾಡು ಪದುಮಣ್ಣ ಹೊಲದಾಗೆ
ದನಿನರೂಪ್ಪ ಹಾಕೆಂಡು ಅಲ್ಲಿ ಸೇರ್ನಂಬಿಟ್ಟು
ಹೊನ್ನಾಟ್ಟೀಲೆಗೌಡ ತಿರುಗಂಟಿ ಪರಗಂಚಿ ಮಾಡ್ಸಿ
ನಿನ್ನಮ್ಮನ ಮೂರು ತಿಂಗಳುವರೆಗೊ ತೌರು ಮನೇಲಿ ಬಿಟ್ಟು

ಮೂರು ತಿಂಗಳು ಆಗ್ತಿದ್ದಂಗೆ
ದಲ್ಲರ್ನ ಪಾಲ್ಕೆ ಮೇಲೆ ಅತ್ತೆ ಮಾದ ಬಂದು
ನಿನ್ನಮ್ಮನ ತೌಲಮನೆಗೆ ನರಕಂಡು ಹೋದ್ದು
ಜುಂಜಪ್ಪ ಅವುರ ತಾಯಿನ
ಅತ್ತೆ ಮಾವುನಿಗೆ ಅಡಿಗೆಮಾಡಿ ಊಟಕ್ಕೆಟುಗಂಡು ಅಯಮ್ಮ
ಬಹಳ ಸುಖವಾಗಿ ನೋಡಿಕೊಂಡು ಅತ್ತೆ ಮಾವುನ್ನ ಮನೆವೊಳಗಿದ್ಲು
ಮದುವೆ ಆಗಿ ಹನ್ನೆರಡು ವರ್ಷ ಆಯ್ತು ............[೨೪]
ಅಡಿವೆಪ್ಪ ಒಡೆಯರು ಹಾಡಿದ ಮಾಳಿಂಗರಾಯನ ಕಾವ್ಯ
ಮಳಿಂಗ ರಾಯ ಕಾವ್ಯ
"ಗುರು ಶಿಷ್ಯರು ಇಬ್ರು ಜೋಡಣ್ಣಾ
ಅನಾದಿಯಿಂದ ಅವರವರ ಅವತಾರ
ಸಮಾವುದಿತ್ತು ಕೇಳ್ರಣ್ಣ
ನಿರ್ವಿಕಾರಾಗಿ ಇದ್ದ ಬೀರಣ್ಣ
ಜ್ಞಾನಾಗಿ ಬೆಳೆದಿದ್ದೋ ಮಾಳಣ್ಣಾ
ಪಂಚತತ್ವ ಪರಿಪೂಣಾ
ಕೂಡಿದಾಗ
ಬಯಲಿನ ಬಯಲಿದ್ದಾರೇನಾ
ಪರಬ್ರಹ್ಮ ಅನಿಸಿದ ಬೀರಣ್ಣಾ
ಆದಿ ಬಸವಣ್ಣಾಗಿ ಮಾಳಣ್ಣಾ
ನೀರೇ ನಿರಂಕಾರದಲೀ
ನಿಜ ರೂಪ ತೋರಿ ಬಂದ್ರು
ಅವರೇನಾ ................[೨೫]"
ವಗ್ಗರು ಹನುಮಂತಪ್ಪ ಹಾಡಿದ ಮೈಲಾರಲಿಂಗನ ಕಾವ್ಯ
ಕರಿಯ ಕಂಬಳಿ ಗದ್ದಿಗೆ ಮಾಡಿ
ವೀರ ಡೊಳ್ಳಿನ ಡುಮುಕುವ ಕೇಳಿ
ಕರಿಯ ಕಂಬಳಿ ಗದ್ದಿಗೆ ಮಾಡಿ
ವೀರ ಡೊಳ್ಳಿನ ಡುಮುಕುವ ಕೇಳಿ

ಆ ಕರಿಯ ಕಂಬಳಿ ಗದ್ದುಗೆ ಮಾಡಿ

ವೀರ ಡೊಳ್ಳಿನ ಡುಮುಕುವ ಕೇಳಿ

ಕರಿಯ ಕಂಬಳಿ ಗದ್ದಿಗೆ ಮಾಡಿ

ವೀರ ಡೊಳ್ಳಿನ ಡುಮುಕುವ ಕೇಳಿ.............[೨೬]

ಪುರುಷ ಪತ್ಯಗಳು ಕಥೆಯ ನಾಯಕನೊಂದಿಗೆ ಚಲಿಸುವುದು, ಕಾವ್ಯ ಪ್ರತಿ ಸಾಲಿನಲ್ಲಿಯ ಘಟನೆಗಳು ಅನಿರೀಕ್ಷಿತ ತಿರುವು ಹಾಗೂ ಸಾಹಸಗಳಿಂದ ಕೂಡಿದ್ದು, ಹಾಡುಗಾರಿಕೆ ಚುರುಕುತನದಿಂದ ಸಾಗುತ್ತದೆ. ಪುರುಷರು ಹಾಡುವ ಈ ಸಾಲುಗಳು ಧೀರ್ಘತೆಯಿಂದ ಕೂಡಿರುತ್ತವೆ ಹಾಗೂ ಜನಸಮುದಾಯದ ಕೇಂದ್ರಗಳಾಗಿರುತ್ತಾರೆ. ಇವರು ಹಾಡಿನ ರೀತಿ ಸಂಕೀರ್ಣವಾಗಿದ್ದರು ತಮ್ಮ ಸಮುದಾಯದ ನಾಯಕರ ಕುರಿತು ಕಾವ್ಯ ಕಟ್ಟುವ ಕೆಲಸ ಮಾಡುತ್ತಾರೆ. "ಕಾವ್ಯ ಕಟ್ಟುವವರ ಮನೋನೆಲೆ ಎಂಬುದು ತಮ್ಮದುರಿನ, ತಮ್ಮೊಂದಿಗಿನ, ತಮ್ಮ ಸುತ್ತಿನ ಜನರ ಕಷ್ಟ-ಕೋಟಲೆ, ನೋವು ನಲಿವು ಬದುಕು-ಬವಣೆಗಳಿಗೆ ಆಸರೆಯ ಮಾನಸಿಕ ಬಲ ತಂದವರು, ಅಂದರೆ ಸಮಾಜದ ಸಮುದಾಯದ ದೀನ ದಲಿತರ ಬದುಕಿಗೆ ಧೈರ್ಯ ತುಂಬಬಲ್ಲ ತಮ್ಮ ಮನತಟ್ಟಿದ ವ್ಯಕ್ತಿತ್ವ ಮನಸ್ಸಿನಲ್ಲಿ ಗಾಢವಾಗಿ ಕೂರುತ್ತದೆ"[೧೭] ಪುರುಷ ಪತ್ಯಗಳು ಒಂದು ಬಗೆಯ ಸೃಜನಶೀಲ ಅನುವಾದದಂತೆ ಅಭಿವ್ಯಕ್ತಿಸುತ್ತಾರೆ. ತಮ್ಮ ಇಡೀ ಪರಂಪರೆಯ ಕೊಂಡಿಯನ್ನು ಸಾಗಿಸುತ್ತಾ ಅನೇಕ ಪತ್ಯಗಳನ್ನು ಹುಟ್ಟು ಹಾಕುತ್ತಾರೆ ಈ ಮೇಲೆ ಹಾಡಿರುವ ಹೆಬ್ಬಣಿ ಮಾದಯ್ಯ ಹಾಡಿದ ಮಾದಪ್ಪಾ, ಮಹದೇವಯ್ಯ ಹಾಡಿದ ಮಂಟೇಸ್ವಾಮಿ ಕಾವ್ಯ, ದಾಸಪ್ಪ ಹಾಡಿದ ಜುಂಜಪ್ಪ, ಗುಗ್ಗರಿ ಹನುಮಂತಪ್ಪ ಹಾಡಿದ ಮೈಲಾರಲಿಂಗ, ಅಡಿವೆಪ್ಪ ಒಡೆಯರು ಹಾಡಿದ ಮಾಳಿಂಗರಾಯರಿಗೆ ಸಂಬಂಧಿಸಿದ ಪತ್ಯಗಳು ಒಂದೇ ರೀತಿ ಒಂದೇ ಲಕ್ಷಣ ಇರುವುದಿಲ್ಲ, ಹಾಡುವ ಕಲಾವಿದರ ವೃತ್ತಿ, ಸಮುದಾಯಗಳ ಆಧಾರದ ಮೇಲೆ ಇವರ ಸತ್ಯದ ಸ್ವರೂಪ ಬದಲಾಗುತ್ತಿರುತ್ತವೆ

"ಎಲ್ಲಿ ಮಾನವ ಜಗತ್ತುಗಳೊಂದಿಗೆ, ಜಾಗತಿಕ ಪ್ರಜ್ಞೆಯೊಂದಿಗೆ ಒಂದು ಬಗೆಯ ಸಂವಹನವನ್ನಿಟ್ಟುಕೊಂಡು ಕಾಣುವ ವಕ್ತೃ-ಬದಲಾವಣೆಗಳೊಳಗೆ ಬೇರು ಬಿಟ್ಟಿರುವ ಅರ್ಥವಂತಿಕೆಯೊಂದಿಗೇ ಗುದ್ದಾಡಿ ಅದೃಶ್ಯದೊಡನೆ ಹೆಣಗಾಡಿ ಅನೇಕ ದ್ವಂದ್ವಗಳನ್ನು ಪರಿಹರಿಸಿಕೊಳ್ಳತ್ತಲೇ ಒಂದು ಮಹಾ ಸಾಂಸ್ಕೃತಿಕ ಪತ್ಯವೊಂದನ್ನು ತನ್ನ ಜ್ಞಾನದಿಂದ ಉತ್ತರಕೊಡುವ ರೀತಿಯೇ ವಿಸ್ಮಯ ಹುಟ್ಟಿಸುತ್ತದೆ"[೧೮] ಕಾವ್ಯ ಹಾಡಿರುವ ಮತ್ತು ಹಾಡುವವರು ಆಯಾ ಸಮುದಾಯದ ವೀರರ ಪಂಥಗಳ ಅನುಯಾಯಿಗಳಾಗಿದ್ದು ವೀರನ ಒಕ್ಕಲಾಗಿರುತ್ತಾರೆ, ಇವರೆಲ್ಲ ಕೆಳ ಸಮುದಾಯದಿಂದ ಬಂದಿದ್ದು ದೈವದ ಪ್ರತಿ ರೂಪವಾಗಿರುತ್ತಾರೆ, ಮುಂದೆ ಇವೆಲ್ಲವು ಪುರಾಣ, ಕಥೆ, ಧಾರ್ಮಿಕತನ, ಸಾಮಾಜಿಕ ಸಂಘರ್ಷಗಳ ನೆಲೆಯಲ್ಲಿ ಸಾಗುತ್ತವೆ. ಆದ್ದರಿಂದಲೇ ಈ ಕಾವ್ಯಗಳು ಇಂದಿಗೂ ಜೀವಂತವಾಗಿವೆ. ಕಾವ್ಯಗಳು ಶಿಷ್ಟಗೊಂಡತೆಲ್ಲಾ ಮೌಖಿಕ ಪರಂಪರೆಯು ವಕ್ತೃ ಮತ್ತು ಸಂಪಾದಕರ ನಡುವೆ ಒಂದು ಸಾಂಸ್ಕೃತಿಕ ಸಂಬಂಧ ಏರ್ಪಡುತ್ತದೆ. ಇದಕ್ಕೆ ಸಂಬಂಧಿಸಿದ ಅಧ್ಯಯನಗಳು ಹೆಚ್ಚು

ನಡೆದಂತೆಲ್ಲಾ ಸಂಗ್ರಹಿತ ಪಠ್ಯಗಳು ಶಿಷ್ಟಗೊಳ್ಳುತ್ತಾ ಒಳಿತು ಕೆಡುಗಳ ಪರಿಭಾಷೆಗೆ ಹೊಸ ಅರ್ಥವನ್ನೇ ನೀಡುತ್ತವೆ. ಮೌಖಿಕ ಕಾವ್ಯಗಳು ಒಂದು ಸಮುದಾಯದ ಸಾಂಸ್ಕೃತಿಕ ಪರಂಪರೆಯನ್ನು ಗಾಯಕರ ಮೂಲಕ ವಿವಿಧ ಕಾಲಘಟ್ಟಗಳಲ್ಲಿ ಅಭಿವ್ಯಕ್ತಿಸುತ್ತಾ ಪ್ರಸ್ತುತ ಕಾಲದ ಸೃಜನಶೀಲತೆಯೊಂದಿಗೆ ಮೌಖಿಕ ಕಾವ್ಯಗಳು ಪಠ್ಯಗಳಾಗಿ ಹೊಸ ಮೌಖಿಕ ಪರಂಪರೆಯನ್ನೇ ಸೃಷ್ಟಿಸಲಾಯಿತು. ಈ ಹಿನ್ನೆಲೆಯಲ್ಲಿ ಪುರುಷ ಪಠ್ಯಗಳು ಮೌಖಿಕ ಕಾವ್ಯಗಳ ರಚನೆಗೆ ಹೊಸ ಅಧ್ಯಾಯವನ್ನೇ ರೂಢಿಸಲು ಸಾಧ್ಯವಾಗಿವೆ.

**೨.೩. ಮಹಿಳಾ ಪಠ್ಯಗಳು**

ಕಾವ್ಯಗಳ ಪ್ರಮುಖ ಛಂದೋಬಂಧವಾಗಿರುವ ತ್ರಿಪದಿಯು ಮಹಿಳೆಯರ ಹಾಡಿನ ಅಭಿವ್ಯಕ್ತಿಯಾಗಿದೆ. ಕಥನ ಗೀತೆಗಳು, ಬೀಸುವ ಹಾಡುಗಳು, ಕುಟ್ಟುವ ಹಾಡುಗಳು, ಜೋಗುಳ ಹಾಡುಗಳು, ಸೋಬಾನೆ ಹಾಡುಗಳು ಮತ್ತು ಸಾಂಪ್ರದಾಯಿಕ ಹಾಡುಗಳಲ್ಲಿ ಮಹಿಳೆಯರು ತಮ್ಮ ಅನುಭವ ಮತ್ತು ಅನುಭಾವವನ್ನು ತ್ರಿಪದಿಯಲ್ಲಿಯೇ ವ್ಯಕ್ತಪಡಿಸುತ್ತಾರೆ. ಆದ್ದರಿಂದಲೇ ತ್ರಿಪದಿಗೆ ಗಾಯಿತ್ರಿ ಎಂದು ಕರೆಯುವ ಸಾಂಪ್ರದಾಯಿಕ ಒಂದು ಮಾತು ಇದೆ "ಈ ಸುಧೀರ್ಘ ಪರಂಪರೆ ಇರುವ ತ್ರಿಪದಿಯು ಜನಪ್ರಿಯ ಛಂದೋಬಂಧವಾಗಿದ್ದು ನಾಡಿನಾದ್ಯಂತ ಜನಮನ್ನಣೆ ಗಳಿಸಿಕೊಂಡಿದೆ, ಇಂದಿಗೂ ಶಿಷ್ಟ ಸಾಹಿತ್ಯದಲ್ಲಿ ಇದರ ಚಹರೆಯನ್ನು ಕಾಣಬಹುದು ಈ ಮೌಖಿಕ ಕಾವ್ಯವು ಸಾಂಸ್ಕೃತಿಕ ವೈಶಿಷ್ಟ್ಯತೆಯಲ್ಲಿ ತ್ರಿಪದಿಯ ಮೂಲಕ ಮಹಿಳೆಯರು ಕಾವ್ಯಭಿವ್ಯಕ್ತಿಗೆ ಮುಂದಾಗಿರುವುದನ್ನು ಈ ಮೂಲಕ ತಿಳಿಯಬಹುದು"[೨೯] ಮೌಖಿಕ ಕಾವ್ಯಗಳು ಸಾಮಾಜಿಕ, ರಾಜಕೀಯ, ಆಡಳಿತಾತ್ಮಕ ವಿಷಯಗಳಿಗೆ ಪ್ರತಿರೂಪವಾಗಿದ್ದು ಮಹಿಳೆಯರ ಎಲ್ಲ ರೀತಿಯ ಸ್ಥಿತಿಗತಿಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿವೆ, ಇವುಗಳನ್ನು ಪ್ರಧಾನವಾಗಿ ಗಾಯನದಲ್ಲಿ ಮತ್ತು ನಿರೂಪಣೆಯಲ್ಲಿ ಗ್ರಹಿಸಿದಾಗ ಅವರ ಬದುಕಿಗೆ ತೀರ ಹತ್ತಿರವಾಗಿರುತ್ತವೆ, ಪುರುಷ ಗಾಯಕರಂತೆ ಊರಿಂದ ಊರಿಗೆ ಹೋಗಿ ಎಲ್ಲೆಂದರಲ್ಲಿ ಉಳಿದು ಹಾಡುವ ಸಂಪ್ರದಾಯಕ್ಕೆ ಮಹಿಳೆಯರ ದೈಹಿಕ ಹಾಗೂ ಸಾಮಾಜಿಕ ಅಂಶಗಳು ವಿರುದ್ಧವಾಗಿದ್ದವು. ಅಲ್ಲದೆ ಪತಿಯೇ ಪರದೈವ ಎಂದು ಭಾವಿಸಿ ಮಕ್ಕಳ ಲಾಲನೆ ಪಾಲನೆ ಗಂಡ, ಅತ್ತೆ ಮಾವ, ಅತ್ತಿಗೆ, ನಾದಿನಿ, ಭಾವ, ಮೈದುನರ ಸೇವೆಗೆ ಮಾತ್ರ ಮಹಿಳೆಯನ್ನು ಸೀಮಿತಗೊಳಿಸಲಾಯಿತು. ಇಂತಹ ಅನಿವಾರ್ಯತೆಯಿಂದ ಮಹಿಳೆಯರು ಹಾಡುವ ಪಠ್ಯಗಳು ಅಷ್ಟಾಗಿ ರೂಪುಗೊಳ್ಳಲು ಸಾಧ್ಯವಾಗಲಿಲ್ಲ.

ಮಹಿಳೆಯರ ಪಠ್ಯಗಳನ್ನು ಗುರುತಿಸುವ ಮೊದಲು ಅವಳ ಕಾವ್ಯ ಹಾಡಿನ ಬಗ್ಗೆ ಹೇಳಬೇಕಾಗುತ್ತದೆ. ಮಹಿಳಾ ಕಾವ್ಯಗಳು "ಆಡು ಮುಟ್ಟದ ಸೊಪ್ಪಿಲ್ಲ, ಗರತಿಯು ಹೇಳದ ಹಾಡಿಲ್ಲ" ಎನ್ನುವ ನುಡಿ ಮಾತಿನಂತೆ ಜನಪದ ಸಂಸ್ಕೃತಿಯಲ್ಲಿ ಹೆಣ್ಣು ಮಗುವಿನ ಜನದಿಂದ ಮರಣದವರಗೂ ಪ್ರಕೃತಿ-ವಿಕೃತಿ, ಭೌತಿಕ, ಅಭೌತಿಕ ಸಾಮಾಜಿಕ, ಧಾರ್ಮಿಕ ನೈತಿಕ, ಮೌಖಿಕ ಮುಂತಾದ ಅಂಶಗಳನ್ನು ಪರಿಗಣಿಸಿ ಹಾಡುತ್ತಾಳೆ ಶಿಶುವಿನ ಲಾಲನೆ-ಪಾಲನೆ, ಕುಟ್ಟುವ, ನಾಟಿ ಮಾಡುವ ಈ ಎಲ್ಲ ಕೆಲಸದಲ್ಲಿಯೂ ಹೆಣ್ಣು ಹಾಡುವುದನ್ನು ಕಾಣಬಹುದು. ತನ್ನ ಶ್ರಮದ ಪ್ರತಿಫಲದಲ್ಲಿ ಒಂಟಿತನವನ್ನು ಕಳೆಯುವುದಕ್ಕಾಗಿ ತನ್ನ ಬದುಕಿನ ಅಸ್ತಿತ್ವವನ್ನು ಕಂಡುಕೊಳ್ಳಲು ಹಾಡನ್ನು ಕಲಿತಳು, ಅವಳು ಹೇಳುವ ಹಾಡು ಪದಗಳು ತಾಯಿಂದ-ಮಗಳಿಗೆ, ಮಗಳಿಂದ ಮೊಮ್ಮಗಳಿಗೆ, ತಲೆಮಾರಿನಿಂದ ತಲೆಮಾರಿನವರೆಗೊ ಅಳಿಯದೆ

ಉಳಿದು ಬೆಳೆದುಕೊಂಡು ಬಂದಿವೆ. ತನ್ನ ಬದುಕಿನ ಪಾಡುಗಳನ್ನು ಮಹಿಳೆಯ ಕಂಠಸ್ಥ ಸಂಪ್ರದಾಯದಲ್ಲಿ ಕಟ್ಟಿಕೊಡುತ್ತಾಳೆ.

ಮಹಿಳಾ ಕಾವ್ಯಗಳಲ್ಲಿ ಕಾಣುವ ಅಂಶಗಳನ್ನು ಪಾತಲಿಂಗಪ್ಪಾ ಎಂಬ ಸಂಶೋಧನಾರ್ಥಿ ತನ್ನ ಪ್ರಬಂಧವಾದ 'ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು ಪ್ರಬಂಧದಲ್ಲಿ ಪುಟ ಸಂ–೩೪ ರಲ್ಲಿ ಹೀಗೆ ಪಟ್ಟಿ ಮಾಡುತ್ತಾರೆ.

ಸ್ತ್ರೀಯರೇ ಹೆಚ್ಚು ಕಂಠಸ್ಥ ಸಂಪ್ರದಾಯಕ್ಕೆ ಅವಲಂಬಿತರಾದವರು ಎನ್ನುವ ಅಂಶಕ್ಕೆ ಹೆಂಗಸರ ಹಾಡುಗಳು ಸಾಕ್ಷಿಯಾಗಿವೆ. ಆದರೆ ಧೀರ್ಘ ಕಥೆನ ಕಾವ್ಯಗಳನ್ನು ಹೊರತುಪಡಿಸಿದಂತೆ ಹೆಚ್ಚಾಗಿ ಖಂಡ ಕಾವ್ಯಗಳನ್ನು ಮಾತ್ರ ಹಾಡುತ್ತಾರೆ.

◆ ಕಥನ ಗೀತೆಗಳು ಮಹಿಳೆಯರ ಯಾವುದೋ ಒಂದು ದುರಂತ ಸುಖಾಂತವಾಗಿರುವ ಸಂಗತಿಯನ್ನು ಕುರಿತಾದ ಕಾವ್ಯಗಳಾಗಿರುತ್ತವೆ, ಇದರೊಂದಿಗೆ ಕಥನ ಗೀತೆಗಳನ್ನು ಹಾಡುವ ವಕ್ತೃಗಳು ಹೆಚ್ಚಾಗಿ ದಲಿತ ಮಹಿಳೆಯರು ಎಂಬುದು ಅಧ್ಯಯನದಲ್ಲಿ ತಿಳಿದು ಬರುತ್ತದೆ.

◆ ಕೌಟುಂಬಿಕ ದಾಂಪತ್ಯ ಜೀವನ ಮತ್ತು ಬಲಿದಾನ ಸಹಗಮನ ವಿಷಯಕ್ಕೆ ಸಂಬಂಧಿಸಿದಂತೆ ಕಥಾವಸ್ತುಗಳನ್ನು ಒಳಗೊಂಡ ಕಥನಗೀತೆಗಳು ಮಹಿಳೆಯ ಸಾಮಾಜಿಕ ವಾಸ್ತಾವಾಂಶಗಳನ್ನು ಹಿಡಿದಿಟ್ಟವೆ. ಇಂತಹ ತಮ್ಮ ಬದುಕಿನ ನೈಜವಾದ ಸಂಗತಿಗಳನ್ನು ಕಥನ ಗೀತೆಗಳ ಮೂಲಕವಾಗಿ ಅಭಿವ್ಯಕ್ತಪಡಿಸಿದ್ದಾಳೆ.

◆ "ಮಹಿಳೆಯರು ಕಾವ್ಯಗಳಲ್ಲಿ ಕಂಡುಬರುವ ಯಜಮಾನಿ ವ್ಯವಸ್ಥೆಯ ಪ್ರತಿಪಾದನೆಗಳಾದ ಲಿಂಗಸಂಬಂಧ ವರ್ಣ, ಜಾತಿ, ವರ್ಗಸಂಬಂಧಗಳ ವಿರುದ್ದವಾಗಿ ಪ್ರತಿರೋಧನ ಧ್ವನಿಯನ್ನು ಹೊರಹಾಕಿದ್ದಾರೆ ಎಂದು ಹೇಳಿದ್ದಾರೆ"[೩೦]

ಮಹಿಳೆಯರ ಪಠ್ಯಗಳು ಸಾಮಾಜಿಕವಾಗಿದ್ದು ಹೋಳಿಹಾಡು, ಲಾಲಿ ಹಾಡು, ಹಂತಿಹಾಡು, ಬೆಳಗಿನ ಹಾಡು, ಭಜನೆಹಾಡು, ಬಲೋರಿಹಾಡು ಡೊಳ್ಳಿನ ಹಾಡು. ಇವುಗಳಿಗೆ ಮಾತ್ರ ಸೀಮಿತಗೊಳಿಸಿದ್ದು ಧಾರ್ಮಿಕ ಕಾವ್ಯಗಳಾದ ಮಾಲೆಮಾದೇಶ್ವರ ಜುಂಜಪ್ಪ ಮಂಟೇಸ್ವಾಮಿ ಮೈಲಾರಲಿಂಗ ಈ ಕಾವ್ಯಗಳಾವುವು ಮಹಿಳಾ ಪಠ್ಯಗಳಾಗಿ ಅಭಿವ್ಯಕ್ತಿಗೊಂಡಿಲ್ಲ. ಸಮುದಾಯಗಳಲ್ಲಿ ತಮ್ಮ ಕುಲದ ದೈವದ ಆರಾಧನೆಗೆ ಮಹಿಳೆಯನ್ನು ಹೊರಗಿರಿಸಿತು. ಏಕೆಂದರೆ ಮಹಿಳೆಗೆ ಉಂಟಾಗುತ್ತಿದ್ದ ಪ್ರಕೃತಿ ಸಹಜ ಕ್ರಿಯೆಗಳು ಅವಳನ್ನು ಮಡಿ, ಮೈಲಿಗೆ ಎಂಬ ಸಾಂಪ್ರದಾಯಿಕ ಕಟ್ಟಳೆಯಲ್ಲಿ ಇರಿಸಿತು. ಆದ್ದರಿಂದಲೇ ಮಹಿಳೆಯರು ಕಾವ್ಯ ರಚನೆ ಮತ್ತು ನಿರೂಪಣೆ ಇಂದ ದೂರವಿರಬೇಕಾಯಿತು. ಇದರಿಂದಲೇ ವೃತ್ತಿಗಾಯಕರೆಲ್ಲರು ಪುರುಷರಾಗಿದ್ದಾರೆ. ಆದರೆ ಎಲ್ಲಮ್ಮ ಜೋಗತಿಯರು ಅದಕ್ಕೆ ವಿರುದ್ದವಾಗಿದ್ದಾರೆ.

ಎಲ್ಲಮ್ಮನ ಜೋಗತಿಯರು ಹೆಣ್ಣೆಂದರೆ ಹೆಣ್ಣು ಗಂಡೆದರೆ ಗಂಡು ಅಥವಾ ಈ ಎರಡು ಅಲ್ಲದವರು ಎಲ್ಲಮ್ಮನನ್ನು ಕುರಿತು ಕಾವ್ಯವನ್ನು ಸುಧೀರ್ಘವಾಗಿ ಹಾಡುತ್ತಾರೆ. ಎಲ್ಲಮ್ಮನ ಕಾವ್ಯವನ್ನು ಹೆಣ್ಣು

ಮತ್ತು ಗಂಡು ಗಾಯಕರೂ ಇಬ್ಬರೂ ಹಾಡುತ್ತಾರೆ ಹಾಗೂ ಜೋಗತಿಯರನ್ನು ಬಿಟ್ಟರೆ ದೊಂಬಿದಾಸರ ಹೆಂಗಸರು ಹಾಡುವ ಪಠ್ಯಗಳು ಕಂಡು ಬರುತ್ತವೆ, ಇವರು ಏಕತಾರಿಯನ್ನು ಹಿಡಿದು ಹಾಡುವುದು ಬಹಳ ವಿರಳವಾಗಿದ್ದು, ಎಲ್ಲಮ್ಮನ ಕಾವ್ಯ ಬಿಟ್ಟರೆ ಬಳ್ಳಾರಿಯ ಜನಪದ ಗಾಯಕಿ ಕಲಾವಿದೆ ಮತ್ತು ಬುರ್ರಾಕಥಾ ಗಾಯಕಿ ದರೋಜಿ ಈರಮ್ಮನೇ ಹಾಡಿರುವ ಪಠ್ಯಗಳು ಪ್ರಸ್ತುತ ಮಾಧ್ಯ ಕರ್ನಾಟಕದಲ್ಲಿ ಪ್ರಕಟತವಾಗಿದೆ. ಕೃಷ್ಣಗೊಲ್ಲರ ಕಾವ್ಯ ಮತ್ತು ಕುಮಾರರಾಮನ ಕಾವ್ಯಗಳು ಸಹ ಸುದೀರ್ಘವಾಗಿ ಹಾಡಿರುವುದನ್ನು ಗಮನಿಸುಬಹುದು. ಇತ್ತೀಚೆಗೆ ಬಾಲನಾಗಮ್ಮ ಈರಮ್ಮನ ಕೊನೆಯದಾಗಿ ಹಾಡಿದ ಪಠ್ಯವೆಂದೇ ಹೇಳಬಹುದು.

**ನಾಡೋಜ ಬುರ್ರಕಥಾ ದರೋಜಿ ಈರಮ್ಮ ಹಾಡಿದ ಕುಮಾರರಾಮನ ಮಹಾಕಾವ್ಯ**

"ಆ ಜಟಂಗಿ ಸ್ವಾಮಿ ಮಠಕ್ಕೆ ಬಂದು
ಒಂದು ಪಾದ ಎದ್ದು ಕೈ ಜೋಡಿಸಿ
ಸ್ವಾಮಿ
ದೃಷ್ಟಲೋಕದಾಗ ಹುಟ್ಟಿವಿ
ಕರ್ಮಲೋಕದಾಗ ಬೆಳೆದಿವಿ
ನೀನು ಕಲ್ಲು ಒಳಗಿದ್ದ ಈಶ್ವರ
ಆಗ ಪ್ರತ್ಯೆಕ್ಷ ಆಗಿ
ಧುಷ್ಟರ ಕಣ್ಣಿಗೆ ಕಾಣಬೇಕೋ ಸ್ವಾಮಿ
ನಿನ್ನ ನೋಡಬೇಕಂತ ಬಂದಿವಿ
ಓ ಹೋ
ಅಪ್ಪಾ
ಈಗಿನ್ನವರ ಲೋಕದಾಗ
ಆಗಿನ್ನವರ ಲೋಕದಾಗ
ಆಗಿನ್ನವರ ಆನೆಗುಂದಿ
ಕಂಪ್ಲಿ ಪಟ್ಲದಾಗ
ನೀನು ಈಶ್ವರ ಥೇರುಮಾಡಿ
ಎಳೆಯಂತನಾದರೆ
ನಿನಗಿನ್ನವರ ಜೀವದಲ್ಲಾಗಿ
ಆಗ ಮಕ್ಕ ಫಲಪ್ಪ ನಿನಗಾಗಿ ಕೊಟ್ಟೆನ
ಏ ಇಲ್ಲದಿದ್ರೆ ನೋಡಪ್ಪ ನನ್ಗೆ ಸಾಧ್ಯವಾಗದಿಲ್ಲಾಪ್ಪ ॥ ತಂದಾನ॥[೩೧]

**ನಾಡೋಜ ಬುರ್ರಕಥಾ ದರೋಜಿ ಈರಮ್ಮ ಹಾಡಿದ ಕೃಷ್ಣಗೊಲ್ಲರ ಕಾವ್ಯ**

ಚಾಮರಾಜ

ತಂದಾನ ತಂದಾನ ತಾನೆ ತಾನ ತಂದಾನ ॥ ತಂದಾನ ॥

ಉತ್ತರ ಕಡೆಗೆ ಚಾಂಪುರ ಪಟ್ನದಾಗ

ಚಾಮರಾಜೈನಂತವರ ಕುಲದಲ್ಲಾಗಿ

ಚಾಮರಾಜ ಮಗನಮ್ಮ ಲೋಕದಾಗ ನೋಡಮ್ಮ

ಹೇಣಿಕಾಗಿ ನೋಡಕಣ್ಣ ನೀಲವೇಣಿ ತಾಯೋರು ॥ ಕಂದಾನ॥

ಆಗ ಚಾಮರಾಜನ ಹೆಣ್ತಿ

ನೀಲವೇಣಿ ದೇವಿ

ಆಗ ಕುಲದಲ್ಲಿ ಆಗಿ

ಕೃಷ್ಣ ಗೊಲ್ಲರು

ಹಾಲದ ಗೊಲ್ಲರು

ಕುಲವಂತದಲ್ಲಿ ಐದಾರ

ಇದೇ ರಾಜತನ ಬಂದು ರಾಜ್ಯವಳ್ತಾನ

ಆಗ ಏನಂತಾನ ಚಾಮರಜ

ಮಗ ಹುಟ್ಟಿನ ಮ್ಯಾಲೆ

ಈಗ ಇನ್ನು ಮೊಡ ಕುಲದಲ್ಲಿ ಕಾಂಭೋಜರಾಜ ಐದಾನ ॥ ತಂದಾನ॥

ಆಗ ಮಗ ಹುಟ್ಟಿನ

ಇನ್ನ ಮೂರು ತಿಂಗಳಿಗೆ ....................ಬಿ

**ನಾಡೋಜ ಬುರ್ರಕಥಾ ದರೋಜಿ ಈರಮ್ಮ ಹಾಡಿದ ಬಾಲನಾಗಮ್ಮ**

ಮಂಡಲಗಿರಿ ಪಟ್ಟಣದ ಬೇಟಿ ಪ್ರಸಂಗ

ಉಗಾದಿ ಪಾಡ್ಯದಿನ ವರ್ಷಕ್ಕೆ ಒಂದು ಸಾರಿ

ಆರೆಂಡಿ ತಿರುಗಿ ಬರಬೇಕು ಊರಾಗಿರಬಾರದು

ಆಗ ಇಬ್ಬರು ಅಣ್ಣ-ತಮ್ಮಂದಿರು ಬೆಂಕಿಬಾಣ

ಬತ್ತಿಬಾಣ, ಜಿವಾರಿ ಬಾಣ ತಗಂಡು

ಊರಾಗಿನ ಮಂದೆಲ್ಲಾ

ಐನೂರು ಮಂದಿ ಕರಕೊಂಡು

ಕುದುರೆ ಹೊರಗೆ ತೆಗದುಕೊಂಡು

ಕುದುರೆ ಮೇಲೆ ಅಹಾ..........

ಆಗ ಊರ ಹೊರೆಗೆ ಇರುವ

ಈಶ್ವರನ ಮಠಕ್ಕೆ ಬಂದ್ರು ಅಹಾ ..........

ಸ್ವಾಮಿ

ನಾವು ಬ್ಯಾಟಿ ಮಾರ್ಗ ಹೊಂಟೀವಿ

ಕ್ಷತ್ರಿಗೌಡ್ರು ನಾವು

ಈಗ ಮರೆವಯ್ಯ ನೀನಾಗಿ ಕೊಡಬೇಕು ....[೩೩] ತಂದಾನ ತಂದಾನ ॥

**ನಾಡೋಜ ಬುರ್ರಕಥಾ ದರೋಜಿ ಈರಮ್ಮ ಹಾಡಿದ ಸ್ಯಾಸಿ ಚೆನ್ನಮ್ಮನ ಕಾವ್ಯ**

ತಿರುಪತಿ ವೆಂಕಟೇಶ್ವರನ ವರ ಪ್ರಸಾದ

"ತಿರುಪತಿ ಗುಡ್ಡ ಕೆಳಗೈತಮ್ಮ

ನಿನ್ನಾಗಿ ತಾ ಬಂದೆ ತಾಯಿ

ತಿರುಪತಿ ಗುಡ್ಡ ಹೊರಗೈತಮ್ಮ

ತಾ ಬಂದೆ ತಾಯೆ

ಏ ಕದರಿ ಗುಡವೊ ಹೈತೆಯಮ್ಮ

ತಾ ಬಂದೆ ನೋಡು

ಕದರಿ ಗುಡ್ಡದೆ ಕೆಳಗೈತೆನಾ

ನರಸಿಂಹ ರೆಡ್ಡಿ

ಓ ಕದರಿ ಗುಡ್ಡದಾ ಯಾರಂದರೆ

ನರಸಿಂಹ ರೆಡ್ಡಿ ಗೌಡ

ಆಗ ತಾಯಿ ಸಿಲುಮ ತಾಯಿ

ನರಸಿಂಹ ರೆಡ್ಡಿ ಹೆಂಡ್ತಿ

ದೇವು ಎನ್ಮಾಡರೆಂದರೆ

ಸೆಟ್ ಸರಹೊನ್ನಾಗ

ಏಳು ಕೊಡ ಹಾಲು ಬಿಡುತಾರೆ

ಹರಿಯಾಕ ಹವರು

ಏಳ ಕೊಡ

ಏಳು ಕೊಡ ಹಾಲುವಾದರೆ
ಹವರಾಗಿ ಯಮ್ಮ
ಏ ಬೆಣ್ಣೆ ತಗಂಡು ಬರುತ್ತಾನಮ್ಮ
ಸಾನೊಂದೇ ಮಾಡಿ
ಸಾನ ಮಾಡಿಕೊಂಡು
ಬೆಣ್ಣೆ ತಗಂಡು ಬರುತಾನಲ್ಲ
ಸಾನವೇ ಮಾಡಿ[೩೪]

**ನಾಡೋಜ ಬುರ್ರಕಥಾ ದರೋಜಿ ಈರಮ್ಮ ಹಾಡಿದ ಎಲ್ಲಮ್ಮನ ಕಾವ್ಯ**

ಮಾಋಷಿ ಮತ್ತು ಎಲ್ಲಮ್ಮನ ಜನನ
ಹೊಳೆದಂಡಿಗಮ್ಮ ಯಾವ ಪಟ್ಟವೈತಮ್ಮ
ತಂದಾನಾನೇ ತಾನ ತಂದಾನಾನೇ
ಏ ಅಚಿಡಿ ಮಾವಳಿ ಪಟ್ಟ ಲೋಕವೈತಮ್ಮ ದೇವಿ
ತತ್ ತಕ ದಗತ್ಯೆ ತಾ
ಆಗ ಹಳೆದಂಡಿ ಬಗಲಾಗ
ಅಂಟಿಮಾವಳಿ ಪಟ್ಣ
ಜಗದಾ ದೇವರು
ಜಗದಾ ದೇವರ ಹೆಂಡ್ತಿ ಚೌಡಿಕ್ಯಾ ಮಾದೇವಿ
ಗಂಡ ಜಗದಾದೇವ್ರು ಹೊಳದಂಡಿಗಿ ಬಂದಾರ ಅವ್ರು
ಗಂಡನ ಮುಂದಕ್ಕೆ ಮುತ್ತಿನ ಸೆರ್ಗೆ ಹಾಸ್ಯಾಳ ದೇವಿ.....[೩೫]

ಗಿಡಿಕೆರೆ ರಾಮಕ್ಕ ಮುಗ್ಗೇರ್ತಿ ಹಾಡಿದ ಸಿರಿ ಪಾಡ್ದನ ಕಾವ್ಯ

ಇನಿ ಸತ್ಯನಾಪುರದರಮನೆಡ್ಗೆನೆ ಆರಿಯ ಬನ್ನಾರೆಗ್
ಇನಿ ಬಾರಿ ಬಡಪತ್ತ್ ಕುರುಕುಂದೇಲ್ ಪೊರ್ದುದ್ ಪೋತುಂಡತ್ತೋ ಓ ಓ......
ಸತ್ಯನಾಪುರದೆರಮನೆಡೆಗೆನ್ ಅಜ್ಜೇರ್ ಅರಿಯ ಬನ್ನಾರೆರೆಗ್ನಾ
ಅಜಿಪ ಕರಿಂಡ್ಗೆನಾ ಎಳ್ ಪ ದಂಗಡ್ಗೆನ
ಬವು ಬಡಪತ್ತ್ ಸೀರ್ ದ್ ಪೋತುಂಡುಗೆನ
ಅರಿಯ ಬನ್ನಾರೆಗ್ ಓ ಬೆರ್ಮುಱ ಮಾಲವೆರೆಗ್...ಓ ಓ....ಏ ಏ......ಅಜ್ಜೇರೋ....

ಸಾರಕಟ್ಟ ಮಡಲ್ ಪಾಡೊಂದಿತ್ತೆರ್ ಎರ ಮಾನೆಗ ಅಜ್ಜೇರ್
ಇನಿ ಸಾರ ಸಿಗ್ ತ್ತೆ ಗ್ಲಾ ಗತಿಗೋತ್ರ ದಾಂತೆ ಪೋಂಡುಗೆನ
ಸಾರ ಸಾರ ಸೂಡಿ ಮುಳಿಕಟ್ಟ ಪಾಡುನಾಡೆಗ್
ಅಜ್ಜೇರಗ್ ಆರಿಯ ಬನ್ನಾರೆಗ್ ಬೆರ್ಮುರ್ ಮಾಲವೆರೆಗ್
ಸಾರ ಸೂಡಿಗ್ ಗತಿಗೋತ್ರದಾಂತನೆ ಪೋತುಂಡತ್ತೋ ಓ ಓ...ಏ ಏ.....ಅಜ್ಜೇರೋ....[೩೬]

ಮೌಖಿಕ ಕಾವ್ಯಗಳ ಪರಂಪರೆಯಲ್ಲಿ ಸ್ತ್ರಿ ಪಠ್ಯಗಳು, ಪುರಷಪಠ್ಯಗಳು ಎಂಬುದನ್ನು ಲಿಂಗಾಧಾರಿವಾಗಿ ಪರಿಗಣಿಸಬಾರದು. ಕೆಲವೊಮ್ಮ ಲಿಂಧಾರಿತವಾಗಿ ಪಠ್ಯಗಳನ್ನು ಗುರುತಿಸುವುದಾದರೆ ಈ ಪಠ್ಯಗಳು ಖಚಿತ ಮತ್ತು ಮೂರ್ತ ವಿವರಗಳ ನೆಲೆಯಲ್ಲಿ ವರ್ಗೀಕರಸಬೇಕಾಗುತ್ತದೆ ಈ ಕಾವ್ಯಗಳು "ಸೃಜನ ಶೀಲ ಪ್ರತಿಭೆ ಲಿಂಗಾತೀತ – ಧರ್ಮಾತೀತ ಜಾತ್ಯಾತೀತವಾದುದು. ಪುರುಷರಿಂದ ರಚಿತವಾಗಿರಲಿ ಅಥವ ಸ್ತ್ರೀಯರಿಂದ ರಚಿತವಾಗಿರಲಿ ವ್ರಮೌಖಿಕ ಕಾವ್ಯಗಳು ಪರಂಪರಾತವಾಗಿ ಬಂದವುಗಳಾಗಿರುತ್ತವೆ."[೩೭] ಈ ಹಿನ್ನೆಲೆಯಲ್ಲಿ ಮೌಖಿಕ ಕಾವ್ಯಗಳನ್ನು ಹಾಡುವ ಗಾಯಕರನ್ನು ಅವರ ಭಾಷೆಯ ಬಳಕೆಯ ನೆಲೆಗಳಲ್ಲಿ ಅನೇಕ ಭಿನ್ನತೆಗಳನ್ನು ಗುರುತಿಸಬಹುದಾಗಿದೆ ಮತ್ತು ಭಾಷೆ, ರಚನೆ, ಕಥನ ಶೈಲಿಯನ್ನು ಆಧಾರವಾಗಿರಿಸಿ, ಸ್ತ್ರಿ ಮತ್ತು ಪುರುಷ ಪಠ್ಯಗಳನ್ನು ಗುರುತಿಸಬಹುದು. ಅನೇಕ ವಿದ್ವಾಂಸರು ಹೇಳುತ್ತಾರೆ "ಘೋಕ್ ವ್ಯಾನ್ ಡಿಕ್– ಹೆಮ್ಸ್ ಎಂಬ ವಿಮರ್ಶಕನು ತನ್ನ "ಹೀಬ್ರೂ ಬೈಬಲ್‌ನಲ್ಲಿ ಸ್ತ್ರೆ ಪಠ್ಯಗಳ ಪ್ರಕ್ರಿಯೆ" ಎಂಬ ಲೇಖನದಲ್ಲಿ ಹೀಗೆ ಮಂಡಿಸುತ್ತಾನೆ. ಸ್ತ್ರೀ ಪಠ್ಯಗಳು ಸ್ತ್ರೀಯರ ಬಗ್ಗೆ ಹೆಚ್ಚಿಗೆ ಮಾಹಿತಿಯನ್ನು ಕೊಡುತ್ತವೆ ಮತ್ತು ಪುರಷ ಪಠ್ಯಗಳಷ್ಟು ಪುರಷ ಕೇಂದ್ರಿತವಾಗಿರುವುದಿಲ್ಲ ಎಂಬ ಅಭಿಪ್ರಾಯವನ್ನು "ಸ್ತ್ರಿ ಸಂಸ್ಕೃತಿ" ಎಂಬ ಪರಿಕಲ್ಪನೆಯು ಸಮರ್ಥಿಸಬಲ್ಲದು"[೩೮] ಎಂದಿದ್ದಾರೆ.

ಜುಂಜಪ್ಪ ಎಂಬ ಮೌಖಿಕ ಕಾವ್ಯವನ್ನು ಪುರಷರು ಮತ್ತು ಸ್ತ್ರೀಯರು ಇಬ್ಬರೂ ಹಾಡುತ್ತಾರೆ. ಇಲ್ಲಿ ಸ್ತ್ರೀಯರು ಜುಂಜಪ್ಪನ ಕಾವ್ಯವನ್ನು ಕೊಳಲು ಬಳಸದೆ ಸೋಬಾನೆ ಪದಗಳನ್ನು ಹಾಡುವ ರೀತಿಯಲ್ಲಿ ಹಾಡುತ್ತಾರೆ ಹಾಗೂ ಪುರುಷರು ಸ್ತ್ರೀಯರು ಜೋಡಿ ಗಣೆಯನ್ನು ಬಳಸುತ್ತಾರೆ ಗಂಡಸರ ಹಾಡು ವೀರರಸ ಪ್ರಧಾನವಾಗಿದ್ದರೆ ಹೆಂಗಸರ ಹಾಡುಗಳಲ್ಲಿ ಕರುಣಾ ರಸ ಪ್ರಧಾನವಾಗಿರುತ್ತದೆ. ಹೆಂಗಸರು ಹಾಡುವ ತ್ರಿಪದಿಗಳು ಗದ್ಯ ಕಾವ್ಯದಷ್ಟು ಧೀರ್ಘವಾಗಿರುವುದಿಲ್ಲ, ಗೌರ ಸಂದ್ರಮಾರಮ್ಮ, ಬೇವಿನಳ್ಳಿ ಕರಿಯಮ್ಮ–ಕೆರೆ ಓಬೇರ ಹಳ್ಳಿ ಮಾರಮ್ಮ ಮೊದಲಾದ ಸ್ತ್ರೀದೇವತೆಗಳ ಹಾಡುಗಳನ್ನು ಹೆಂಗಸರೇ ಹಾಡುತ್ತಾರೆ.

ಪಠ್ಯಗಳು ಯಾವಾಗಲೂ ಸ್ತ್ರೀ ಕೇಂದ್ರಿತವಾಗಿರುತ್ತವೆ ಎಂಬುದನ್ನು ದರೋಜಿ ಈರಮ್ಮ ಹಾಡಿದ ಕುಮಾರರಾಯ ಎಂಬ ಮೌಖಿಕ ಮಹಾಕಾವ್ಯ ಭಾವನಾತ್ಮಕವಾಗಿ ಮೂಡಿ ಬಂದಿದೆ. ಈ ಕಾವ್ಯನ್ನು ೧೪ನೇ ಶತಮಾನದಲ್ಲಿದ್ದ ಕಂಪ್ಲಿಯ ರಾಜಕುಮಾರ ಕುಮಾರಾಮನ ಕಥೆಯನ್ನು ನಿರೂಪಿಸುತ್ತದೆ.

ಮೌಖಿಕ ಕಾವ್ಯಗಳು ಮೌಖಿಕರ ನೋವು, ನಲಿವನ್ನು ನಿರೂಪಿಸುವ ಕಥನಗಳಾಗಿದ್ದು, ಅವರ ಜೀವನ, ಸಂಸ್ಕೃತಿ, ಆಚಾರ, ವಿಚಾರ, ನಂಬಿಕೆ, ಮಾಟ, ಮಂತ್ರಗಳನ್ನು ಕಾವ್ಯಗಳ ಮೂಲಕವೇ ಕಟ್ಟಿರುವುದನ್ನು ಕಾಣಬಹುದು. ಮೌಖಿಕ ಕಾವ್ಯಗಳು ಕಥನಗಳಂತೆ ಕಂಡರೂ ಅವು ಒಂದು ಸಮಾಜಕ್ಕೆ ಒಂದು ಸಮುದಾಯದ ವೈವಿಧ್ಯತೆ, ಸಂಸ್ಕೃತಿಗಳ ಪ್ರತಿನಿಧಿಯಾಗಿರುವಂತೆ ಕಾಣುತ್ತದೆ. ಮೌಖಿಕ ಕಾವ್ಯಗಳು ಸ್ತ್ರೀ ಪಠ್ಯಗಳಾಗಲೀ, ಪುರುಷ ಪಠ್ಯಗಳಾಗಲೀ, ಅವು ಭಾಷೆ ಸಂಸ್ಕೃತಿಯ ನೆಲೆಯಲ್ಲಿ ವಿಶೇಷವಾಗಿ ರೂಪುಗೊಂಡು ಒಂದು ವಾಕ್ ಪರಂಪರೆಗೆ ಅಡಿಪಾಯವನ್ನು ಹಾಕಿಕೊಟ್ಟಿವೆ. ಮೌಖಿಕ ಕಾವ್ಯಗಳು ಇಂದಿನ ಶಿಷ್ಟಪರಂಪರೆಯೊಂದಿಗೆ ಜೊತೆಯಾಗಿಯೇ ಸಾಗುತ್ತಿವೆ. ಮೌಖಿಕ ಕಾವ್ಯಗಳ ಪರಂಪರೆಯು ಅವುಗಳ ಕಥನ, ಗಾಯನ, ಪ್ರದರ್ಶನ, ಸಾಮಾರ್ಥ್ಯದ ಮೇಲೆ ಮುಂದುವರೆಯುತ್ತಾ ಹೋಗುತ್ತವೆ ಹಾಗೂ ಹಲವು ಸಂಪ್ರದಾಯಗಳು ಇಂದಿಗೂ ತಮ್ಮ ಕಾವ್ಯಗಳಲ್ಲಿರುವ ಸಾಂಸ್ಕೃತಿಕ ವೀರನನ್ನೇ ಪೂಜಿಸುತ್ತಿರುವುದನ್ನು ಕಾಣಬಹುದು. ಸಮುದಾಯಗಳಲ್ಲಿ ಇಂದಿಗೂ ದೀಕ್ಷೆಯ ಮೂಲಕ ಗಾಯನ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಈ ಎಲ್ಲಾ ಕಾವ್ಯಗಳಲ್ಲಿ ಬರುವ ದೈವದ ಮೇಲೆ ಗಾಯಕರು ಭಯ, ಭಕ್ತಿ, ಗೌರವ ಇಟ್ಟುಕೊಂಡು ತಮ್ಮ ಸಮುದಾಯಕ್ಕೆ ವಿಧಿಸಿದ ವಿಧಿ ನಿಷೇಧಗಳನ್ನು ಅಳವಡಿಸಿಕೊಂಡಿರುತ್ತಾರೆ.

ಒಟ್ಟಾರೆಯಾಗಿ ಮೌಖಿಕ ಕಾವ್ಯ ಪರಂಪರೆ ಮುಂದುವರೆಯಲೂ ಯಾವುದೇ ಸ್ತ್ರೀ ಪುರುಷ ಎಂಬ ಭೇದಗಳಿಲ್ಲದೇ ಹೆಣ್ಣು ಪುರುಷ ಗಾಯಕರಂತೆ ಸುಧೀರ್ಘವಾಗಿ ಹಾಡಬಲ್ಲಳು, ಮೌಖಿಕ ಪರಂಪರೆ ಅಭಿವೃದ್ಧಿ ಪಡಿಸುವ ಸಾಮಾರ್ಥ್ಯ ಅವಳಲ್ಲೂ ಇದೆ ಎಂಬುದನ್ನೂ ಕಾಣಲಾಗಿದೆ. ಸಮುದಾಯದ ಕಟ್ಟಳೆಗೆ ಮಾತ್ರ ಸೀಮಿತವಾಗಿದ್ದ ಸ್ತ್ರೀಯನ್ನು ಪುರುಷನೇ ಮೌಖಿಕ ಪರಂಪರೆಯ ಮುನ್ನೆಲೆಗೆ ದಾರಿ ಮಾಡಿಕೊಟ್ಟಿದ್ದು ವಿಶೇಷ. ಇಂದು ಅಭಿವೃದ್ಧಿ ಪಥದತ್ತ ಸಾಗುತ್ತಿರುವ ಸಮಾಜದಲ್ಲಿ ಸ್ತ್ರೀಯ ಪಠ್ಯಗಳು ರೂಪುಗೊಳ್ಳುತ್ತಿವೆ.ಮೌಖಿಕ ಪರಂಪರೆಯನ್ನು ಇಂದಿಗೂ ದರೋಜಿಯಲ್ಲಿ ಈರಮ್ಮನ ನಂತರ ಅವರ ಸಹೋದರಿಯರು ಮುಂದುವರೆಸಿಕೊಂಡು ಹೋಗುತ್ತಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

**ಕೊನೆಟಿಪ್ಪಣಿ**

೧. ಕನ್ನಡ ಜಾನಪದ ವಿಶ್ವಕೋಶ, ಸಂಪುಟ–೧, ಜೋಗುಳ ವಿಕಿಪೀಡಿಯಾ, kn,m,wikipedia

೨. ತೀ.ನಂ.ಶಂಕರ ನಾರಾಯಣ, ಎಂ.ಎನ್.ವೆಂಕಟೇಶ್, ಜನಪದ ಸಾಹಿತ್ಯ ಪ್ರಕಾರಗಳು, ೨೦೦೪, ಪು.ಸಂ–೧೫.

೩. ಅದೇ ಪುಸ್ತಕ, ಪು.ಸಂ–೧೪.

೪. ಕನ್ನಡ ಜಾನಪದ ವಿಶ್ವಕೋಶ, ಸಂಪುಟ–೧, ಜೋಗುಳ ವಿಕಿಪೀಡಿಯಾ, kn,m,wikipedia

೫. ಕುರುವ ಬಸವರಾಜ್, ಜನಪದ ಮಹಾಕಾವ್ಯಗಳ ನಿರ್ಮಾಣ ಪ್ರತಿಭೆಯ ನೆಲೆಗಳು, ೨೦೧೧, ಪು.ಸಂ–೭.

೬. ಸಿಂಗಪ್ಪ ಮುದೇನೂರು, ಕನ್ನಡ ಜನಪದ ಮಹಾಕಾವ್ಯಗಳು ಸಾಂಸ್ಕೃತಿಕ ವೀರರು.

೭. ಕುರುವ ಬಸವರಾಜ್, ಜನಪದ ಮಹಾಕಾವ್ಯಗಳ ನಿರ್ಮಾಣ ಪ್ರತಿಭೆಯ ನೆಲೆಗಳು, ೨೦೧೧, ಪು.ಸಂ-೨೧.

೮. ದೇ.ಜ.ಗೌ, ಮಹಾಕಾವ್ಯ ಪರಂಪರೆ, ಪು.ಸಂ-೯.

೯. ಎಂ.ಎಸ್ ಮುತ್ತಯ್ಯ, ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ, ಪು.ಸಂ-೨೧.

೧೦. ಕುರುವ ಬಸವರಾಜ್, ಜನಪದ ಮಹಾಕಾವ್ಯಗಳು ನಿರ್ಮಾಣ ಪ್ರತಿಭೆಯ ನೆಲೆಗಳು, ೨೦೧೧, ಪು.ಸಂ-೮೮.

೧೧. ಜಿ.ಶಂ.ಪರಮಶಿವಯ್ಯ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೧೯೭೯, ಪು.ಸಂ-೨೨೭,

೧೨. ಹೇಮಾವತಿ.ಟಿ.ಆರ್.ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ-೨೦೦೪, ಪು.ಸಂ-೧೨, (ಸಂಶೋಧನಾ ಮಹಾ ಪ್ರಬಂಧ).

೧೩. ರಾಜಶೇಖರ್ ಪಿ.ಕೆ, ಜನಪದ ಕಾವ್ಯಮಾಲೆ ಮಲೆ ಮಾದೇಶ್ವರ (ಸಂ.೧) ೧೯೭೩, ಪು.ಸಂ-೧೪.

೧೪. ನಾಗೇಶ್ ಎಚ್.ಕೆ, ಕಾಳಿಂಗರಾಯನ ಕಾವ್ಯ, ೨೦೦೦, ಪು.ಸಂ-೨.

೧೫. ಬೋರಲಿಂಗಯ್ಯ ಹಿ.ಚಿ., ಮಂಟೇಸ್ವಾಮಿ ಕಾವ್ಯ, ೧೯೯೭, ಪುಂ.ಸಂ-೩.

೧೬. ಅದೇ ಪುಸ್ತಕ, ಪು.ಸಂ-೮೨೩

೧೭. ನಾಗೇಶ್ ಎಚ್.ಕೆ, ಕಾಳಿಂಗರಾಯನ ಕಾವ್ಯ, ೨೦೦೦, ಪು.ಸಂ-೧೮.

೧೮. ನಾವಡ ಎ.ವಿ., ಮೌಖಿಕ ಕಾವ್ಯ ಸಂಯೋಜನ ಪ್ರಕ್ರಿಯೆ, ೨೦೦೦, ಪು.ಸಂ-೩೪.

೧೯. ನಿಂಗಪ್ಪ ಮುದೇನೂರು, ಕನ್ನಡ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ೨೦೦೪, ಪು.ಸಂ-೨೭,೨೮.

೨೦. ಹೇಮಾವತಿ.ಟಿ.ಆರ್. ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ-೨೦೦೪, ಪು.ಸಂ-೨೧, (ಸಂಶೋಧನಾ ಮಹಾಪ್ರಬಂಧ)

೨೧. ಜೀ.ಶಂ. ಪರಮಶಿವಯ್ಯ, ಜನಪದ ಕಾವ್ಯ ಕತೆಗಳು ಮತ್ತು ಗೀತ ಮೇಳಗಳು, (ಸಂ.೨), ೨೦೧೨, ಪು.ಸಂ-೪೯೧.

೨೨. ಅದೇ ಪುಸ್ತಕ. ಪು.ಸಂ-೪೯೧

೨೩. ಕೇಶವನ್ ಪ್ರಸಾದ್, ಮಲೆಮಾದೇಶ್ವರ ಕಾವ್ಯ, ೧೯೯೭, ಪು.ಸಂ-೧೨೫.

೨೪. ಬೋರಲಿಂಗಯ್ಯ ಹಿ.ಚಿ., ಮಂಟೇಸ್ವಾಮಿ ಕಾವ್ಯ, ೧೯೯೭, ಪುಂ.ಸಂ-೯೭.

೨೫. ಚೆಲುವರಾಜ್, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೧೩೧.

೨೬. ಗಂಗಾಧರ ದೈವಜ್ಞ, ಮಾಳಿಂಗರಾಯನ ಕಾವ್ಯ, ೧೯೯೯, ಪು.ಸಂ-೩.

೨೭. ಮಂಜುನಾಥ ಬೇವಿನಕಟ್ಟೆ, ಮೈಲಾರಲಿಂಗನ ಕಾವ್ಯ, ೧೯೯೯, ಪು.ಸಂ-೩೮.

೨೮. ಕುರುವ ಬಸವರಾಜ್, ಜನಪದ ಮಹಾಕಾವ್ಯಗಳ ನಿರ್ಮಾಣ ಮತ್ತು ಪ್ರತಿಭೆಯ ನೆಲೆಗಳು, ೨೦೧೧, ಪು.ಸಂ-೩೧, ೩೨,

೨೯. ನಿಂಗಪ್ಪ ಮುದೇನೂರು, ಕನ್ನಡ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ೨೦೦೪, ಪು.ಸಂ-೧೮೨,

೩೦. ಪಾತಲಿಂಗಪ್ಪ, ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು, ೨೦೧೭, ಪು.ಸಂ-೩೧, ಮಹಾಪ್ರಬಂಧ.

೩೧. ಅದೇ ಮಹಾಪ್ರಬಂಧ, ಪು.ಸಂ-೩೪,

೩೨. ಮೈತ್ರಿ ಕೆ.ಎಂ., ಕುಮಾರರಾಮನ ಕಾವ್ಯ, ೧೯೯೭, ಪು.ಸಂ-೨.

೩೩. ಮೈತ್ರಿ ಕೆ.ಎಂ., ಕೃಷ್ಣಗೊಲ್ಲರ ಕಾವ್ಯ, ೧೯೯೭, ಪು.ಸಂ-೨೨೭.

೩೪. ಚಲುವರಾಜು, ಬಾಲನಾಗಮ್ಮ, ೨೦೧೭, ಪು.ಸಂ-೫.

೩೫. ರಮೇಶ್.ಸ.ಚಿ. ಸ್ಯಾಸಿ ಚಿನ್ನಮ್ಮನ ಕಾವ್ಯ, ೧೯೯೯, ಪು.ಸಂ-೨೬.

೩೬. ಮೈತ್ರಿ ಕೆ.ಎಂ, ಎಲ್ಲಮ್ಮನ ಕಾವ್ಯ, ೨೦೦೫, ಪು.ಸಂ-೨೬.

೩೯. ನಾವಡ ಎ.ವಿ. ಸಿರಿಪಾಡ್ದನ, ೧೯೯೯, ಪು.ಸಂ-೨.

೪೦. ರಾಮಚಂದ್ರನ್. ಸಿ.ಎನ್, ಅಖ್ಯಾನ ವ್ಯಾಖ್ಯಾನ, ೨೦೧೧, ಪು.ಸಂ-೧೪೨.

೪೧. ಅದೇ ಪುಸ್ತಕ, ಪು.ಸಂ-೧೪೩.

# ಅಧ್ಯಾಯ : ಮೂರು
## ಮೌಖಿಕ ಮಹಾಕಾವ್ಯ ಸಾಮಾಜಿಕ ನೆಲೆಗಳು

## ಅಧ್ಯಾಯ : ಮೂರು

## ಮೌಖಿಕ ಮಹಾಕಾವ್ಯ ಸಾಮಾಜಿಕ ನೆಲೆಗಳು

### ೩.೧ ಸಮಾಜದ ಸ್ವರೂಪ ಮತ್ತು ಮನುಷ್ಯನ ಅಸ್ತಿತ್ವ

ಅಸ್ತಿತ್ವವು ಒಬ್ಬ ವ್ಯಕ್ತಿಯ ಬೆಳವಣಿಗೆಯನ್ನು ಎಲ್ಲಾ ಕಾಲಕ್ಕೂ ಎಲ್ಲಾ ಪಂಥಗಳು ಅನುಸರಿಸಿಕೊಂಡು ಬಂದಿರುವುದಾಗಿದೆ. ಅಸ್ತಿತ್ವವು ಸಮಾಜದಲ್ಲಿ ಮನುಷ್ಯನ ಇರುವಿಕೆಯನ್ನು ನಿರ್ಧರಿಸುತ್ತದೆ. ಮೊದಲು ಅಸ್ತಿತ್ವವಾದವನ್ನು ಆರಂಭಿಸಿದವರು ೧೯ ನೇ ಶತಮಾನದ ಕಿರ್ಕಗಾರ್ಡ್ ಮತ್ತು ನೀತ್ಸೆ ಎಂಬ ತತ್ವಜ್ಞಾನಿಗಳಿಂದ. ನಂತರ ಈ ಸಿದ್ಧಾಂತ ಯುರೋಪಿನಲ್ಲಿ ಬೆಳವಣಿಗೆಯಾಯಿತು.

ಅಸ್ತಿತ್ವ ಎನ್ನುವುದು ಒಂದು ಸಿದ್ಧಾಂತ ಎಂದು ಹೇಳಲು ಸಾಧ್ಯವಿಲ್ಲ, ಏಕೆಂದರೆ ಸಮಾಜದಲ್ಲಿ ಮಾನವ ಮತ್ತು ದೇವರ ಅಸ್ತಿತ್ವವನ್ನು ಕಂಡುಕೊಳ್ಳಲು ಭಿನ್ನ ಭಿನ್ನ ಆಯಾಮಗಳಿರುವುದನ್ನು ಕಾಣಬಹುದು. ಹಾಗೆಯೇ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಮಾನವನಾಗಲಿ, ದೇವರಾಗಲಿ ಸೈದ್ಧಾಂತಿಕವಾಗಿ ಜೀವಿಸಬೇಕಾಗುತ್ತದೆ. ಸಮಾಜದಲ್ಲಿ ಮಾನವ ಅಥವಾ ದೈವದ ಅಸ್ತಿತ್ವವಾಗಲೂ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. "ದೇವರಿದ್ದಾನೆಯೇ, ಇಲ್ಲವೇ? ದೇವರು ಇದ್ದರು ಇಲ್ಲದಿದ್ದರೂ ಜಗತ್ತು ಇದಿಯಲ್ಲಾ ಈ ಜಗತ್ತಿನ ಅರ್ಥ ಮತ್ತು ಉದ್ದೇಶಗಳೇನು? ಒಳಿತು ಕೆಡುಕು ಮುಂತಾದ ನೈತಿಕತೆ ಇದೆಯೇ? ಸತ್ಯವೆಂದರೆ ಏನು? ಜಗತ್ತಿನ ಜೊತೆ ಮನುಷ್ಯ ಹೇಗೆ ಸಂಬಂದಿಸಿದ್ದಾನೆ. ಅವನಿಗೆ ಆಯ್ಕೆಯ ಸ್ವತಂತ್ರ್ಯವಿದ್ದರೆ ಯಾವ ತಳಹದಿಯ ಮೇಲೆ ಅವನು ಆಯ್ಕೆಗಳನ್ನು ಮಾಡುತ್ತಾನೆ. ಮಾಡಿಕೊಳ್ಳಬೇಕು, ತನಗೆ ತಾನೆ ಹೊಣೆ ಎನ್ನುವುದಾದರೆ ಮನುಷ್ಯನಿಗೆ ಅನಾಥ ಪ್ರಜ್ಞೆ ಕಾಡುವುದಿಲ್ಲವೆ.[೧] ಇಂತಹ ಅನೇಕ ಪ್ರಶ್ನೆಗಳು ಮಾನವನಲ್ಲಿ ಹುಟ್ಟುತ್ತಾ ಹೋದಂತೆ ಅವನು ತನ್ನನ್ನೇ ತಾನು ಕಂಡುಕೊಳ್ಳುವತ್ತ ಹೆಜ್ಜೆ ಇಡುತ್ತಾನೆ. ಇಲ್ಲಿಂದಲೇ ತನ್ನ ಅಸ್ತಿತ್ವವನ್ನು ನಿರ್ಮಿಸಿಕೊಳ್ಳುತ್ತಾನೆ.

ಮನುಷ್ಯನು ಸಮಾಜದ ಒಂದು ವಸ್ತುವಾಗಿ ಕಂಡಾಗ ಅವನನ್ನು ಸಮಾಜಕ್ಕೆ ಅನುಗುಣವಾಗಿ ಪ್ರಯೋಗದ ವಸ್ತುವಾಗಿ ಬಳಸಿಕೊಂಡು ಅವನಲ್ಲಿ ಆಧ್ಯಾತ್ಮಿಕತೆಯ ಅನುಭವವನ್ನು ಆಂತರಿಕವಾಗಿ ಒಪ್ಪಿಸುತ್ತಾನೆ. ಇದರಿಂದಾಗಿಯೇ ಮನುಷ್ಯ, ಸಮಾಜ, ದೈವದ ಅಸ್ತಿತ್ವಗಳು ಭಿನ್ನವಾಗಿಯೇ ಗೋಚರಿಸುತ್ತವೆ. ಆದರೆ ಇವೆಲ್ಲವೂ ಕಾವ್ಯಗಳ ಮೂಲಕ ನಡೆಯುವ ಒಂದು ಸಾಂದರ್ಭಿಕದಂತೆ

ಆತ್ಮನಿಷ್ಠವು ಆಗಿರುತ್ತವೆ. ಮಾನವನ ಅಸ್ತಿತ್ವ ಹುಡುಕ ಹೊರಟರೆ ಮೊದಲು ದೈವದ ಬಗೆಗಿನ ಅಸ್ತಿತ್ವವನ್ನು ಮೊದಲು ಕಂಡುಕೊಳ್ಳಬೇಕಾಗುತ್ತದೆ. ದೈವವು ತನ್ನ ಅಸ್ತಿತ್ವದ ಇರುವಿಕೆಗಾಗಿ ಸಮಾಜದ ನಿರ್ಮಾಣ ಮಾಡುತ್ತಾನೆ. ಸಮುದಾಯಗಳನ್ನು ಹುಟ್ಟುಹಾಕುತ್ತಾನೆ. ಆಗ ಅಸ್ತಿತ್ವ ಎನ್ನುವುದು ಒಬ್ಬ ವ್ಯಕ್ತಿಗೆ ಸಂಬಂಧ ಪಡುವುದಿಲ್ಲ, ಇಡೀ ಸಮುದಾಯಗಳಿಗೆ ಸಂಬಂದಿಸಿರುತ್ತದೆ. ಈ ಸಮುದಾಯಗಳು ಆ ದೈವದ ಸಂಬಂಧಿತ ನಿರ್ಭಂದಗಳು, ರೀತಿ, ನೀತಿಗಳು, ಆಚರಣೆಗಳು, ವಿಧಾನಗಳ ಮೂಲಕ ಮನುಷ್ಯನ ಅಸ್ತಿತ್ವವನ್ನು ರೂಪಿಸುತ್ತಾನೆ. "ಮನುಷ್ಯ ಮತ್ತು ಅವನ ಮೌಲ್ಯಗಳಿಗೆ ಹಾಗೂ ನೈಜ ಅಸ್ತಿತ್ವದ ಕೈಗೂಡುವಿಕೆಗೆ ಸಂಬಂದಿಸಿದುದು."[೨] ನಾಯಕರ ಅಗತ್ಯತೆ ಇರುತ್ತದೆ. ಅಂತಹ ನಾಯಕರು ತಾವು ಒಂದು ರೀತಿಯ ಮಾನಸಿಕ ಒಪ್ಪಂದವನ್ನು ಮನುಷ್ಯ ಹಾಗೂ ಸಮಾಜದಲ್ಲಿ ಹುಟ್ಟುಹಾಕುತ್ತಾರೆ. ಮನುಷ್ಯನು ಸಹ ಒಂದು ನಂಬಿಕೆಗೆ ಕಟ್ಟು ಬಿದ್ದು ತಮ್ಮ ತಮ್ಮಲ್ಲಿಯೇ ನಿರ್ಭಂದಗಳನ್ನು ಹೇರಿಕೊಂಡು ಸಮುದಾಯದ ದೈವಕ್ಕೆ ಅರ್ಪಿಸಿಕೊಳ್ಳುತ್ತಾರೆ.

ಸಮಾಜದಲ್ಲಿ ಮಾನವನ ಅಭಿವೃದ್ಧಿ, ಲೋಕಕಲ್ಯಾಣ, ಕೌಟುಂಬಿಕತೆ, ಸಂಸ್ಕೃತಿ ಇವೆಲ್ಲವುಗಳ ನಿರ್ಮಾಣ ಮಾಡುವುದು ಅವರ ದೈವಗಳ ಅಸ್ತಿತ್ವದ ಮೂಲಕವೇ ಆಗಿದೆ. ಸಾಂಸ್ಕೃತಿಕ ನಾಯಕರು ತಮ್ಮ ತಮ್ಮ ಸಮುದಾಯಗಳ ಆರ್ಥಿಕತೆ, ರಾಜಕೀಯ, ಸಾಮಾಜಿಕ ಚಿಂತನೆಗಳೊಂದಿಗೆ ಪರಸ್ಪರ ಅವಿನಾಭಾವ ಸಂಬಂದ ಹೊಂದುವುದರೊಂದಿಗೆ ಮನುಷ್ಯನ ಮತ್ತು ದೈವದ ಶುದ್ದ ರೂಪದ ಇರುವಿಕೆಯನ್ನು ಹುಟ್ಟುಹಾಕುತ್ತಾರೆ. ಪ್ರತಿಯೊಬ್ಬ ಮೌಖಿಕ ನಾಯಕರು ತಮ್ಮದೇ ಆದ ಒಕ್ಕಲು ನಿರ್ಮಿಸುವ ತವಕವನ್ನು ಅನುಭವಿಸಿದ್ದು ಅಸ್ತಿತ್ವ ಸಾಧಿಸುವ ಅನಿವಾರ್ಯತೆ ಇದ್ದಿತು ಮತ್ತೆ ಕೆಲವು ನಾಯಕರು ತಮ್ಮ ಅನನ್ಯತೆಯನ್ನು ತೋರ್ಪಡಿಸುವ ಅವಶ್ಯಕತೆಯು ಕಂಡುಬರುತ್ತದೆ. ಇದಕ್ಕೆ ಬೇಕಾದ ಸಮಾಜ, ಮಾನವ, ಪರಂಪರೆಯನ್ನು ತಮ್ಮ ಅಸ್ತಿತ್ವಕ್ಕೆ ಬೇಕಾದ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ನಿರ್ಮಿಸುವ ಪ್ರಯತ್ನ ಮಾಡಿದ್ದಾರೆ. ಮೌಖಿಕ ನಾಯಕರು "ದುಡಿಯುವ ಸಮುದಾಯಗಳು ಪ್ರಭುತ್ವದ ಹೇರಿಕೆ, ಶಕ್ತಿಗಳನ್ನು ಹೊಡೆದು ಹಾಕಿ ತಮ್ಮದೇ ಆದ ಅಸ್ತಿತ್ವ ಮತ್ತು ಅಧಿಕಾರವನ್ನು ಸ್ಥಾಪಿಸಲೆತ್ನಿಸುತ್ತವೆ. ಕೆಲವೊಮ್ಮೆ ಜಗಳದ ಮೂಲಕ ಇನ್ನೂ ಕೆಲವೊಮ್ಮೆ ಸಂಧಾನದ ಮೂಲಕ ಈ ಸಮುದಾಯಗಳು ತಮ್ಮ ಬದುಕನ್ನು ರೂಪಿಸಿಕೊಳ್ಳುತ್ತವೆ."[೩] ಮೌಖಿಕರು ಕಾವ್ಯದುದ್ದಕ್ಕೂ ತಮಗೆ ಎದುರಾಗುವ ಸಂಕೀರ್ಣತೆಗಳನ್ನು ನಾಯಕರ ಮೂಲಕವೇ ಪರಿಹರಿಸಿಕೊಳ್ಳುತ್ತಾರೆ. ಮನುಷ್ಯ ಸಮಾಜದಲ್ಲಿ ನೆಮ್ಮದಿಯಿಂದ ಬದುಕಬೇಕಾದರೆ ಸಾಮಾಜಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕ ಬದಲಾವಣೆಗಳನ್ನು ಬಯಸುತ್ತಾನೆ.

ಮೌಖಿಕ ಕಾವ್ಯಗಳಲ್ಲಿ ಬರುವ ಸಾಂಸ್ಕೃತಿಕ ನಾಯಕರ ಅಸ್ತಿತ್ವವು ವ್ಯಾತ್ಯಾಸದಿಂದ ಕೂಡಿದೆ. ಏಕೆಂದರೆ ಈ ನಾಯಕರೆಲ್ಲಾ ಕೆಳಸ್ತರದ ಜನರ ಶ್ರಮಿಕರ ಪರವಾಗಿ ಹೊಸ ಸಮಾಜದ ನಿರ್ಮಾಣವನ್ನು ಮಾಡುತ್ತಾರೆ. ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಮಾಳಿಂಗರಾಯ, ಇವರೆಲ್ಲರು ಒಂದೊಂದು ಕಾರಣಕ್ಕಾಗಿ ಸಮಾಜದಲ್ಲಿ ತಮ್ಮ ಅಸ್ತಿತ್ವ ನಿರ್ಮಿಸುವುದರ ಮೂಲಕ ವೈಶಿಷ್ಟ್ಯತೆ ತೋರುತ್ತಾರೆ. ಸಮಾಜದಲ್ಲಿ ಇದ್ದಂತಹ ಮೇಲು-ಕೀಳು, ಬಡವ-ಶ್ರೀಮಂತ, ಶ್ರಮಿಕರು,

ರಾಜರು, ಸೇವಕರು, ಕೆಳವರ್ಗ-ಮೇಲ್ವರ್ಗ, ಮೊದಲಾದ ಅಸಮಾನತೆಯಿಂದಾಗಿ ಸಂಘರ್ಷಗಳು ಉಂಟಾದವು. ಇದರ ನಿವಾರಣೆಗಾಗಿಯೇ ಸಾಂಸ್ಕೃತಿಕ ನಾಯಕರ ಜನನದ ಮೂಲಕ ಒಂದು ಹೊಸ ಪರಂಪರೆಯನ್ನೆ ಹುಟ್ಟುಹಾಕಿದ್ದಾರೆ. ಈ ನಾಯಕರೆಲ್ಲಾ ಕೆಳಸ್ತರದಲ್ಲಿ ಸಾಮಾನ್ಯ ಮಾನವರೊಂದಿಗೆ ಜೀವಿಸುವುದರೊಂದಿಗೆ ದೈವಿಕರಣಗೊಳ್ಳುತ್ತಾರೆ. ಮಾದೇಶ್ವರ, ಮಂಟೇಸ್ವಾಮಿ, ಮೈಲಾರ, ಜುಂಜಪ್ಪ, ಮಾಳಿಂಗರಾಯ, ಇವರೆಲ್ಲರು ತಮ್ಮ ಅಸಾಧಾರಣ ಶಕ್ತಿಯಿಂದಲೇ ಸಮಾಜದಲ್ಲಿ ಹೊಸ ಮನುಷ್ಯನ ಅಸ್ತಿತ್ವಕ್ಕೆ ಕಾರಣವಾಗುತ್ತಾರೆ. ಹಾಗೂ ಸಾಂಸ್ಕೃತಿಕ ನಾಯಕರಾಗುತ್ತಾರೆ. "ಜನರ ಜೊತೆ ಸಾಮಾನ್ಯ ಮನುಷ್ಯರಂತೆ ಬದುಕಿರುತ್ತಾರೆ. ಇಂದಿಗೂ ಆಚರಣೆಗಳಲ್ಲಿ ಮನುಷ್ಯರ ದೇವರ ಜೊತೆ ಆಟ, ಯುದ್ದ, ಜಗಳಗಳಲ್ಲಿ ಭಾಗವಹಿಸುತ್ತಾರೆ. ಮನುಷ್ಯ ತನ್ನ ವ್ಯವಹಾರಗಳನ್ನು ದೈವದ ಜೊತೆ ಹೊಂದಿರುತ್ತಾರೆ. ಹಾಗೂ ಜೈವಿಕ, ಬೌದ್ಧಿಕ, ಭೌತಿಕ ರೂಪದಲ್ಲಿ ಮನುಷ್ಯ ಜೀವನದ ಮೇಲೆ ಪ್ರಭಾವ ಬೀರುವ ಶಕ್ತಿಗಳಾಗಿ ಅಸ್ತಿತ್ವದಲ್ಲಿರುತ್ತಾರೆ"[೪] ತಮ್ಮದೇ ಪರಂಪರೆಗಳನ್ನು ನಿರ್ಮಾಣ ಮಾಡಿ ಇತರರ ಏಳಿಗೆಗಾಗಿ ಮಾನವೀಯತೆಯಿಂದ ಸಾಮಾನ್ಯನಿಗೆ ಬದುಕನ್ನು ಕಟ್ಟಿಕೊಡುತ್ತಾರೆ.

ಮೌಖಿಕ ಕಾವ್ಯಗಳ ನಾಯಕರು ಸಮಾಜದಲ್ಲಿ ತಮ್ಮ ಅಸ್ತಿತ್ವ ನಿರ್ಮಾಣ ಮಾಡಲು ಕೆಲವು ಕಡೆ ಸಂಘರ್ಷ, ಸಂಧಾನಗಳು ನಡೆಯುತ್ತವೆ ಹಾಗೂ ಲೌಖಿಕ ಬದುಕನ್ನು ಸೃಷ್ಟಿ ಮಾಡುವುದು ಇವರ ಉದ್ದೇಶವಾಗಿರುತ್ತದೆ. ಇದಕ್ಕೆ ಒಂದು ಪ್ರದೇಶದ ಕೆಲ ಸಮುದಾಯಗಳಿಂದ ಮಾತ್ರ ಸಾಧ್ಯವಾಗಿರುತ್ತದೆ. ಆದ್ದರಿಂದಲೇ ಶಿಷ್ಟ ದೇವತೆಗಳ ಪ್ರತಿರೂಪವಾಗಿ ಸಾಂಸ್ಕೃತಿಕ ನಾಯಕರು ಜನಿಸುತ್ತಾರೆ. ಇಂದಿಗೂ ಶಿಷ್ಟ ದೇವತೆಗಳನ್ನು ಪೂಜಿಸುವುದರ ಜೊತೆಗೆ ಮೌಖಿಕ ಕಾವ್ಯಗಳ ಆರಾಧನೆಯನ್ನು ಮಾಡುತ್ತಾರೆ. ನಾಯಕರು ಅಸಾದಾರಣ ಶಕ್ತಿಯೊಂದಿಗೆ ಅಪಾರವಾದ ಭಕ್ತ ಸಮೂಹವನ್ನು ಹೊಂದಿದ್ದಾರೆ. ನಾಯಕರನ್ನು ಆರಾಧಿಸುವವರ ಮನೋನೆಲೆಯು ಶಿಷ್ಟದೇವತೆಗಳನ್ನು ಒಪ್ಪಿಕೊಂಡಿರುತ್ತದೆ.

ಮಾದೇಶ್ವರ ಕಾವ್ಯದಲ್ಲಿ ಮಾದಪ್ಪ ಶಿವನ ಅವತಾರವಾಗಿ ಜಗತ್ತಿನಲ್ಲಿ ಜನಿಸುವುದನ್ನು ಕಾಣಬಹುದು

"ಬ್ರಹ್ಮದೇವರು ವಿಷ್ಣುದೇವರು ಕೂತ್ಕಂಡು
ನೋಡಯ್ಯ ಈಸ್ಪುರ
ನೀನು ಪ್ರಪಂಚದಲ್ಲಿ ಸೃಷ್ಟಿಕರ್ತನಾಗಿರುತಕ್ಕಂಥವನು
ತ್ರೇತಾಯುಗ ಕೃತಾಯುಗ ದ್ವಾಪರಯುಗ
ಮುಂದು ಮುಂದುನಕಲಿಯುಗ ಬರ್ತಾಯಿದೆ
ಕಲಿಯುಗದಲ್ಲಿ ಭೂಲೋಕದಲ್ಲಿ ಧರ್ಮಗಳು ಹಾಳಾಗಿ
ಕರ್ಮವೇ ಹೆಚ್ಚಾಗ್ತಾಯಿದೆ
ಕಾಸಿನ ಧೂಫ ಹಾಕುವರಿಲ್ಲ ಕರವೆತ್ತಿ ಕಯ್ಯ ಮುಗಿಯುವರಿಲ್ಲ

ನಮ್ಮ ಶಿವಾ ಶಿವಾ ಎಂದು ಶಿವನ ಜ್ಞಾನ ಮಾಡುವರಿಲ್ಲ

ನೀನು ಅವತಾರ ಎತ್ತು ಅಂಥವರೆ ಜಗದೊಡೆಯಾ"[೫]

ಎಂದು ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ಮಹೇಶ್ವರನಿಗೆ ಸಮಾಜದಲ್ಲಿ ಅಸಮಾನತೆಯನ್ನು ತೊಲಗಿಸಿ ಶಿಷ್ಟರ ರಕ್ಷಣೆ ಮಾಡಲು ಭೂಲೋಕದಲ್ಲಿ ಹುಟ್ಟುವಂತೆ ಹೇಳುತ್ತಾರೆ. ಅದೇ ರೀತಿ ಮಂಟೇಸ್ವಾಮಿ ಕಾವ್ಯದಲ್ಲಿ ಅಲ್ಲಮಪ್ರಭುವಿನ ಪ್ರತಿರೂಪವಾಗಿ ಮಂಟೇಸ್ವಾಮಿಯೇ ಭೂಮಿ, ಆಕಾಶವನ್ನು ಸೃಷ್ಟಿಸುವುದರ ಮೂಲಕ ಜಗತ್ತಿಗೆ ಸತ್ಯ ಅಸತ್ಯ, ಸಮಾನತೆ ಅಸಮಾತೆ ಎಂಬ ಬೆಳಕನ್ನು ನೀಡಲು ಭೂಲೋಕದಲ್ಲಿ ಜನಿಸುತ್ತಾರೆ.

"ಈಗಲೀಗ ಕೇಳಿರಪ್ಪ ಕಂದ ಶಿಶು ಮಕ್ಕಳೇ

ಈಗಲೀಗ ಬಲದಲ್ಲಿ ಉತ್ತೇಶ್ವರನ ಪಡಕಂಡೆ

ಎಡದಲ್ಲಿ ಮಹೇಶ್ವರನ ಪಡೆದೆ

ಈಗಲೀಗ ಮದ್ಯದಲ್ಲಿ ನಾನು ಈಗಲೀಗ ಸಾದೃಷ್ಟದಿಂದ ಗುರುವು

ಸಾಧಿಸಿ ನಾನು ಬೆಳೆದು ಬಂದುದಕೆ

ಈವತ್ತಿನ ದಿವಸದಲ್ಲಿ ಗುರುವು

ಉತ್ತರ ದೇಸದಲ್ಲಿ ಹುಟ್ಟಿದಂತಾ

ಪರಂಜ್ಯೋತಿ ಅನುವಂತ ನಾಮಕರಣ  ನನಗಾಗಲಿ ಕಂದಾ"[೬]

ಎಂದು ಮಂಟೇಸ್ವಾಮಿಗಳು ಜ್ಞಾನದ ಬುಕ್ಕನ್ನು ಹಿಡಿದು ಜಗತ್ತಿನ ಸೃಷ್ಟಿಗೆ ಬರುತ್ತಾರೆ.

ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿಯು ಪ್ರಾರಂಭದಲ್ಲಿಯೇ ಕಾಲಜ್ಞಾನ ಬುಕ್ಕಿನೊಡನೆ ಕಾಣಿಸಿಕೊಂಡು ಸಾಮಾಜದ ನಿರ್ಮಾಣಕ್ಕೆ ಮುಂದಾಗುತ್ತಾನೆ. ಕಾಲಜ್ಞಾನದ ಬುಕ್ಕನ್ನು ಬ್ರಹ್ಮದೇವನೇ ಕೇಳಿದಾಗ ಮಂಟೇಸ್ವಾಮಿ ಅದನ್ನು ನೀಡದೆ ಬ್ರಹ್ಮನಿಗೆ ಜಗತ್ತಿನ ಸೃಷ್ಟಿಯು ತನ್ನ ಜವಾಬ್ದಾರಿ ಎಂಬುದನ್ನು ಈ ರೀತಿ ಹೇಳುತ್ತಾರೆ.

"ಕಾಲಜ್ಞಾನದ ಬುಕ್ಕು ನಿಮ್ಗೆ

ಕಣ್ಣಿಂದ ನೋಡಲಿಕ್ಕೆ

ಕೊಡುತ್ತೀನಿ ನನ್ನ ಕಂದಾ

ಈ ದಾನ ಧರ್ಮದ ಭೂಮಿ ಭೂಲೋಕ ನಿಮ್ಮ

ಕೈಯಿಗೆ ಕೊಡುವುದಿಲ್ಲ ಸಿದ್ದಯ್ಯ"[೭]

ಎಂದು ನಿರಾಕರಿಸಿ ತಾನೇ ಹೊಸ ಸಮಾಜದ ನಿರ್ಮಾಣವನ್ನು ಮಾಡುವುದಾಗಿ ಹೇಳುತ್ತಾನೆ.

ಮಂಟೇಸ್ವಾಮಿ, ಜುಂಜಪ್ಪರು ಅಸಾದಾರಣ ಶಕ್ತಿಯನ್ನು ಹೊಂದಿದ್ದು ನೊಂದ ಜನರ ಪರವಾಗಿ ಆಧುನಿಕ ದೈವಗಳೊಂದಿಗೂ ಬೇಕಾದರೂ ಸಂಘರ್ಷ ಮಾಡುವವರಾಗಿದ್ದಾರೆ. ಆದ್ದರಿಂದಲೇ ಸಾಂಸ್ಕೃತಿಕ ನಾಯಕರು ಇಂದಿಗೂ ಜೀವಂತವಾಗಿದ್ದಾರೆ. ಜುಂಪ್ಪನ ಹುಟ್ಟು ಸಹ ಸಾಮಾನ್ಯವಾದುದಲ್ಲ. ಆದ್ದರಿಂದ ಸ್ವತಃ ಶಿವ ಪಾರ್ವತಿಯರೆ ಜುಂಜಪ್ಪನ ಕೆಲಸ ಕಾರ್ಯಗಳಿಗೆ ಅಡ್ಡಿ ಮಾಡುವುದಿಲ್ಲ.

"ನನ್ನ ಉರಿಗಣ್ಣು ಉರಿ ಅಸ್ತ ಅವ್ನಿಗೆ ಕೊಟ್ಟಿದ್ದೀನಿ

ಅರೆ ನಿದ್ರೆ ಮಾಡ್ತಿದ್ರೂ

ಅರೆಗಣ್ ಬಿಟ್ ನೋಡ್ತಿದ್ರೂ

ಸುಟ್ ಬೂದಿಯಾಗ್ ಬಿಡ್ತಿನಿ ನಾನು

ಬ್ಯಾಡ ನಡಿ ಕೈಲಾಸುಕೋಗಾನ ಅಂದ ಪರಮೇಶ್ವರ"[೮]

ಅಸಾಧಾರಣನಾದ ಜುಂಜಪ್ಪನ ಶಕ್ತಿಯನ್ನು ಪರಮೇಶ್ವರನೇ ಪಾರ್ವತಿಗೆ ಹೇಳಿ ಜಗತ್ತನ್ನು ಪೊರೆಯಲು ಅವತಾರ ಪುರುಷನಾಗಿ ಜುಂಜಪ್ಪ ಹುಟ್ಟಿರುವುದಾಗಿ ಹೇಳುತ್ತಾನೆ. ಮೈಲಾರಲಿಂಗನ ಕಾವ್ಯದಲ್ಲಿ ಮೈಲಾರನು ವೀರಭದ್ರನ ಅವತಾರವೆಂದು, ಭೂಮಿಯನ್ನು ಪೊರೆಯಲು, ಶಿಷ್ಟರ ರಕ್ಷಣೆಗೆ ಹುಟ್ಟಿದವನೆಂದು ವಿಧ ವಿಧವಾಗಿ ಮೈಲಾರಲಿಂಗನನ್ನು ಬಣ್ಣಿಸುತ್ತಾರೆ.

"ಶಿರಿ ಶಿವಾ ಶಿವಲಿಂಗೇಶ್ವರ ಕಲಬುರುಗದ ಮೈಲಾರಲಿಂಗ

ಮಲ್ಲಿಕಾರ್ಜನ ಬಹುಪರಾಕು

ಏಳುಕೋಟಿ ಏಳುಕೋಟಿಗೋ"[೯] ಎಂದು ಮೈಲಾರನನ್ನು ನೆನೆಯುತ್ತಾ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಮಾಳಿಂಗ ರಾಯನು ಬಸವಣ್ಣನ ಅವತಾರವೆಂದು ಹುಟ್ಟಿನಿಂದಲೇ ದೈವೀ ಶಕ್ತಿ ಹೊಂದಿ ಜಗದ ಉದ್ದಾರ ಮಾಡಿದನೆಂದು ಮಾಳಿಂಗರಾಯ ಕಾವ್ಯದಲ್ಲಿ ಮಾಳಿಂನ ಹುಟ್ಟಿನ ಬಗ್ಗೆ ಹೇಳುತ್ತಾರೆ.

"ಮಣಿಕ ಮಣಿಯಿಂದ

ಬಸವನ ಅವತಾರ

ಮಾಳಪ್ಪೆಂದು ಆಯ್ತು$$$

ಮೃತ್ಯು ಲೋಕದಾಗ$$$

ಹುಟ್ಟಿ ಬಂದಾರೇನೋ$$$

ಜಗ ಉದ್ಧಾರವಾಯ್ತೋ$$$

ಹಾಲು ಮತಕ ಮೇಲ$$$"[೧೦]

ಈ ರೀತಿಯಾಗಿ ಸಾಂಸ್ಕೃತಿಕ ನಾಯಕರು ಬ್ರಹ್ಮ, ವಿಷ್ಣು, ಮಹೇಶ್ವರ ಅವತಾರವಾಗಿ ಜಗತ್ತಿನಲ್ಲಿ ಹುಟ್ಟಿ ಸಾಮಾನ್ಯ ಮನುಷ್ಯರಂತೆ ಹಸಿವು, ನಿದ್ದೆ, ಬಾಯಾರಿ ಕೆಗಳಂತಹ ಮೂಲಭೂತ ಆಸೆ ಆಕಾಂಕ್ಷೆಗಳನ್ನು ದಾಟಿ ನವ ಸಮಾಜದ ನಿರ್ಮಾಣಕ್ಕೆ ಪಣತೊಟ್ಟಿದ್ದರು. ಕೇವಲ ೧೨ನೇ ಶತಮಾನಕ್ಕೆ ಇವರ ಪವಾಡಗಳು ಸೀಮಿತಗೊಳ್ಳದೇ ಪ್ರಸ್ತುತ ಸಮಾಜದಲ್ಲಿಯೂ ನಾಯಕರ ಕುರಿತು ಆಚರಣೆ, ಆರಾಧನೆ ಕಾಣಬಹುದು.ಆದ್ದರಿಂದಲೇ ಈ ನಾಯಕರ ಅಸ್ತಿತ್ವ ಎಲ್ಲಾ ಕಾಲಕ್ಕೂ ಒಂದು ಪುರಾಣವಾಗಿಯೇ ಮುಂದುವರಿಯುತ್ತದೆ.

ಸಾಂಸ್ಕೃತಿಕ ನಾಯಕರು ಮತ್ತು ಅವರನ್ನು ಆರಾಧಿಸುವ ಸಮುದಾಯಗಳ ಅಸ್ತಿತ್ವವು ಇನ್ನೂ ಸ್ಥಿರವಾಗಿರಲು ಮುಖ್ಯ ಕಾರಣ ಇವರು ಭಿಕ್ಷಾ ಪ್ರವೃತ್ತಿಯನ್ನು ಹೊಂದಿರುವುದು. ಭಿಕ್ಷಾಟನೆ ಎನ್ನುವುದು ನಾಗರಿಕ ಸಮಾಜದಲ್ಲಿ ಇರುವಂತೆ ಮೂಲಭೂತ ವಸ್ತುಗಳಿಗಾಗಿ ಬೇಡುವ ರೀತಿಯಲ್ಲಿ ಅಲ್ಲ, ಮೌಖಿಕ ನಾಯಕರ ಭಿಕ್ಷಾಟನೆಗೂ, ಶಿಷ್ಟರ ಭಿಕ್ಷಾಟನೆಗೂ ತುಂಬಾ ವ್ಯತ್ಯಾಸಗಳಿವೆ. ಮೌಖಿಕ ನಾಯಕರು ತಮ್ಮ ಜೀವನದ ಸಾರ್ಥಕತೆಗೆ, ಲೋಕಕಲ್ಯಾಣದ ಕಾರ್ಯಕ್ಕಾಗಿ ಭಿಕ್ಷೆ ಬೇಡುತ್ತಾರೆ.ಹೀಗೆ ಭಿಕ್ಷೆ ಬೇಡುತ್ತಾ ಪವಾಡಗಳನ್ನು ಮಾಡುತ್ತಾ ಸಮಾಜವನ್ನು ತಿದ್ದುವ ಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಾರೆ.

ಮಾದೇಶ್ವರ ಅವತಾರ ಪುರುಷನಾಗಿ ಜನಿಸಿದರೂ ನಿರ್ಗತಿಕರಿಗೆ ಸಂಪತ್ತು ನೀಡುವ ಶಕ್ತಿವಂತನಾಗಿದ್ದರು, ತನ್ನ ಒಕ್ಕಲುಗಳಿಗಾಗಿ, ತನ್ನ ಪೂಜೆಗಾಗಿ ಎಳ್ಳು, ಎಣ್ಣೆಯನ್ನು ಭಿಕ್ಷೆ ಬೇಡುತ್ತಾನೆ. ಮಾದೇಶ್ವರ ಭಿಕ್ಷೆ ಬೇಡುವ ರೀತಿ



"ಭವತಿ ಭಿಕ್ಷಾಂದೇಹಿ
ಧರ್ಮಗುರು ಕೋರ್‍ಯಾದ ಭಿಕ್ಷೆ
ನನ್ನ ಗುರುಧರ್ಮ ಕೋರ್‍ಯಾದ ಭಿಕ್ಷೆ"
ಕಂಚಿನ ಕಂಸಾಳೆಯನ್ನು ಶಬ್ದಮಾಡಿ
ಹರಾ ಹರಾ ಹರನ ಭಿಕ್ಷೆ ಗುರುಧರ್ಮ ಕ್ವಾರ್‍ಯಾದ ಭಿಕ್ಷೆ
ಮಲೆಗಳ ಮುನಿಗಳ ಭಿಕ್ಷೆ
ತಂದೆ ಕಲ್ಯಾಣದೇವರ ಭಿಕ್ಷೆ
ತಾಯಿ ಉತ್ರಾಜಮ್ಮನ ಭಿಕ್ಷೆ
ಜ್ಯೋತಿ ಲಿಂಗಯ್ಯನ ಭಿಕ್ಷೆ
ಜೋಳಿಗೆ ಹಿಡಿದಾತ್ಮನ ಭಿಕ್ಷೆ
ನಾಲ್ಕು ಸಾಗರ ಜೋಳಿಗೆ ಭಿಕ್ಷೆ
ನಾಲ್ಕು ಬೆತ್ತದ ಭಿಕ್ಷೆ
ಎಂದು ಜೋರಾಗಿ ಭವತಿ ಭಿಕ್ಷಾಂದೇಹಿ"[೧೧]ಎಂಬುದಾಗಿ ಸಾರುತ್ತಾರೆ

ಮಾದಪ್ಪನಲ್ಲಿಯೂ ಭಿಕ್ಷೆ ಬೇಡುವ ಉದ್ದೇಶ ಮತ್ತು ಮಹತ್ವವನ್ನು ಕಾಣಬಹುದು. ಮಾದಪ್ಪನು ಶಿವನಿಗೆ ಗುಡಿ ಕಟ್ಟಿಸಬೇಕು ತನ್ನ ಒಕ್ಕಲುಗಳನ್ನು ಹೆಚ್ಚಿಸಿಕೊಳ್ಳಬೇಕು, ಸಮಾಜವನ್ನು ತಿದ್ದಬೇಕು ಎಂಬ ಉದ್ದೇಶದಿಂದ ಭಿಕ್ಷಾಟನೆಯನ್ನು ಕೈಗೊಳ್ಳತ್ತಾನೆ. ಕಾವ್ಯದುದ್ದಕ್ಕೂ ಒಂದಲ್ಲ ಬಂದು ರೀತಿಯಲ್ಲಿ ಭಿಕ್ಷೆಯನ್ನು ಮಾಡುತ್ತಾನೆ.

ಮಾದೇಶ್ವರನಂತೆ ಮಂಟೇಸ್ವಾಮಿಯು ಭಿಕ್ಷಾಟನೆಯು ಪರಂಪರೆಯುನ್ನೇ ರೂಢಿಸಿಕೊಂಡವಾರಾಗಿದ್ದಾರೆ. ಮಂಟೇಸ್ವಾಮಿಯ ಭಿಕ್ಷಾಟನೆಯು ಭಿನ್ನವಾಗಿದ್ದಲ್ಲಿ ಭಂಗಿಸೇವಿಸುವ ಭೈರಾಗಿಯಾಗಿ ಭಿಕ್ಷೆ ಬೇಡುವ ಸ್ವರೂಪದಲ್ಲಿ ಕಾಣಿಸಿಕೊಂಡಿದ್ದಾರೆ. ಮಂಟೇಸ್ವಾಮಿಯು ತನ್ನ ಶಿಷ್ಯ ಪರಂಪರೆ ಹೆಚ್ಚಿಸಿಕೊಳ್ಳಲು ವ್ಯಕ್ತಿಗಳನ್ನು ಭಿಕ್ಷೆ ಬೇಡುತ್ತಾನೆ.

"ಭಿಕ್ಷವೋ ಭಿಕ್ಷ ಧರ್ಮವೋ ಧರ್ಮ
ಎಂದವರೇ ನನ್ನ ಗುರುವು
ದಾನವ ನೀಡವ್ವ ಭಿಕ್ಷವ ನೀಡವ್ವ
ಕ್ವಾರಣ್ಯದ ಕಂದಾ ನೀಡವ್ವ ನನ್ನ ತಾಯಿ
ನನಗೆ ಭೀಕ್ಷಾ ಕೋಟ್ಟೋರಿಗೆ
ಲಕ್ಷ್ಯ ಭಾಗ್ಯವಾಗಲಮ್ಮ
ನನಗೆ ದಾನ ಕೊಟ್ಟವರಿಗೆ
ಜ್ವಾಳಿಗೇ ಹೋನ್ನಾಗಲವ್ವ"[೮೨] ಮಂಟೇಸ್ವಾಮಿ ಎಂದು ನಯ ವಿನಯವಾಗಿ ಕೆಂಪಾಚಾರಿಯೆಂಬ ವ್ಯಕ್ತಿಯನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಳ್ಳಲು ಅವನ ತಾಯಿಯ ಬಳಿ ಈ ರೀತಿಯಾಗಿ ಭಿಕ್ಷೆ ಕೇಳುತ್ತಾನೆ. ಜುಂಜಪ್ಪನು ಸಹ ತನಗೆ ಅಗತ್ಯವಾದ ತನ್ನ ಹಸುಗಳಿಗಾಗಿ ಹುಲ್ಲುಗಾವಲು, ಅವರೆಗಳನ್ನು ಪೂಜೆಗಾಗಿ ಬೇಕಾದ ಹಣ್ಣುಗಳನ್ನು ಭಿಕ್ಷೆ ಬೇಡುತ್ತಾನೆ.

ಜುಂಜಪ್ಪನ ಕಾವ್ಯದಲ್ಲಿ ಬರುವ ದೊಡ್ಡಕ್ಕಜ್ಜಿಯ ಸಾಲಿನಲ್ಲಿ ಜುಂಜಪ್ಪ ದೀಪಾವಳಿ ಹಬ್ಬದ ಪೂಜೆಗಾಗಿ ದೊಡ್ಡಕ್ಕಜ್ಜಿಯ ಬಳಿ ಅವರೆ ಕಾಳನ್ನು ಕೇಳುತ್ತಾನೆ.

"ಅಜ್ಜಮ್ಮ
ಹಾವಿನ್ಗುಡಿನಲ್ಲಿ ಆಲಬ್ಬ ಮಾಡಬೇಕು
ದೇವರು ಗುಡಿನಲ್ಲಿ ದೇವರು ಮಾಡಬೇಕು
ದೊಡ್ಡು ದೀಪಾವಳಿ ಹಬ್ಬ ಮಾಡಬೇಕು
ಈ ರಾತ್ರಿ ನಾನು ಮಾಡಿದ್ರೆ ಸೋಮಾವಾರ ದಿನ
ನನ್ನ ಭಕ್ತರು ಜುಂಜಪ್ಪ ಮಾಡಿದ ದೀಪಾವಳಿ ಹಬ್ಬ ಅಂತೇಳಿ

ಪ್ರಪಂಚವೆಲ್ಲಾ ಮಾಡ್ಕಿಂತಾರೆ

ಮೂರಡಿ ಅವುರೆ ಕಾಯಿ ಕೊಡಮ್ಮ ಅಂತ ಜುಂಜಪ್ಪ ಕೇಳಕಂಡ"[೧೩]

ಈ ರೀತಿ ಜುಂಜಪ್ಪನು ಅವರೆಯನ್ನು ಕೇಳುವುದು ಹೊಸ ಸಂಸ್ಕೃತಿಯ ನಿರ್ಮಾಣಕ್ಕಾಗಿ ಭಿಕ್ಷಾ ಪ್ರವೃತ್ತಿಯನ್ನು ಬೆಳೆಸಿಕೊಂಡ್ಡಿದ್ದಾರೆ. ಅದೇ ರೀತಿ ಮೈಲಾರಲಿಂಗನು ಸಹ ಚಿಂದಿಯುಟ್ಟು ಹೆಣ್ಣು ಹಸು ಕುರಿ, ಮಡಿ ಸೇವೆಗಾಗಿ ಅನೇಕ ಸಮುದಾಯಗಳಲ್ಲಿ ಭಿಕ್ಷೆ ಪಡೆಯುತ್ತಾನೆ.

"ಈ ಸಾಂಸ್ಕೃತಿಕ ನಾಯಕರೆಲ್ಲಾ ತಮ್ಮ ಜೀವನೋಪಾಯಕ್ಕಾಗಿ ಭಿಕ್ಷೆ ಬೇಡುವುದಿಲ್ಲ. ಬದಲಿಗೆ ಸಕಲರಿಗೂ ಬೇಕೆನಿಸುವ ಸಮಾಜದ ನಿರ್ಮಾಣಕ್ಕಾಗಿ ಇಂಥಹ ಭಿಕ್ಷೆ ಬೇಡಿದ ವೀರರಿಗೆ ಭಿಕ್ಷೆ ಕೊಡದೆ ನಿರಾಕರಿಸಿದಾಗ ಅವರನ್ನು ಶಿಕ್ಷಿಸಿ ಮತ್ತೆ ಅವರಿಂದ ಅದೇ ವಸ್ತುವನ್ನು ಭಿಕ್ಷೆ ಪಡೆಯುವ ಛಲ ಇವರಿಗಿದೆ."[೧೪] ಇದರಿಂದಾಗಿಯೇ ಈ ನಾಯಕರ ಚರಿತ್ರೆಗಳನ್ನು ಗಾಯಕರು ಹಾಡುವ ಮೂಲಕ, ಆಚರಿಸುವ ಮೂಲಕ ಕೆಲ ಸಮುದಾಯಗಳು ಇಂದಿಗೂ ಅವರನ್ನು ಜೀವಂತವಾಗಿರಿಸಿದ್ದಾರೆ.

ಮೌಖಿಕ ಕಾವ್ಯಗಳ ಸಾಂಸ್ಕೃತಿಕ ನಾಯಕರ ಅಸ್ತಿತ್ವ ಇನ್ನೂ ಜೀವಂತವಾಗಿರಲು ಮತ್ತೊಂದು ವಿಶೇಷತೆಯೆಂದರೆ ಕಾವ್ಯದ ನಾಯಕನಲ್ಲದೆ ಅವರೊಂದಿಗೆ ಇದ್ದ ಶಿಷ್ಯ ಪರಂಪರೆಯನ್ನು ಮುನ್ನಲೆಗೆ ತರುವಂತಹ ಹಾಗೂ ಅವರಿಗೂ ಪೂಜೆ, ಆಚರಣೆಗಳು ಲಭ್ಯವಾಗುವಂತಹ ಅಧಿಕಾರ ಶಿಷ್ಯ ಪರಂಪರೆಗೂ ಸೃಷ್ಟಿಸಿಕೊಟ್ಟಿದ್ದಾರೆ.

ಮಾದೇಶ್ವರನು ಮಾದೇಶ್ವರ ಬೆಟ್ಟದಲ್ಲಿ ನೆಲೆಸಿದ್ದರೂ ತನಗೆ ಸಿಗುವ ಪೂಜೆ ಪುನಸ್ಕಾರಗಳು ತನ್ನ ಶಿಷ್ಯ ಪರಂಪರೆಗೆ ಸೇರಿದ ಜುಂಜೇಗೌಡ, ಸರಗೂರಯ್ಯ, ಸಂಕಮ್ಮನಿಗೂ ಸಲ್ಲುವಂತೆ ಮಾಡಿದ್ದಾರೆ. ಆ ಮೂಲಕ ಕೆಲ ಸಮುದಾಯಗಳು ಕುಂತೂರು, ಸುತ್ತೂರು ಮಠಗಳಲ್ಲಿ ಈ ಶೀಷ್ಯ ಪರಂಪರೆಗೆ ಗುಡಿಗಳನ್ನು ನಿರ್ಮಿಸಿ ಮಾದೇಶ್ವರನ ಪೂಜಾ ಆಚರಣೆಗಳೊಂದಿಗೆ ಇವರಿಗೂ ವಿಶೇಷ ಪೂಜೆ, ಆಚರಣೆ, ಸಂಸ್ಕೃತಿಯನ್ನು ನಡೆಸಿಕೊಂಡು ಹೋಗುತ್ತಾರೆ.

ಜುಂಜಪ್ಪನು ಸಹ ತನ್ನ ಸೋದರರಾದ ಮೈಲಣ್ಣ, ಮಾರಣ್ಣ, ಚಿತ್ತಯ್ಯ, ಕಾಟುಮದೇವರು, ನಾಯಿ ಜೂಲಿ, ಬಡಮೈಲ ಹಸು, ಇವರೆಲ್ಲರನ್ನೂ ತನಗಿಂತ ಮುಂಚಿತವಾಗಿಯೇ ದೇವರನ್ನಾಗಿಸುತ್ತಾನೆ. ಜುಂಜಪ್ಪನ ಜಾತ್ರೆ ಸಮಯದಲ್ಲಿಯೇ ಇವರೆಲ್ಲರಿಗೂ ವಿಶೇಷ ಪೂಜೆಗಳು ನಡೆಯುತ್ತಿರುವುದು ಕಂಡು ಬರುತ್ತದೆ.

ಮಂಟೇಸ್ವಾಮಿಯು ತನ್ನ ಶಿಷ್ಯರಾದ ಸಿದ್ದಾಪ್ಪಾಜಿ, ರಾಚಪ್ಪಾಜಿ, ಚೆನ್ನಾಜಮ್ಮ, ದೊಡ್ಡಮ್ಮತಾಯಿ, ಮೊದಲಾದವರಿಗೆ ವಿಶೇಷ ಪೂಜೆ, ಆಚರಣೆ ನಡೆಯುವಂತೆ ಮಾಡುತ್ತಾನೆ. ವಿಶೇಷವೆಂದರೆ ಮಂಟೇಸ್ವಾಮಿಗೆ ಒಂದು ತಿಂಗಳು ಜಾತ್ರೆ ನಡೆದರೆ ತನ್ನ ಶಿಷ್ಯ ಪರಂಪರೆಗೂ ಒಂದು ತಿಂಗಳುಗಳ ಕಾಲ ಜಾತ್ರೆ ನಡೆಯುತ್ತವೆ. ಅದು ನಿಯಮಿಸಿದ ಕೆಲ ಸಮುದಾಯದವರು ಪೂಜೆ ನಡೆಸಿಕೊಂಡು ಹೋಗುತ್ತಾರೆ.

ಮೈಲಾರಲಿಂಗನ ಕ್ಷೇತ್ರಗಳು ಹಲವು ಕಡೆ ಇದ್ದರು ಅಲ್ಲೆಲ್ಲಾ ತನ್ನ ಪತ್ನಿಯರಾದ ಗಂಗಿಮಾಳಮ್ಮ,

ಕೋಮಾಲಿಯ ಗುಡಿಗಳು ಇವೆ. ಮೈಲಾರನು ಶೋಷಿತರ ವರ್ಗದ ಪರವಾಗಿ ಇಬ್ಬರು ಶ್ರೀಮಂತ ಮನೆಯ ಹೆಣ್ಣು ಮಕ್ಕಳನ್ನು ವಿವಾಹವಾಗುವುದರೊಂದಿಗೆ ಶ್ರಮಿಕರಿಗೆ ತಕ್ಕ ಫಲ ಸಿಗಬೇಕೆಂಬ ಆಶಯ ಇರುವುದನ್ನು ಕಾಣಬಹುದು.

ಮಾಳಿಂಗರಾಯನು ಹುಲಜಂತಿಯಲ್ಲಿರುವ ಸಮಾಧಿಯ ಸುತ್ತಲೂ ತನ್ನ ಪೂರ್ವಜರ, ವಂಶಸ್ಥರ ಸಮಾಧಿಗಳನ್ನು ಕಟ್ಟಿಸಿದ್ದಾರೆ. ಸಿಡಿಯಾಣ ಸಿದ್ದ, ರೋಗಿ ಜಟಿಂಗರಾಯ, ಜಕ್ಕಪ್ಪ, ಬೀರಪ್ಪ, ಮೊದಲಾದವರಿಗೂ ಮಾಳಿಂಗರಾಯನ ಜೊತೆಯಲ್ಲಿಯೇ ಪೂಜೆ ನಡೆಯುತ್ತವೆ.

ಸಾಂಸ್ಕೃತಿಕ ನಾಯಕರು ಸಮಾಜದಲ್ಲಿ ತಮ್ಮ ಅಸ್ತಿತ್ವದ ನಿರ್ಮಾಣಕ್ಕಾಗಿ ಇರುವಿಕೆಯ ಆಶಯಗಳು, ಒಕ್ಕಲಾಗಿಸಿಕೊಳ್ಳುವ ತಂತ್ರಗಳು ಕಾವ್ಯಗಳುದ್ದಕ್ಕೂ ನಡೆಯುತ್ತವೆ. ಅಸ್ತಿತ್ವ ಎನ್ನುವುದು ಆಧುನಿಕರ ದೃಷ್ಟಿಯಲ್ಲಿ ನಾಯಕರು ತಮ್ಮ ಪರಂಪರೆಯನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಕಂಡುಕೊಂಡ ಒಂದು ಲಕ್ಷಣವೆಂದೇ ಹೇಳುತ್ತಾರೆ. ಸಾಂಸ್ಕೃತಿಕ ನಾಯಕರ "ಅಸ್ತಿತ್ವ ಒಂದರ ನಂತರ ಒಂದು ಎಂಬ ಅನುಕ್ರಮದಲ್ಲಿ ಇರದೆ ಒಂದು ಜಾಲದ ತರಹ ಒಂದಕ್ಕೊಂದು ಹೆಣೆದ ಸಂಕೀರ್ಣ ಸಂಬಂಧಗಳನ್ನು ಒಳಗೊಂಡಿರುತ್ತದೆ."[೧೫] ಹಾಗಾಗಿಯೇ ನಾಯಕರ ಪೂಜೆ, ವಿಧ, ವಿಧಾನಗಳಿಗಾಗಿ ಹುಟ್ಟಿಕೊಂಡ ಸಮುದಾಯಗಳು ತಲತಲಾಂತರವರೆಗೆ ಮುಂದುವರೆಯುತ್ತಾ, ನಂಬಿಕೆಗಳು ಬೆಳೆಯುತ್ತಾ, ಒಬ್ಬರಿಂದ ಒಬ್ಬರು, ಒಂದು ಸಮುದಾಯದಿಂದ ಮತ್ತೊಂದು ಸಮುದಾಯಗಳು ಹೀಗೆ ಅವರ ಪವಾಡಗಳನ್ನು ಒಪ್ಪಿಕೊಳ್ಳುವುದರ ಮೂಲಕ, ಅನೇಕ ಜನರು ಇವರನ್ನು ಪರಂಪರಾನುಗತವಾಗಿ ಅನುಸರಿಸಿಕೊಂಡು ಬಂದಿದ್ದಾರೆ. ಹಾಗಾಗಿಯೇ ಮನುಷ್ಯ ಮತ್ತು ಸಮಾಜಕ್ಕೆ ನಾಯಕರ ಮೂಲಕವೇ ಹೊಸ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಆದ್ದರಿಂದ ಅವನ ಅಂತಃಸತ್ವಕ್ಕೆ ಸಿಕ್ಕ ನಾಯಕರ ಕಲ್ಪನೆಯನ್ನು ತನ್ನ ಆಲೋಚನೆ ಮತ್ತು ಭಾವನೆಗಳಿಗೆ ತಕ್ಕಂತೆ ಬೆಳೆಸಿಕೊಂಡು ಹೋಗುತ್ತಾನೆ. "ಮನುಷ್ಯನು ಕೇವಲ ವಸ್ತುವು ಅಲ್ಲಾ, ವಿಚಾರವೂ ಅಲ್ಲಾ, ಆಗುವಿಕೆ ಎಂಬ ಕ್ರಿಯೆಯಲ್ಲಿ ಬೆಳೆಯುತ್ತಾ, ಬದಲಾಗುತ್ತಾ ಹೋಗುತ್ತಾನೆ. ನಿಜವಾದ ಮನುಷ್ಯನೆಂದರೆ ವರ್ತಮಾನದವನಲ್ಲ ಭವಿಷ್ಯದವನು".[೧೬] ಎಂಬುದನ್ನು ನಾಯಕರು ಪ್ರತಿಯೊಬ್ಬ ಮನುಷ್ಯನಿಗೆ ತಮ್ಮ ಪವಾಡಗಳ ಮೂಲಕ ತಿಳಿಸಹೊರಟಿದ್ದಾರೆ.

ಮೌಖಿಕ ಕಾವ್ಯಗಳಲ್ಲಿನ ನಾಯಕರು ತಮ್ಮ ಸಜ್ಜನಿಕೆ, ಅಹಂಕಾರವಿಲ್ಲದೆ ಯಾವುದೇ ಸಮುದಾಯಕ್ಕೆ ಸೇರಿದ ಪ್ರತಿಯೊಬ್ಬ ವ್ಯಕ್ತಿಯ ಕಷ್ಟಕ್ಕೆ ನೆರವಾಗುವ ಭಾವನೆ, ದುಷ್ಟಶಿಕ್ಷೆ, ಶಿಷ್ಟ ರಕ್ಷೆ ಎಂಬ ವ್ಯಕ್ತಿತ್ವ ಹೊಂದಿದವಾಗಿರುವುದರಿಂದ ಸಾಮಾನ್ಯವಾಗಿಯೇ ಕೆಳವರ್ಗದ ಶೋಷಿತರು ಈ ನಾಯಕರ ಅಸ್ತಿತ್ವ ಬಲಗೊಳಿಸಿದರು. ನಾಯಕರ ಮೂಲಕ ಸಮುದಾಯ, ಸಮುದಾಯದ ಮೂಲಕ ಸಮಾಜ, ಸಮಾಜದ ಮೂಲಕ ಮನುಷ್ಯ ಹೀಗೆ ಒಬ್ಬರಿಗೊಬ್ಬರು ತಮ್ಮದೇ ಅಸ್ತಿತ್ವ ನಿರ್ಮಿಸಿಕೊಂಡರು.

### ೩.೨ ಕುಟುಂಬ ಪರಿಕಲ್ಪನೆ ಮತ್ತು ಲಿಂಗಸಂಬಂಧಿ ಅಸ್ತಿತ್ವ

ಭಾರತೀಯ ಸಂಸ್ಕೃತಿಯ ಪ್ರತೀಕವಾದ ಸಮುದಾಯಗಳು ತಮ್ಮದೇ ಆದ ಜೀವನ ವಿಧಿ-ವಿಧಾನ, ಆಚರಣೆ-ಪದ್ಧತಿ, ಸಂಪ್ರದಾಯಗಳನ್ನು ಅಳವಡಿಸಿಕೊಂಡಿರುತ್ತಾರೆ. ಹಿಂದೆ ಅಲೆಮಾರಿಗಳು

ಜೀವನವನ್ನು ಸಾಗಿಸುತ್ತಿದ್ದಾಗ, ಕಾಡು–ಮೇಡು ಸುತ್ತಿ ಬೇಟೆಯಾಡುತ್ತ ಗೆಡ್ಡೆ–ಗೆಣಸು, ಹಣ್ಣುಗಳನ್ನು ತಿನ್ನುತ್ತ ಜೀವನ ಸಾಗಿಸುತ್ತಿದ್ದರು. ಈ ಸಂದರ್ಭದಲ್ಲಿ ಹುಟ್ಟಿಕೊಂಡಿದ್ದೇ ಹೆಣ್ಣು–ಗಂಡಿನ ಸಹಜೀವನ. ಈ ಸಂಬಂಧಗಳ ಪರಿಕಲ್ಪನೆ ಮುಂದೆ ಕುಟುಂಬವಾಗಿ ರೂಪ ಪಡೆಯಿತು. ಕಾಲಾನಂತರ ಕುಟುಂಬಗಳ ಪಾಲನೆ–ಪೋಷಣೆ–ರಕ್ಷಣೆಗಾಗಿ ಸಾಂಸ್ಕೃತಿಕ ವಿಕಾಸವೊಂದು ಪ್ರಾರಂಭವಾಯಿತು. ಇವುಗಳ ಜೊತೆ–ಜೊತೆಗೆ ಪ್ರತಿ ಕುಟುಂಬಗಳ ಸದಸ್ಯರ ಬೆಳವಣಿಗೆಗೆ ಪಶುಪಾಲನೆ, ಕೃಷಿ ಮೊದಲಾದ ವೃತ್ತಿಗಳು ಆರಂಭವಾದವು. ಇಂದು ಮಾನವನು ಸ್ಥಿರವಾಗಿ ಒಂದೆಡೆ ನೆಲೆನಿಂತು ತನ್ನದೇ ಕುಟುಂಬವನ್ನು ನಿರ್ಮಿಸಿಕೊಳ್ಳಲು ಕಾರಣವಾಯಿತು. ಸ್ತ್ರೀ–ಪುರುಷ, ವಿವಾಹ–ಮಕ್ಕಳು ಎಂಬ ಸಂಬಂಧಗಳು ನಿರ್ಮಾಣವಾದಾಗ ತಮ್ಮ ಸುಖ–ದುಃಖಗಳನ್ನು ಪರಸ್ಪರ ಹಂಚಿಕೊಳ್ಳಲು ಪ್ರಾರಂಭಿಸಿದರು. ಇದು ಮಾನವನ ಜೀವನದಲ್ಲಿ ಕುಟುಂಬದ ಪರಿಕಲ್ಪನೆ ಬೇರೂರಲು ಕಾರಣವಾಯಿತು.

"ಈ ಕುಟುಂಬ ವ್ಯವಸ್ಥೆಯು ಮಾನವನ ಇತಿಹಾಸದಲ್ಲಿ ಮಾನವ ಸಮಾಜದ ಉನ್ನತಿಯಲ್ಲಿ ಬಹುದೊಡ್ಡ ಸಾಧನೆ. ಅತೀ ಪ್ರಾಚೀನ ಕಾಲದಿಂದಲೂ ಯಶಸ್ವಿಯಾಗಿ ಸಾಗಿಬಂದಿರುವ ಸಾರ್ವತ್ರಿಕ ಸರ್ವಕಾಲೀನ ಸಂಸ್ಥೆ ಕುಟುಂಬವಾಗಿದೆ. ಕೋಟಿ–ಕೋಟಿ ಜನಸಮುದಾಯವು ಕುಟುಂಬವೆಂಬ ಪುಟ್ಟ–ಪುಟ್ಟ ಘಟಕಗಳಲ್ಲಿ ವ್ಯವಸ್ತಿತವಾಗಿ ಹಂಚಿಹೋಗಿ ಇಡಿ ಸಮಾಜವು ಸುಸೂತ್ರವಾಗಿ ನಿರ್ವಹಿಸಲು ಇದು ಸಹಕಾರಿಯಾಗಿದೆ."[೧೭] ಕುಟುಂಬ ವ್ಯವಸ್ಥೆಯು ಒಂದು ಸಾಮಾಜಿಕ ಸಂಸ್ಥೆಯಾಗಿ ನಿರ್ಮಾಣವಾಗಿ ಸಮಾಜ ರಚನೆಯ ಸಂದರ್ಭದಲ್ಲಿ ಒಂದು ಮಹತ್ವದ ಸ್ಥಾನ ಪಡೆಯಿತು. ಕುಟುಂಬವೇ ಒಂದು ಚಿಕ್ಕ ಸಮಾಜವಾಗಿದೆ. ತಂದೆ–ತಾಯಿ, ಅಜ್ಜಿ–ತಾತ, ಬಂಧು–ಸ್ನೇಹಿತರು ಹೀಗೆ ಒಟ್ಟಾಗಿ ಸಾಂಘಿಕ ಜೀವನ ನಡೆಸುವವರಾಗಿದ್ದಾರೆ.

**ಪಿತೃ ಪ್ರಧಾನ ಕುಟುಂಬ ವ್ಯವಸ್ಥೆ**

ಪಿತೃಪ್ರಧಾನ ಕುಟುಂಬಗಳು ದುಡಿಯುವ ಸಂಸ್ಕೃತಿಯನ್ನು ಅಳವಡಿಸಿಕೊಂಡಾಗ ಮೆದುಳಿಗಿಂತ ಶ್ರಮ ಪ್ರಧಾನ ಕೆಲಸಕ್ಕೆ ಹೆಚ್ಚಿನ ಒತ್ತನ್ನು ನೀಡಿದ್ದಾರೆ. ಇಲ್ಲಿ ಮುಖ್ಯವಾಗಿ ಹೆಣ್ಣುಮಕ್ಕಳು, ಪುರುಷರು, ಗುಲಾಮರು ಎಲ್ಲರೂ ಪಿತೃಪ್ರಧಾನ ಅಡಿಯಲ್ಲಿಯೇ ಬದುಕುತ್ತಾರೆ. ರಾಜ್ಯ, ಧರ್ಮ, ಜಾತಿ,ಜನಾಂಗಗಳಲ್ಲಿ ಇರುವ ಪಿತೃ ಪ್ರಧಾನತೆಯು ಕುಟುಂಬಗಳಲ್ಲಿಯೂ ಇದ್ದು, ಮಹಿಳೆಯರ ಪರಾಧೀನತೆಗೆ ಕಾರಣವಾಗಿದೆ. ಮಹಿಳೆಯರ ಮೇಲಿನ ತಾರತಮ್ಯ, ನಿರ್ಲಕ್ಷ್ಯ, ಅಪಮಾನ ನಿರಂತರ ಶೋಷಣೆ, ದೌರ್ಜನ್ಯ, ಹಿಂಸೆ ಇವೆಲ್ಲವೂ ಪಿತೃಪ್ರಧಾನತೆಯ ಪ್ರತಿಬಿಂಬಗಳು. ಗಂಡು ಸಂತಾನದ ಬಯಕೆ, ಆಹಾರ, ಮನೆಕೆಲಸದ ಹೊರೆ, ಹೆಣ್ಣುಮಕ್ಕಳಿಗೆ ಶಿಕ್ಷಣದಿಂದ ವಂಚನೆ, ಮಹಿಳೆಯರ ಚಲನ–ವಲನದ ಮೇಲೆ ಸಂಪೂರ್ಣ ನಿಯಂತ್ರಣ ಹೇರುವುದು, ಮಹಿಳೆಯರಿಗೆ ಆಸ್ತಿ ಹಕ್ಕು ನಿಷೇಧ, ಉತ್ತರಾಧಿಕಾರ ಇಲ್ಲದಿರುವುದು, ಸಂತಾನೋತ್ಪತಿಯ ಹಕ್ಕುಗಳ ಮೇಲೆ ನಿಯಂತ್ರಣ ಇವೆಲ್ಲವೂ ಪಿತೃಪ್ರಧಾನ ಕುಟುಂಬದ ಮಾದರಿಗಳಾಗಿವೆ. ಪಿತೃಪ್ರಧಾನ ಕುಟುಂಬಗಳು ಪತ್ರಮೂಲಕವೇ ವಂಶಾವಳಿಗಳಲ್ಲಿ ಸೂಚಿಸುತ್ತಿದ್ದ ಪಿತೃ ಮೂಲ ವಾಸಸ್ಥಳವಾಗಿದೆ. ಕುಟುಂಬಗಳಲ್ಲಿ ಪಿತೃ ಅಧಿಕಾರಕ್ಕೆ ಮಾತ್ರ ಸ್ಥಾನವಿದ್ದು. ಮಹಿಳೆಯರು

ಸಂಪೂರ್ಣವಾಗಿ ಗೌಣವಾಗಿರುತ್ತಾಳೆ. ಪ್ರತಿಯೊಂದಕ್ಕೂ ಪುರುಷನ ಆಜ್ಞೆಯನ್ನು ಕಾಯುವುದು, ಅವನ ನಿಯಮಗಳನ್ನು ಪಾಲಿಸುವುದು ಮಹಿಳೆಯರ ಕರ್ತವ್ಯವಾಗಿದೆ. ಮತ್ತು ತಂದೆಯ ನಂತರ ಮಗನೇ ಕುಟುಂಬದ ಉತ್ತರಾಧಿಕಾರಿಯಾಗುತ್ತಾನೆ. ತಂದೆಯ ಸಮಸ್ತ ಆಸ್ತಿಗೆ ಗಂಡು ಮಕ್ಕಳೆ ವಾರಸುದಾರರಾಗುತ್ತಾರೆ. ಮಹಿಳೆಯು ಪುರುಷರ ಹಿತಾಸಕ್ತಿಗೆ ಅನುಗುಣವಾಗಿ ಜೀವಿಸಬೇಕಾಗುತ್ತದೆ.

**ಮಾತೃಪ್ರಧಾನ ಕುಟುಂಬ**

ಮಾತೃಪ್ರಧಾನ ಕುಟುಂಬಗಳಲ್ಲಿ "ಸ್ತ್ರೀ ಮೂಲಕವೇ ವಂಶವನ್ನು ಗುರುತಿಸುವುದು ಮಾತೃ ಮೂಲಕವಾದರೆ, ಮಾತೃ ಪ್ರಧಾನ ಕುಟುಂಬದಲ್ಲಿ ಸ್ತ್ರೀ ಮೂಲಕ ವಂಶವನ್ನು ಗುರುತಿಸುವುದಲ್ಲದೇ, ಕುಟುಂಬದ ಸಮಸ್ತ ಜವಾಬ್ದಾರಿಯನ್ನು ಹೊರುವುದು ಅವಳ ಕರ್ತವ್ಯವಾಗಿರುತ್ತದೆ."[೧೮] ಸ್ತ್ರೀ ಕೇವಲ ಮಗು, ಮನೆಯವರ ಲಾಲನೆ-ಪಾಲನೆ-ಪೋಷಣೆ ಮಾಡುವುದಷ್ಟೇ ಅಲ್ಲದೆ ಅನೇಕ ಕೃಷಿ ಚಟುವಟಿಕೆಗಳಲ್ಲಿ ಭಾಗವಹಿಸತೊಡಗಿದರು. ಗುಡಿ ಕೈಗಾರಿಕೆಗಳು, ಆರೋಗ್ಯದ ರಕ್ಷಣೆ, ಸಂಸಾರದ ನಿರ್ವಹಣೆಗೆ ಎಲ್ಲದರಲ್ಲಿಯೂ ಮಹಿಳೆಯೇ ತೊಡಗಿದಳು. ಇದರಿಂದಾಗಿ ಸಮಾಜದಲ್ಲಿ ಅವಳ ಸ್ಥಾನಮಾನ ಭದ್ರವಾಗುತ್ತ ಹೋದವು. ಅಲ್ಲದೇ ಮಹಿಳೆಯರನ್ನು ಗೌರವ ಹಾಗೂ ಪೂಜ್ಯ ಭಾವನೆಯಿಂದ ಕಾಣಲಾಯಿತು. ಭೂ ಒಡೆತನವೂ ಅವಳ ಆರ್ಥಿಕ ಸಬಲತೆಗೆ ಕಾರಣವಾಯಿತು. ಮಾತೃ ಪ್ರಧಾನ ಕುಟುಂಬದಲ್ಲಿ ಆಸ್ತಿಯ ಹಕ್ಕು, ವಂಶಾವಳಿ ಅಧಿಕಾರ ಮುಂತಾದ ವಿಚಾರಗಳಲ್ಲಿ ಮಹಿಳೆಯರು ಪ್ರಾಧಾನ್ಯತೆ ಪಡೆದಿರುತ್ತಾರೆ. ಆದಿವಾಸಿ ಬುಡಕಟ್ಟು ಸಮುದಾಯದ ಕುಟುಂಬಗಳಲ್ಲಿ ಮಹಿಳೆ ತನಗೆ ಇಷ್ಟವಾದ ಗಂಡನನ್ನು ಪಡೆಯುವ ಅಧಿಕಾರ ಹೊಂದಿರುತ್ತಾಳೆ ಹಾಗೂ ಸಾಮಾಜಿಕ-ಆರ್ಥಿಕ-ರಾಜಕೀಯ-ಧಾರ್ಮಿಕ ಸಂಗತಿಗಳಲ್ಲಿ ತನ್ನ ಹಿಡಿತವನ್ನು ಹೊಂದಿರುತ್ತಾಳೆ. ಈ ಅಧ್ಯಯನಕ್ಕೆ ಆಯ್ದುಕೊಂಡ ಮಲೆಮಾದೇಶ್ವರ, ಮಂಟೇಸ್ವಾಮಿ, ಮೈಲಾರ ಜುಂಜಪ್ಪ, ಮಾಳಿಂಗರಾಯ ಮೌಖಿಕ ಕಾವ್ಯಗಳಲ್ಲಿ ಸಾಮಾನ್ಯ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯನ್ನು ಪಾಲಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಮೌಖಿಕ ಕಾವ್ಯಗಳು ಸುಮಾರು ಮೂರು ಪೀಳಿಗೆಗೆ ಸೇರಿದ ಒಂದೇ ಸೂರಿನಡಿ ಜೀವಿಸುತ್ತ ಸಹಪಂಕ್ತಿ ಭೋಜನ ಮಾಡುವ ವ್ಯಕ್ತಿಗಳ ಕುಟುಂಬಗಳು ಇರುತ್ತವೆ. ಇಲ್ಲಿ ಒಂದೇ ಅಯವ್ಯಯ ಪಟ್ಟಿ, ಒಂದೇ ವಾಸದ ಮನೆ, ಪುರುಷನೇ ಮನೆಯ ಯಜಮಾನನಾಗಿರುತ್ತಾನೆ. ಒಂದೇ ಹೆಸರು, ಕುಲ, ಪೂರ್ವಜರ ಪೂಜೆ, ಒಂದೇ ದೇವರು, ಒಂದೇ ರೀತಿಯ ಧಾರ್ಮಿಕ ಆಚರಣೆಗಳು, ಮಡಿ, ಮೈಲಿಗೆ, ಹುಟ್ಟು-ಸಾವಿಗೆ ಸಂಬಂಧಿಸಿದ ಆಚರಣೆಗಳು ಇರುತ್ತವೆ.

ಮೌಖಿಕ ಕಾವ್ಯಗಳಲ್ಲಿ ಹೆಣ್ಣಿಗೆ ವಿಶಿಷ್ಟ ಸ್ಥಾನವನ್ನು ನೀಡಿದ್ದಾರೆ. ಕುಟುಂಬದ ಉಗಮ ಪ್ರಕೃತಿಯ ಸ್ವರೂಪ ಎಂದು ಪುರುಷ ಸ್ತ್ರೀಯನ್ನು ಪೂಜಿಸುತ್ತ ಕುಟುಂಬದಲ್ಲಿ ಉನ್ನತಸ್ಥಾನವನ್ನು ಕೊಟ್ಟಿದ್ದಾರೆ. ಅದೇ ರೀತಿ ಕುಲ-ಪಂಥಗಳನ್ನು ನಿರ್ಮಿಸಿಕೊಂಡು ಮಾನವನ ಸಂಬಂಧಗಳು ಜೈವಿಕ ಸರಪಳಿಯಿಂದ ಕೂಡುತ್ತ ಹೋಗಿವೆ. ಕೆಲ ಕಾವ್ಯಗಳಲ್ಲಿ ಪುರುಷ ಪ್ರಧಾನ ಕುಟುಂಬಗಳು ಸ್ತ್ರೀಯ ಶೋಷಣೆಯ ಮೂಲವೆಂದು ಹೇಳಲಾಗಿದೆ. ಕುಟುಂಬಗಳು ಪುರುಷ ಪ್ರಧಾನ ವ್ಯವಸ್ಥೆ ಅಡಿಯಲ್ಲಿ ವಿವಾಹವೆಂಬ

ಬಂಧನಕ್ಕೆ ಮಹಿಳೆಯರನ್ನು ಒಳಪಡಿಸಿ, ಪುರುಷನ ಅಧಿಕಾರದಲ್ಲಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಕುಟುಂಬಗಳಲ್ಲಿ ವಿವಾಹದಿಂದ ಪುರುಷನ ಜೀವನಕ್ಕೆ ಪ್ರವೇಶಿಸಿದ ಹೆಣ್ಣಿಗೆ ಹೆಚ್ಚು ಜವಾಬ್ದಾರಿಗಳಿರುತ್ತವೆ. ಇದರಿಂದಾಗಿ ಹೆಣ್ಣಿನ ವ್ಯಕ್ತಿತ್ವ ಕಾಳಜಿಗೆ ಮಹತ್ವ ಕೊಡುವುದಿಲ್ಲ. ಕಾವ್ಯದಲ್ಲಿ ಹೆಣ್ಣಿಗೆ ಆಗುವ ಅಪಮಾನ, ನಿಂದನೆಗಳು, ಸತ್ವಪರೀಕ್ಷೆಗಳು ಸಹಜವೆಂಬಂತೆ ಕಂಡು ಬರುತ್ತವೆ. ಕಾವ್ಯಗಳಲ್ಲಿ ಮುಖ್ಯವಾಗಿ ಕಂಡುಬರುವ ಅಂಶವೆಂದರೆ ಮಹಿಳೆಯರು ತಮ್ಮ ಕುಟುಂಬದಲ್ಲಿ ತಮ್ಮ ಕುಟುಂಬ ಮತ್ತು ಸಮಾಜದಲ್ಲಿ ಭಿನ್ನವಾಗಿ ಗುರುತಿಸಿಕೊಳ್ಳುತ್ತಾಳೆ. ಆದರೂ ಕುಟುಂಬದಲ್ಲಿ ಸಾಮಾಜಿಕ ಕಟ್ಟಳೆಗೆ ಬದ್ಧಳಾಗಿರುತ್ತಾಳೆ. ಆದ್ದರಿಂದ ಕುಟುಂಬದಲ್ಲಿ ಲಿಂಗಾಧರಿತ ಅಸಮಾನತೆ ಕಂಡುಬರುತ್ತದೆ. ತಾನು ಹುಟ್ಟಿದ ಮನೆಯ ಅಸ್ತಿತ್ವ ಉಳಿಸಲು ಗಂಡನ ಮನೆಯಲ್ಲಿ ಎದುರಾದ ಕಷ್ಟಗಳನ್ನು ಸಹಿಸಿಕೊಂಡು ಮೌನ ವಹಿಸಬೇಕಾದ ಸ್ಥಿತಿ ಹೆಣ್ಣಿನದ್ದಾಗಿದೆ. ಇಂಥ ಕುಟುಂಬಗಳೆಲ್ಲ ಪುರುಷ ಶ್ರೇಷ್ಠತೆಯನ್ನು ಕಾಯ್ದುಕೊಳ್ಳುತ್ತವೆ. ಗಂಡನ ಮನೆಯ ಕಟ್ಟಳೆಗಳನ್ನು ಒಪ್ಪಿಕೊಂಡು ನೊಗಕ್ಕೆ ಹೂಡಿದ ಪಶುವಿನಂತೆ ದುಡಿಯುವ ಸೊಸೆಯಂದಿರ ಚಿತ್ರಣವನ್ನು ಮೌಖಿಕರ ಬದುಕಿನಲ್ಲಿ ಕಾಣುತ್ತೇವೆ. ಈ ಎರಡೂ ವೈರುದ್ಯಗಳ ಕುಟುಂಬದಲ್ಲಿ ಸ್ತ್ರೀ ಪುರುಷರ ಲಿಂಗಸಂಬಂಧಿ ಅಸ್ತಿತ್ವವನ್ನು ಕಾವ್ಯಗಳುದ್ದಕ್ಕೂ ಕಾಣಬಹುದು. ಮಾತೃಪ್ರದಾನ ಕುಟುಂಬಗಳಲ್ಲಿ ಸ್ತ್ರೀ ಪ್ರಧಾನವಾಗಿದ್ದ ಅಧಿಕಾರವೆಲ್ಲವೂ ಅವಳಲ್ಲಿ ಅಧೀನವಾಗಿರುತ್ತದೆ. ಆದ್ದರಿಂದ ಕುಟುಂಬದ ಆಚರಣೆ, ತೀರ್ಮಾನ, ಸಂಪಾದನೆ ಅವಳಿಗೆ ಸಂಬಂಧಿಸಿದ್ದಾಗಿರುತ್ತದೆ. ಸ್ತ್ರೀಯು ಕುಟುಂಬದ ಪ್ರಧಾನಳಾಗಿ ಕೃಷಿ ಮತ್ತು ದೊಡ್ಡ ಉದ್ಧಿಮೆಗಳಲ್ಲಿ ಪ್ರಾಬಲ್ಯತೆ ಹೊಂದಿರುತ್ತಾಳೆ. ಆರಂಭದಲ್ಲಿ ಹೆಣ್ಣುಮಕ್ಕಳು ಕೃಷಿಯನ್ನು ಪ್ರಾರಂಭಿಸಿದ ನಂತರ ಮಾತೃಪ್ರಧಾನ ಕುಟುಂಬಗಳು ಆರಂಭವಾದವು. ಕಾಲಕ್ರಮೇಣ ಮಾತೃಪ್ರಧಾನ ಕುಟುಂಬಗಳು ಬದಲಾವಣೆ ಹೊಂದತೊಡಗಿದವು. ನಂತರ ಪಿತೃಪ್ರಧಾನ ಕುಟುಂಬಗಳಲ್ಲಿ ಪುರುಷ ಪ್ರಧಾನ ಜಗತ್ತಿನಲ್ಲಿ ಸಮಾಜದ ಮೂಲ ಕಲಹಗಳು, ಘರ್ಷಣೆಗಳು ಕುಟುಂಬದಿಂದಲೇ ಆರಂಭವಾದವು. ಮಹಿಳೆಯರ ನಿಷ್ಠ, ಪಾತಿವ್ರತ್ಯ, ಧರ್ಮಪಾಲನೆ ಮೊದಲಾದ ಅಂಶಗಳಲ್ಲಿ ಪುರುಷ ಪ್ರಧಾನ ವ್ಯವಸ್ಥೆ ತನ್ನ ಹಿಡಿತವನ್ನು ಸಾಧಿಸಿತು.

ಮೌಖಿಕ ಕಾವ್ಯಗಳಲ್ಲೂ ಸಹ ಪುರುಷ ಪ್ರಧಾನ ವ್ಯವಸ್ಥೆಯನ್ನೇ ಕಾಣಬಹುದು. ಮಲೇಮಾದೇಶ್ವರ ಕಾವ್ಯದಲ್ಲಿ ಅನೇಕ ಕುಟುಂಬಗಳಿದ್ದು. ಕೆಲ ಕುಟುಂಬಗಳು ಪುರುಷ ಪ್ರಧಾನತೆ ಮತ್ತು ಕೆಲ ಕುಟುಂಬಗಳು ಮಾತೃಪ್ರಧಾನತೆಯನ್ನು ಹೊಂದಿವೆ. ಎಲ್ಲಾ ಕುಟುಂಬಗಳಲ್ಲಿ ಬರುವ ಸದಸ್ಯರನ್ನು ಮಲೆಮಾದೇಶ್ವರ ಪರೀಕ್ಷಿಸಿ ತನ್ನ ಒಕ್ಕಲುಗಳನ್ನಾಗಿ ಮಾಡಿಕೊಳ್ಳುತ್ತಾನೆ. ಕೆಲವು ಕೌಟುಂಬಿಕವಾಗಿ ಮಾದಪ್ಪನಿಗೆ ಶರಣಾದರೆ ಮತ್ತೆ ಕೆಲವು ತಮ್ಮ ಸರ್ವಭೌಮತೆಯನ್ನು ಬಿಡಲೊಪ್ಪದೆ ಒಕ್ಕಲುಗಳಾಗುವುದಿಲ್ಲ. ಈ ಕಾವ್ಯದಲ್ಲಿ ಬರುವ ಪ್ರತಿಯೊಂದು ಕುಟುಂಬಗಳು ಸರ್ವಸಮಾನತೆ, ಸಾಂಸ್ಕೃತಿಕತೆ ಮತ್ತು ಒಂದು ಜನಾಂಗದ ಪಂಥ, ಆಚರಣೆಗಳು, ಸಂಪ್ರದಾಯಗಳನ್ನು ಬಿಂಬಿಸುತ್ತದೆ. ಯಾವುದೇ ಕುಟುಂಬಗಳು ಮಾದಪ್ಪನ ಒಕ್ಕಲಾಗುವ ಮುಂಚೆ ತಮ್ಮದೇ ಆದ ಪಾರಂಪರಿಕವಾಗಿ ಪಊಜಿಸುತ್ತ ಬಂದ ತಲಾಂತರ ದೈವವನ್ನು ಪೂಜಿಸುತ್ತಾರೆ. ಆನಂತರ ಮಾದಪ್ಪನ ಮಹಿಮೆಗಳನ್ನು ಅರಿತ ಮೇಲೆ ಮಾದಪ್ಪನ ಒಕ್ಕಲಾಗುತ್ತಾರೆ. ಈ ಒಕ್ಕಲುತನ ಮುಂದಿನ ತಲೆಮಾರುಗಳವರೆಗೂ ಸಾಗುತ್ತ ಬಂದಿರುವುದನ್ನು ಕಾಣುತ್ತೇವೆ ಹಾಗೂ

ಎಣ್ಣೆ ಮಜ್ಜನ, ಎಳ್ಳೆಣ್ಣೆ ಪೂಜೆ, ಗಂಧ, ಕುಂಕುಮಾರ್ಚನೆಗೆ ಒಂದೊಂದು ಸಮುದಾಯ ಅಥವಾ ಜನಾಂಗಗಳನ್ನು ಮಾದಪ್ಪ ತಮ್ಮ ಮಹಿಮೆಯಿಂದಲೇ ನೇಮಿಸಿಕೊಂಡಿರುವುದನ್ನು ಕಾಣುತ್ತೇವೆ. ಮಾದೇಶ್ವರನ ಕಾವ್ಯದಲ್ಲಿ ಬರುವ ಮೊದಲ ಕುಟುಂಬವೆಂದರೆ ಸಂಕರ ಪ್ರೀಯ ಪತಿಶೀಲೆಯ ಮಗ ಶಿವದಾಸ ಇವರ ಹೆಂಡತಿ ಉತ್ರಾಜಮ್ಮ. ಇವರೇ ಮಾದೇಶ್ವರನ ತಂದೆ-ತಾಯಿ. ದೇವತೆಗಳ ಅಪೇಕ್ಷೆಯಂತೆ ಒಂಬತ್ತನೇ ಅವತಾರವಾಗಿ ಮಾದೇಶ್ವರನು ಶಿವದಾಸ ಮತ್ತು ಉತ್ತರಾಜಮ್ಮನ ಮಗನಾಗಿ ಜನಿಸುತ್ತಾನೆ. ಇವರು ಮಹಾ ಶಿವಭಕ್ತರಾಗಿದು, ಇಲ್ಲಿ ಯಾವುದೇ ಪ್ರೇರಣೆ-ಪ್ರಭಾವವು ಸ್ತ್ರೀ ಪ್ರಾಧಾನ್ಯತೆಯನ್ನು ಹೊಂದಿಲ್ಲ. ಇಬ್ಬರೂ ಸಮಾನತೆಯಿಂದ ಸಾಧ್ವಿತನದಿಂದ ಶಿವನ ಪೂಜೆಯಲ್ಲಿ ತೊಡಗಿರುತ್ತಾರೆ. "ಮಾದಪ್ಪ ಉತ್ರಾಜಮ್ಮ-ಶಿವದಾಸರ ಮಗನಾಗಿ ಜನಸಿದರೂ ಸಹ ನಮಗೆ ಹಸಿವಿನಿಂದ ಬಳಲುವ ಅನಾಥನಾಗಿ ಅಸ್ತಿತ್ವಕ್ಕಾಗಿ ಪರದಾಡುವ ಬಡ ಶರಣನಾಗಿ ಕಾಣಿಸುತ್ತಾನೆ"[೧೯].

ಎರಡನೇ ಕುಟುಂಬ ಆಲಂಬಾಡಿಯ ಡೊಳ್ಳೊಟ್ಟೆ ಜುಂಜಪ್ಪ ಅವನ ಹೆಂಡತಿ ಮಲ್ಲಜಮ್ಮ. ಇವರು ಹಾಲುಮತದ ಕುಟುಂಬದವರಾಗಿದ್ದು. ಸಂಪತ್ತುದಾರರಾಗಿದ್ದರು. ಮಾದೇಶ್ವರ ಜುಂಜೇಗೌಡನಿಂದ ಗುಡಿ ಕಟ್ಟಿಸಿಕೊಳ್ಳಲು ಕೇಳಿಕೊಳ್ಳುತ್ತಾನೆ. ಜುಂಜೇಗೌಡ ಮತ್ತು ಮಲ್ಲಿಜಮ್ಮ ಇಬ್ಬರೂ ಇದಕ್ಕೆ ಸಮ್ಮತಿಸದೇ ಇದ್ದಾಗ ಮಾದಪ್ಪ ಅವರಿಗೆ ಕಷ್ಟಗಳನ್ನೇ ಕೊಟ್ಟು ಪರೀಕ್ಷೆಗಳನ್ನು ನೀಡಿ ತಾನೇ ಪರಿಹರಿಸಿ ಅವರನ್ನೇ ಒಕ್ಕಲನ್ನಾಗಿ ಮಾಡಿಕೊಳ್ಳುತ್ತಾನೆ. ಜುಂಜೇಗೌಡನಿಂದ ಒಂದು ಶರಣ ಕಲ್ಲಿನ ದೇವಾಲಯವನ್ನು ಕಟ್ಟಿಸಿಕೊಳ್ಳುತ್ತಾನೆ. ಬೇವಿನಟ್ಟಿ ಕಾಳಮ್ಮನ ಕುಟುಂಬ ಅವಿಭಕ್ತ ಕುಟುಂಬವಾಗಿದ್ದು. ಮಾತೃ ಪ್ರದಾನ ಕುಟುಂಬವಾಗಿದೆ, ಎಲ್ಲಾ ಅಧಿಕಾರವೂ ಕಾಳಮ್ಮನಲ್ಲಿದ್ದು, ಮನೆಯ ಸದಸ್ಯರು ಕಾಳಮ್ಮನ ಮಾತು ಕೇಳಬೇಕು. ಕಾಳಮ್ಮನ ಕುಟುಂಬವೆಂದರೆ

"ಏಳು ಜನ ಗಂಡು ಮಕ್ಕಳು

ಏಳು ಜನ ಜೀತಗಾರ್ರು

ಏಳು ಜನ ಸೊಸೆರು"[೨೦]

ಅಲ್ಲದೇ ಏಳು ಜನ ಜೀತದಾರರು ಮೇಸ್ತ್ರೀ ಸಂಬಳಗಾರ ಮಲ್ಲಣ್ಣ ಇವಳ ಕೈಕೆಳಗೆ ಕೆಲಸ ಮಾಡುತ್ತಾರೆ. ಮಾದಪ್ಪನ ದಯೇಯಿಂದಲೇ ದೊಡ್ಡ ಶ್ರೀಮಂತಳಾಗುತ್ತಾಳೆ. ಅವಳಲ್ಲಿ ಅಹಂಕಾರ, ದರ್ಪ, ನಾನು ಎಂಬ ದುರಂಕಾರ ಹಬ್ಬಿರುತ್ತದೆ. ಹಠಮಾರಿ ಕಾಳಮ್ಮನಿಗೆ ಶ್ರೀಮಂತಿಕೆ, ಸ್ವಾಭಿಮಾನ ಹೆಚ್ಚಿರುತ್ತದೆ. ಮನೆಯ ಅಧಿಕಾರವನ್ನು ಸಂಪೂರ್ಣವಾಗಿ ಕೈಗೆತ್ತಿಕೊಂಡ ಕಾಳಮ್ಮ ಮಾತೃಪ್ರಧಾನ ಕುಟುಂಬದ ಪ್ರತೀಕವಾಗಿದ್ದಾಳೆ. ಯಾರೊಬ್ಬರೂ ಅವಳಿಗೆ ಮೋಸಮಾಡಲು ಸಾಧ್ಯವಿಲ್ಲ. ಗಂಡ, ಮಕ್ಕಳು, ಸೊಸೆಯಂದಿರು, ಜೀತಗಾರರು, ಪ್ರತಿಯೊಬ್ಬರೂ ಇವಳ ಆಜ್ಞೆಯನ್ನು ಪಾಲಿಸಬೇಕು. ಆಚರಣೆ, ಸಂಪ್ರದಾಯಗಳಿಗೆ ಸಂಬಂಧಿಸಿದಂತೆ ಇವಳ ಚಿಂತನೆಯಲ್ಲಿಯೇ ಮುಂದುವರೆಯುತ್ತವೆ. ಹೀಗೆ ಇರುವ ಕಾಳಮ್ಮನ ಬಿಳಿ ಮಾದಪ್ಪ ಎಳ್ಳು ಬಿಕ್ಷೆಗೆ ಬಂದಾಗ ನಿರಾಕರಿಸಿದ ಕಾಳಮ್ಮನ ಕುಟುಂಬವನ್ನು

ಸಂಪೂರ್ಣವಾಗಿ ಸುಟ್ಟುಹಾಕುತ್ತಾನೆ. ಕಾಳಮ್ಮ ತನ್ನೆಲ್ಲ ಸರ್ವಸ್ವವನ್ನು ಕಳೆದುಕೊಂಡರೂ ಸ್ವಾಭಿಮಾನವನ್ನು ಬಿಡದೆ ಸ್ತ್ರೀ ಸ್ವಾಭಿಮಾನದ ಪ್ರತೀಕವಾಗಿ ಕಂಡುಬರುತ್ತಾಳೆ.

ಕೊಕ್ಕರೆ ಕೋನಬೋಳಿ ಬೆಟ್ಟದ ಮಾಳದಲ್ಲಿ ಹಿಂಡು ಸೋಲಿಗರ ಬೊಪ್ಪೇಗೌಡನ ಕುಟುಂಬ ಇವನದೂ ಅವಿಭಕ್ತ ಕುಟುಂಬಾಗಿದ್ದು ಮನೆಯ ಯಜಮಾನ ಪುರುಷನೆ ಆಗಿರುತ್ತಾನೆ.

"ಬೊಪ್ಪೇಗೌಡ ಅಂತೇಳಿ

ಬೊಪ್ಪೇಗೌಡನಿಗೆ ಆರು ಜನ ಗಂಡುಮಕ್ಕಳಿದ್ದಾರೆ

ಆರು ಜನ ಗಂಡು ಮಕ್ಕಳಲ್ಲಿ

ಕಿರಿಯವನಾಗಿರತಕ್ಕಂಥವ ನೀಲೇಗೌಡ

ಆರು ಜನ್ದಲಿ ಐದು ಜನಕ್ಕೆ ಲಗನವಾಗಿದೆ

ಕಿರಿಮಗ ನೀಲೇಗೌಡ್ನಿಗೆ ಲಗ್ನವಿಲ್ಲ"[೨೧] ಇಡೀ ಕಾವ್ಯದಲ್ಲಿ ಸಂಕಮ್ಮನ ಸಾಲು ಲಿಂಗ ಸಂಬಂಧ, ಸ್ತ್ರೀ–ಪುರುಷ ಸಂಘರ್ಷಗಳು, ಕುಟುಂಬದಲ್ಲಿನ ಒಡೆತನ ಆರ್ಥಿಕ ಚಟುವಟಿಕೆಯ ಅಂಶಗಳು ಪಾತಿವ್ರತ್ಯ ಸಾಬೀತಿಗಾಗಿ ಹೋರಾಟ, ಧಾರ್ಮಿಕ ಸಂಘರ್ಷಗಳು ಇವೆಲ್ಲವನ್ನು ಕಾಣಬಹುದಾಗಿದೆ. ನೀಲಯ್ಯ ಸಂಕಮ್ಮನನ್ನು ಮೆಚ್ಚಿ ಮದುವೆಯಾಗುತ್ತಾನೆ. ಆದರೆ ಅವಳಿಗೆ ಮಕ್ಕಳಾಗದಿದ್ದಾಗ ಅತ್ತಿಗೆ ನಾದಿನಿಯರು ಹೀಯಾಳಿಕೆಯಿಂದ ಬೇಸತ್ತು ಸಂಕಮ್ಮನ್ನು ಕರೆದುಕೊಂಡು ಹೋಗಿ ದೂರದ ಕಾಡಿನಲ್ಲಿ ವಾಸಿಸುತ್ತಾರೆ. ಇಲ್ಲಿ ಪುರುಷ ಪ್ರಾಧಾನ್ಯತೆ ಇದ್ದರೂ ಸಹ ಸಮಾಜದ ಹೀಯಾಳಿಕೆಗಳು, ನಿಂದನೆಗಳು ಹೇಗೆ ಕುಟುಂಬವನ್ನು ಒಡೆದು ಆಳುತ್ತವೆ, ಮಹಿಳೆ ಕುಟುಂಬಗಳ ವಿಭಜನೆಗೆ ಹೇಗೆ ಕಾರಣಳಾಗುತ್ತಾಳೆ ಎಂಬ ಅಂಶವನ್ನು ಈ ಕಾವ್ಯದಲ್ಲಿ ಕಾಣಬಹುದು. ಸ್ತ್ರೀಗೆ ಸ್ತ್ರೀಯೇ ಶತ್ರು ಎಂಬ ಮಾತಿನಲ್ಲಿ ಪ್ರತೀ ಕುಟುಂಬದಲ್ಲಿ ನಡೆಯುವ ಮನೆ ಒಡೆತನದ ಸಂಘರ್ಷಗಳು ವಾರಗಿತ್ತಿಯರ ಜಗಳಗಳನ್ನು ಈ ಸಾಲಿನಲ್ಲಿ ಕಾಣಬಹುದು.

ಅಷ್ಟೇ ಅಲ್ಲದೇ ನೀಲಯ್ಯ–ಸಂಕವ್ವ ಬೇರೆಯಾದ ಮೇಲೆ ವಾರ್ಷಿಕ ಬೇಟೆಗೆ ಒಂಬತ್ತು ತಿಂಗಳುಗಳ ಕಾಲ ನೀಲಯ್ಯ ಹೋಗಬೇಕಾದ ಪರಿಸ್ಥಿತಿ ಬರುತ್ತದೆ. ಆಗ ಸಂಕಮ್ಮನ ಶೀಲವನ್ನು ಸಂಶಯಿಸಿ ಅವಳಿಗೆ ಚಿತ್ರಹಿಂಸೆ ಮಾಡಿ ಬಂಧಿಸಿ ಕಾಡಿಗೆ ಹೋಗುತ್ತಾನೆ. ಆಗ ಮಾದೇಶ್ವರ ಅವಳ ಕಷ್ಟವನ್ನು ನೋಡಲಾರದೆ ಎಲ್ಲವನ್ನು ಬಗೆಹರಿಸಿ ಬಂಜೆತನವನ್ನು ಹೋಗಲಾಡಿಸಿ ಮಕ್ಕಳ ಭಾಗ್ಯ ನೀಡುತ್ತಾನೆ. ಬೇಟೆಯಿಂದ ಹಿಂದುರಿಗಿದ ನೀಲಯ್ಯ ಸಂಕಮ್ಮನ ಬದಲಾವಣೆಗಳನ್ನು ಸಹಿಸಲಾಗದೆ ಅವಳ ಮೇಲೆ ಅನುಮಾನ ಪಟ್ಟು ಅನೇಕ ಪರೀಕ್ಷೆಗಳನ್ನು ನೀಡುತ್ತಾನೆ. ಅವಳ ಪಾತಿವ್ರತ್ಯ ಪರೀಕ್ಷೆಗಾಗಿ ಅನೇಕ ಪರೀಕ್ಷೆಗಳನ್ನು ಮಾದಪ್ಪ ಬಗೆಹರಿಸುತ್ತಾನೆ. ಈ ಕುಟುಂಬದಲ್ಲಿ ಪುರುಷ ಸಮಾಜದ ಸಹಜವಾದ ಹೆಂಡತಿಯ ಮೇಲಿನ ಅನುಮಾನವನ್ನು ಅದಕ್ಕೆ ನೀಲಯ್ಯ ಕೊಡುವ ಶಿಕ್ಷೆಯನ್ನು ಪುರುಷ ಸಮಾಜವು ಒಪ್ಪುತ್ತೆ. ಗಂಡು–ಹೆಣ್ಣು ಸಮಾನವಾಗಿ ಒಂದೇ ಕುಟುಂಬವಾಗಿ ಬಾಳಬೇಕು. ಇಲ್ಲವಾದಲ್ಲಿ ಸಂಘರ್ಷಗಳು

ಪ್ರತಿ ಕುಟುಂಬದಲ್ಲಿ ಹೇಗೆ ಉಂಟಾಗುತ್ತವೆ ಎಂಬುದನ್ನು ನೀಲಯ್ಯ ಸಂಕಮ್ಮರ ಜೀವನದ ಮೂಲಕ ತಿಳಿಸಲಾಗಿದೆ.

ಜುಂಜಪ್ಪನ ಕಾವ್ಯವು ಅವಿಭಕ್ತ ಕುಟುಂಬವಾಗಿದ್ದು, ಸ್ತ್ರೀ–ಪುರುಷರ ಅಸ್ತಿತ್ವ ಸಾಮಾನ್ಯ ಸಮಾಜದಲ್ಲಿರುವಂತೆ ಕಾಣಬಹುದು. ಜುಂಜಪ್ಪನ ಕುಟುಂಬ ಮೂರು ತಲೆಮಾರುಗಳಲ್ಲಿ ಕಂಡು ಬರುತ್ತದೆ. ಜುಂಜಪ್ಪನ ತಂದೆ ಕೆಂಗರು ಮಲ್ಲೇಗೌಡ ತಾಯಿ ಸಿನ್ನಮ್ಮ, ತಾತ ಆಲೇಗೌಡ. ಹೀಗೆ ಮೂರು ತಲೆಮಾರುಗಳಲ್ಲಿ ಇದ್ದರೂ ಜುಂಜಪ್ಪನ ಹುಟ್ಟು ಮಾನವ ಅಸಹಜ ಕ್ರಿಯೆಯಾಗಿ ನಡೆಯುತ್ತದೆ. ಕೆಂಗರು ಮಲ್ಲೇಗೌಡ–ಸಿನ್ನಮ್ಮ ಇವರ ಮಕ್ಕಳು ಜುಂಜಪ್ಪ, ಮಾರಣ್ಣ, ಮೈಲಣ್ಣ, ಮಾರಕ್ಕ. ಕೆಂಗರು ಮಲ್ಲೇಗೌಡ ತನ್ನ ತಂದೆಯಂತೆ ದನಗಳ ಪಾಲನೆ ಪೋಷಣೆಗೆ ಹೆಚ್ಚು ಆಸಕ್ತನಾಗಿದ್ದು ದನಗಳೊಂದಿಗೆ ಕಾಡಿಗೆ ಹೋಗುತ್ತಾನೆ. ಶಿವನ ಕೃಪೆಯಿಂದ ಸಿನ್ನಮ್ಮ ೩ ಜನ ಗಂಡು ಮಕ್ಕಳು, ೧ ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಆದರೆ ಹೆಣ್ಣು ಮಗು ಹುಟ್ಟಿದ ತಕ್ಷಣ ತಂದೆ ಸಾಯುತ್ತಾನೆ ಎಂದು ಭವಿಷ್ಯ ನುಡಿದಿರುತ್ತದೆ. ನುಡಿದಂತೆ ಭವಿಷ್ಯವಾಗುತ್ತದೆ. ಸಮಾಜದಲ್ಲಿ ಗಂಡ ಇಲ್ಲದಿದ್ದರೆ ಹೆಣ್ಣು ಯಾವ ರೀತಿ ನಿಂದನೆಗೆ ಗುರಿಯಾಗುತ್ತಾಳೆ. ಗಂಡು–ಹೆಣ್ಣು ಇಬ್ಬರೂ ಕುಟುಂಬದ ಹೊರೆ ಹೊರುವುದನ್ನು ಇಲ್ಲಿ ಕಾಣಬಹುದು. ಈ ಕುಟುಂಬದಲ್ಲಿ ಕೆಂಗರು ಮಲ್ಲೇಗೌಡ ನಿಧನವಾದ ನಂತರ ಸಿನ್ನಮ್ಮ ಅನೇಕ ಅಪವಾದಗಳನ್ನು ಹೊರಸಬೇಕಾಗುತ್ತದೆ. ಸಿನ್ನಮ್ಮ ಕಡುಬಡತನದಿಂದ ಜೀವನ ಸಾಗಿಸಬೇಕಾಗುತ್ತದೆ. ಆದರೂ ಸಿನ್ನಮ್ಮನ ಹಿರಿಯ ಮಗ ಜುಂಜಪ್ಪನೇ ಮನೆಯ ಜವಾಬ್ದಾರಿಯನ್ನು ತೆಗೆದುಕೊಳ್ಳುತ್ತಾನೆ. ಮಗನು ಸಹ ಅನೇಕ ಕಟ್ಟು ಪಾಡುಗಳಲ್ಲಿ ಸ್ತ್ರೀಯರನ್ನು ಬಂಧಿಸುವುದನ್ನು ಕಾಣಬಹುದು.

ಒಂದು ಕುಟುಂಬದಲ್ಲಿ ಗಂಡು ವಿಧಿಸಿದ ಸಂಪ್ರದಾಯಗಳಲ್ಲಿ ಹೆಣ್ಣು ಹೇಗೆ ನಡೆಯಬೇಕು ಎಂಬುದನ್ನು ಜುಂಜಪ್ಪ ತನ್ನ ತಾಯಿಗೆ ಹೀಗೆ ಹೇಳುತ್ತಾನೆ.

"ಸರಿ ಹೆಣ್ಣು ಸೂರ್ಯ ಮುಣ್ಕುದ ಮ್ಯಾಲೆ

ನಮ್ ಗೊಲ್ಲಣೀಯೊಳುಗೆ ಹುಟ್ಟದುಮ್ಯಾಲೇ

ಇಲ್ಲಿ ಕೊಟ್ಟು ಮನೆಯೊಳಗೆ ಕರುವಿನಿಂದ ಒಳಗಡೆ ಇರಬೇಕು"[೨೨].

ಎಂದು ಹೇಳುವುದರೊಂದಿಗೆ ತಾಯಿಯನ್ನು ಸಂಪ್ರದಾಯಗಳಲ್ಲಿ ಬಂಧಿಸಿಡುತ್ತಾನೆ. ತಂಗಿ ಮಾರಕ್ಕನನ್ನು ಮಡಿ ಮೈಲಿಗೆ ಎಂದು ಹಟ್ಟಿಯಿಂದ ಆಚೆ ಇಡುವ ಸಂದರ್ಭಗಳನ್ನು ಕಾಣಬಹುದು. ಸಾಮಾನ್ಯವಾಗಿ ಮೈನೆರೆದ ಹುಡುಗಿಯರನ್ನು ಮತ್ತು ಬಾಣಂತಿಯರನ್ನು ಮನೆಯಿಂದ ಹೊರಗಿಡುವ ಪದ್ಧತಿ ಇಂದಿಗೂ ಜುಂಜಪ್ಪನ ಕುಲದವರಲ್ಲಿ ಕಾಣಬಹುದು. ಅನೇಕ ಕುಟುಂಬಗಳು ಇದನ್ನೇ ಇಂದಿಗೂ ಪಾಲಿಸಿಕೊಂಡು ಬರುತ್ತಿದ್ದಾರೆ. ಸಿನ್ನಮ್ಮನ ಗಂಡ ಸತ್ತು ವಿದವೆಯಾದ ಮೇಲೆ ಕಠಿಣವಾದ ಬದುಕು ನಡೆಸುತ್ತ ತನ್ನ ಮಕ್ಕಳನ್ನು ಸಾಕುತ್ತಿರುತ್ತಾಳೆ. ಆದರೆ ಒಮ್ಮೆ ಕಟ್ಟಿಗೆ ತರಲು ಕಾಡಿಗೆ ಹೋದಾಗ

ಜುಂಜಪ್ಪನ ಮಾತನ್ನು ಮೀರಿ ತನ್ನ ಅಣ್ಣಂದಿರ ಮನೆಯಲ್ಲಿ ಉಳಿದುಕೊಳ್ಳುತ್ತಾಳೆ. ಇದನ್ನು ಒಪ್ಪದ ಜುಂಜಪ್ಪ ತಾಯಿ ಸಿನ್ನಮ್ಮನನ್ನು ವಿವಿಧ ಪರೀಕ್ಷೆಗಳಿಗೆ ಒಳಪಡಿಸುತ್ತಾನೆ. ತನ್ನ ತಾಯಿ ಪತಿವ್ರತೆ ಎಂಬುದನ್ನೇ ಸಾಬೀತುಪಡಿಸಿ, ಸಮಾಜದ ನಿಂದನೆಯಿಂದ ಕಾಪಾಡುತ್ತಾನೆ. ಪುರುಷ ಪ್ರಾಧಾನ್ಯತೆಯ ಕುಟುಂಬದಲ್ಲಿ ಹೆಣ್ಣನ್ನು ರಕ್ಷಿಸುವ ಹೊಣೆ ಪುರುಷರಿಗೆ ಇರುತ್ತದೆ ಎಂಬುದನ್ನು ಈ ಕಾವ್ಯದಲ್ಲಿ ಕಾಣಬಹುದು. ಈ ಮಹಾಕಾವ್ಯಗಳಲ್ಲಿ ಕೌಟುಂಬಿಕವಾಗಿ ಅನೇಕ ವಿಚಾರಗಳು ಭಿನ್ನವಾಗುತ್ತ ಹೋಗುತ್ತವೆ. ಸ್ತ್ರೀ ಪುರುಷರ ಅಸ್ತಿತ್ವ, ಸಮಾನತೆ–ಅಸಮಾನತೆ, ಲಿಂಗತಾರತಮ್ಯ ಇವೆಲ್ಲವೂ ಕುಟುಂಬದ ಸುತ್ತ ವಿವಿಧ ಸಂಬಂಧಗಳೊಂದಿಗೆ ಸುತ್ತುತ್ತಿರುತ್ತವೆ.

ಮಂಟೇಸ್ವಾಮಿ ಕಾವ್ಯದಲ್ಲಿ ಕಂಡುಬರುವ ಕುಟುಂಬಗಳಲ್ಲಿ ಸ್ತ್ರೀ–ಪುರುಷರ ಅಸ್ತಿತ್ವಕ್ಕಿಂತ ತಮ್ಮ-ತಮ್ಮ ಭಕ್ತಿ ಹಾಗೂ ಒಕ್ಕಲುಗಳನ್ನು ಪಡೆಯುವುದೇ ಕಂಡುಬರುತ್ತದೆ. ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ಕಲ್ಯಾಣ ಪಟ್ಟಣದ ಸಾಲಿನಲ್ಲಿ ಬಸಮ್ಮ, ನೀಲಮ್ಮರು ಮಹಾಶಿವಭಕ್ತರಾಗಿದ್ದು, ಇವರ ಸತ್ಯವನ್ನು ನೋಡಬೇಕೆಂದು ಮಂಟೇಸ್ವಾಮಿ ಕುಷ್ಠರೋಗಿ ವೇಷವನ್ನು ಧರಿಸಿಕೊಂಡು ಹೋಗುತ್ತಾರೆ. ಇಲ್ಲಿ ದೈವವೇ ತನ್ನ ಭಕ್ತರ ಪರೀಕ್ಷೆ ಮಾಡಿ ಸಮಾಜಕ್ಕೆ ಅವರ ಸತ್ಯವನ್ನು ಸಾರುವುದು ಕಾಣಬಹುದು. ಬಸವಣ್ಣ, ನೀಲಮ್ಮರು ಧಾರ್ಮಿಕ ಪರಧಿಯಲ್ಲಿ ತಮ್ಮ ಕೌಟುಂಬಿಕ ಜೀವನವನ್ನು ಸಾಗಿಸುತ್ತಿರುತ್ತಾರೆ. ಇವರ ಭಕ್ತಿಗೆ ಮೆಚ್ಚಿದ ಮಂಟೇಸ್ವಾಮಿ ಬಸವಣ್ಣ ಕೈಗೊಂಡ ಅನುಭವ ಮಂಟಪದೆಡೆಗೆ ಬರುತ್ತಾರೆ. ಅಲ್ಲಿ ಡಾಂಬಿಕತನದ ಭಕ್ತರನ್ನು ಪತ್ತೆ ಹಚ್ಚಿ ನಿಜ ಭಕ್ತರಿಗೆ ಮುಕ್ತಿಯನ್ನು ನೀಡುತ್ತಾರೆ. ತಮ್ಮ ಧಾರ್ಮಿಕ ನಿಲುವೇ ತಮ್ಮ ಕುಟುಂಬದ ಚಲನಶೀಲತೆಯೆಂದು ನಂಬಿ ಸ್ತ್ರೀ–ಪುರುಷರಿಗಿಂತ ಲಿಂಗ ಜಂಗಮರ ಅಸ್ತಿತ್ವವನ್ನು ಸ್ಥಾಪಿಸುತ್ತಾರೆ.

ಮಂಟೇಸ್ವಾಮಿ ಕಾವ್ಯದಲ್ಲಿ ಧರ್ಮದ ಪರವಾಗಿ ನಿಲ್ಲುವ ಕುಟುಂಬ ಎಂದರೆ ಬಸವಾಚಾರಿ ಮತ್ತು ಮುದ್ದಮ್ಮ ಇವರ ಮಗ ಕೆಂಪಾಚಾರಿ ಬಸವಾಚಾರಿ ಮುದ್ದಮ್ಮರ ಒಬ್ಬನೇ ಮಗನಾಗಿ ತೇಜೋವದನಾಗಿ ಬೆಳೆದ ಕೆಂಪಾಚಾರಿಯನ್ನು ಮಂಟೇಸ್ವಾಮಿ ಭಿಕ್ಷೆಯಾಗಿ ಬೇಡುತ್ತಾರೆ. ತಾಯಿ ಮುದ್ದಮ್ಮ ಮತ್ತು ಮಗ ಕೆಂಪಾಚಾರಿ ಇದನ್ನು ವಿರೋಧಿಸಿ ಮಂಟೇಸ್ವಾಮಿಯನ್ನು ನಿಂದಿಸುತ್ತಾರೆ. ಇದರಿಂದ ಮಂಟೇಸ್ವಾಮಿ ಡುಪಾಟಿಯಲ್ಲಿ ವೈರಾಗ್ಯ ಹುಟ್ಟುವಂತೆ ಮಾಡುತ್ತಾನೆ. ನಂತರ ಅವನಿಗೆ ಸಿದ್ದಪ್ಪಾಜಿ ಎಂದು ಮರು ನಾಮಕಾರಣ ಮಾಡಿ ಗುರುವಿನ ಮಹಿಮೆಯನ್ನು ಸಾರುತ್ತ ಹೋಗುತ್ತಾರೆ.

ಮಂಟೇಸ್ವಾಮಿ ಕಾವ್ಯದಲ್ಲಿ ಪ್ರತಿ ಕುಟುಂಬಗಳು ದೃಢವಾದ ಭಕ್ತಿ ನಿಷ್ಠೆಯನ್ನು ಹೊಂದಿರುತ್ತಾರೆ. ಅಲ್ಲದೇ ಬದುಕನ್ನು ಆಧ್ಯಾತ್ಮಿಕವಾಗಿ ಸ್ವೀಕರಿಸುವ ಪರಿಯನ್ನು ಈ ಕಾವ್ಯದಲ್ಲಿ ಬರುವ ಕುಟುಂಬಗಳಲ್ಲಿ ಕಾಣಬಹುದು.

ಮೈಲಾರ ಲಿಂಗ ಕಾವ್ಯವು ಮಾದಪ್ಪ, ಮಂಟೇಸ್ವಾಮಿಯಂತೆ ತನ್ನ ಧ್ಯೇಯೋದ್ದೇಶಗಳ ಈಡೇರಿಕೆಗೆ ಮತ್ತೊಂದು ಕಡೆ ಸ್ಥಿರವಾಗಿ ನಿಂತು (ಒಕ್ಕಲುಗಳನ್ನು) ಭಕ್ತರನ್ನು ಹೆಚ್ಚಿಸಿಕೊಳ್ಳುವಲ್ಲಿ ಈ ಕಾವ್ಯ ಪ್ರಾಮುಖ್ಯತೆ ಪಡೆದಿದೆ. ಮೈಲಾರ ಲಿಂಗ ಕಾವ್ಯದಲ್ಲಿ ಗಂಗಿ ಮಾಳಮ್ಮ, ಕೋಮಾಲೆ ಎಂಬ ಇಬ್ಬರು

ಪತ್ನಿಯರನ್ನು ಒಳಗೊಂಡ ಮೈಲಾರ ದ್ವಿಪತ್ನಿತ್ವವನ್ನು ಹೊಂದಿವ ಎರಡು ಕುಟುಂಬಗಳ ನಡುವೆ ಹೇಗೆ ಘರ್ಷಣೆ ಉಂಟಾಗುತ್ತದೆ ಎಂಬುದನ್ನು ನೋಡಬಹುದಾಗಿದೆ. ಎಷ್ಟೋ ಕುಟುಂಬಗಳಲ್ಲಿ ಪುರುಷ ಪ್ರದಾನ್ಯತೆ ಹೊಂದಿದ್ದು ಮನೆಯ ಯಜಮಾನ ಇಬ್ಬರು ಪತ್ನಿಯರನ್ನು ಒಳಗೊಂಡು ನೆಮ್ಮದಿ ಇಲ್ಲದ ಸಂಸಾರ ನಡೆಸುವಂತೆ ಆಗಿದೆ. ಮೈಲಾರಲಿಂಗನು ತನ್ನ ಮೊದಲ ಪತ್ನಿ ಗಂಗಿಮಾಳಮ್ಮನನ್ನು ಬಿಟ್ಟು ಕೋಮಲೆಯೊಂದಿಗೆ ಪ್ರೇಮ ವಿವಾಹವಾಗಿ ಇಬ್ಬರಿಗೂ ಸಮಾನ ಪ್ರಾಶಸ್ತ್ಯ ನೀಡಿರುವುದನ್ನು ಕಾಣಬಹುದು.  ಈ ಕಾವ್ಯದಲ್ಲಿ ಮೈಲಾರಲಿಂಗ ಕುರುಬರು ಮತ್ತು ಮಡಿವಾಳರ ಸಮುದಾಯದ ಪ್ರತಿಯೊಬ್ಬರೂ ತನಗೆ ಒಕ್ಕಲಾಗಬೇಕೆಂದು ಎರಡು ವಿವಾಹ ಮಾಡಿಕೊಳ್ಳುವುದು ಕಂಡುಬರುತ್ತವೆ. ಸಾಮಾನ್ಯ ಕುಟುಂಬಗಳಿದ್ದಂತೆ ಇಲ್ಲಿ ಪಾತಿವ್ರತ್ಯ ಧರ್ಮವನ್ನು ವಿಭಿನ್ನವಾಗಿ ಅನುಸರಿಸಿಕೊಂಡು ಬಂದಿರುವುದನ್ನು ಕಾಣಬಹುದು.




ಮಾಳಿಂಗರಾಯನ ಕುಟುಂಬವು ಅವಿಭಕ್ತ ಕುಟುಂಬವಾಗಿದೆ. ಇಲ್ಲಿ ಯಾವುದೇ ಸ್ತ್ರೀ–ಪುರುಷರ ಸಂಘರ್ಷಗಳಿಲ್ಲದೆ ಪುರುಷ ಮನೆಯ ಒಡೆತನ ಹೊಂದಿದ್ದು ಪುರುಷನ ಗೈರಿನಲ್ಲಿ ಮನೆಯ ಜವಾಬ್ದಾರಿಯನ್ನು ಸ್ತ್ರೀ ಹೊರುವ ಅವಕಾಶವಿರುತ್ತದೆ. ಮನೆಯ ಒಡೆತನ ತಂದೆಯ ನಂತರ ಮಗನೇ ವಹಿಸಿಕೊಳ್ಳುವುದನ್ನು ಈ ಕಾವ್ಯದಲ್ಲಿ ಕಾಣಬಹುದು. ಮಾಳಿಂಗರಾಯನ ಕುಟುಂಬವನ್ನು ಈ ರೀತಿ ನೋಡಬಹುದು.

ಭಾರತದಲ್ಲಿ ಕೃಷಿ ಉತ್ಪಾದನೆಯ ಅನ್ವೇಷಣೆಗೊಂಡ ನಂತರ ಮಾತೃಪ್ರಧಾನ ಸಮಾಜ ಅಸ್ತಿತ್ವಕ್ಕೆ ಬಂದಿತು. ಇದರ ಹಿನ್ನೆಲೆಯಲ್ಲಿ ಅಸ್ತಿಯಲ್ಲಿ ಮಹಿಳೆಯರಿಗೆ ಒಡೆತನ ಉಲ್ಲೆಖ ಬಂದಿತು. ಮದುವೆಯ ನಂತರ ಸ್ತ್ರೀಗೆ ಆಸ್ತಿ ಹಕ್ಕಿನ ಸಂವಿಧಾನ ಜಾರಿಗೆ ಬಂದಿತು. ಇದು ಪ್ರಸ್ತುತ ಸಮಾಜದವರೆಗೂ ಮುಂದುವರೆದುಕೊಂಡು ಬಂದಿದೆ. ಇದರಿಂದಾಗಿಯೇ ಮಾತೃ ಮೂಲ ಕುಟುಂಬವು ಪ್ರಧಾನವಾಗಿ ಅಸ್ತಿತ್ವಕ್ಕೆ ಬಂದಿತು.

ಸ್ತ್ರೀ ಕೇಂದ್ರಿತ ಕುಟುಂಬುಗಳು ಕ್ರಿ.ಪೂ.೧೦೦೦೦ರ ವೇಳೆಗೆ ಆರ್ಯರು" ಭಾರತದಲ್ಲಿ ತಮ್ಮ ಭೂ ಸ್ವಾಮ್ಯವನ್ನು ವಿಸ್ತರಿಸುತ್ತಾ ಹೋದಹಾಗೆಲ್ಲಾ ಇಲ್ಲಿನ ಮೂಲ ನಿವಾಸಿಗಳಾದ ದ್ರಾವಿಡರಿಗೂ ಆರ್ಯರಿಗೂ ಘರ್ಷಣೆಗಳು ಹೆಚ್ಚುತ್ತಾ ಹೋದವಷ್ಟೇ ಅಲ್ಲಿ ಆರ್ಯ ಸಂಸ್ಕೃತಿಯ ಪ್ರಾಬಲ್ಯವೂ ಬೆಳೆಯುತ್ತಾ ಹೋಯಿತು. ಭಾರತೀಯ ಸಮಾಜದ ವಿಭಜನೆ ಹಾಗೂ ಮಾತೃ ಪ್ರಧಾನವಾದ ಮೌಲ್ಯಗಳ ಹಾಗೂ ಆಚರಣೆಗಳ ನಶಿಸುವಿಕೆ ಈ ಯುಗದಲ್ಲಿ ಪ್ರಾರಂಭವಾಯಿತು. ಆಗ ಆರಂಭವಾದ ಲಿಂಗ ವ್ಯವಸ್ಥೆಯ ಅಸಮಾನತೆ ಇಂದಿಗೂ ಹೊಸ ಹೊಸ ರೂಪಗಳನ್ನು ತಾಳಿ ಮುಂದುವರೆದುಕೊಂಡು ಬಂದಿದೆ ಎಂಬುದು ಗಮನಾರ್ಹವಾದ ವಿಷಯವಾಗಿದೆ"[೨೩] ಇದರಿಂದಾಗಿ ಕುಟುಂಬ ಮತ್ತು ಕುಟುಂಬದಾಚೆಗೂ ಸ್ತ್ರೀಯ ಸ್ಥಾನ ಮಾನಗಳು ಕ್ಷೀಣಿಸಿದವು. ಇದರಿಂದಾಗಿ ಕೃಷಿಯು ಸಂಪೂರ್ಣವಾಗಿ ಪುರುಷ ಕೈವಶವಾಗಿ ಸ್ತ್ರೀಯು ಕೇವಲ ಮಕ್ಕಳನ್ನು ಹೆರುವ ಯಂತ್ರವಾದಳು. ಜಾತಿ ವ್ಯವಸ್ಥೆಯಲ್ಲೂ ಮಹಿಳೆಯನ್ನು ಕೆಳಸ್ತರದಲ್ಲಿ ಇಳಿಸಲಾಗಿದೆ. ಜ್ಞಾನವು ಕೇವಲ ಮೇಲ್ಜಾತಿ ಮಹಿಳೆಯರಿಗೆ ಸೀಮಿತಗೊಳಿಸುವುದು ಮತ್ತು ಅನೇಕ ವಿಚಾರಗಳಲ್ಲಿ ಆರ್ಯರು ಸ್ತ್ರೀ ವಿರೋಧಿ ಮೌಲ್ಯಗಳನ್ನು ಸಮಾಜದಲ್ಲಿ ಸ್ಥಾಪಿಸುವುದರ ಮೂಲಕ ದ್ರಾವಿಡ ಸಂಸ್ಕೃತಿಯಲ್ಲಿ ಸ್ತ್ರೀ-ಪುರಷ ಇಬ್ಬರಿಗೂ ಸಮಾನತೆಗೆ ಅವಕಾಶ ನೀಡುತ್ತಿದ್ದ ಅವಕಾಶವನ್ನು ಆರ್ಯ ಸಮಾಜ ನಾಶಮಾಡಿತು.

**೩.೩ ಸ್ತ್ರೀ-ಪುರುಷರ ಪರಿಕಲ್ಪನೆ**

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ, ಸಮಾಜ, ಮತ್ತು ಸಂಸ್ಕೃತಿಯು ಹೀಗೆ ಒಂದುಕ್ಕೊಂದು ಅವಿನಾಭಾವ ಸಂಬಂಧ ಹೊಂದಿವೆ, ಆದರೆ ಈ ಪರಿಕಲ್ಪನೆಗಳಲ್ಲಿ ಸ್ತ್ರಿ-ಪುರಷರ ಗುರುತಿಸುವುದು ಪ್ರತ್ಯೇಕವಾಗಿಯೇ ನಿರ್ಧಾರಿಸಲಾಗುತ್ತಿದೆ. ಅಂದರೆ ಒಂದು ಸಂಸ್ಕೃತಿಯ ನಿರ್ಮಾಣಕ್ಕೆ ಪುರುಷ ಕಾರಣನಾಗಿರುತ್ತಾನೆ. ಏಕೆಂದರೆ ಪುರುಷ ಧೈರ್ಯಶಾಲಿ, ಸ್ವಾವಲಂಬಿ, ರಕ್ಷಕ ಮೊದಲಾದ ಗುಣಲಕ್ಷಣಗಳನ್ನು ಹೊಂದಿದ್ದಾನೆ. ಸ್ತ್ರೀಯರಲ್ಲಿ ಭಾವುಕತೆ ಕೋಮಲತೆ, ತಾಯ್ತನ, ಕ್ಷಮೆ ತಾಳ್ಮೆ ಕಷ್ಟಗಳನ್ನು ಒಳಗೊಂಡಿರುತ್ತದೆ.

"ಸ್ತ್ರೀ ಪದವು ಸೋತ್ರ ಎಂಬ ಧಾತುವಿನಿಂದ ಬಂದಿದೆ, ಸೋತ್ರ ಎಂದರೆ ಸೂತ್ರ ಅಂದರೆ ಹಡೆಯುವಳು ಎಂದರ್ಥ, ಕೇವಲ ಗರ್ಭದ ಅಸ್ತಿತ್ವವುಳ್ಳವಳು ಮಾತ್ರ ಸ್ತ್ರೀ ಎಂದು ಹೆಣ್ಣಿನ ಗರ್ಭದ ಅಸ್ತಿತ್ವದ ಮೇಲೆ ಅವಳ ವ್ಯಕ್ತಿತ್ವವನ್ನು ರೂಪಿಸುವ ಈ ದೇಶದ ಸಂಸ್ಕೃತಿ ಹೆಣ್ಣನ್ನು ಶತಮಾನಗಳಿಂದ ನಯವಾಗಿ ವಂಚಿಸುತ್ತಾ ಬಂದಿದೆ.

ಪುರುಷ ಎನ್ನುವ ಪದವು 'ಪುರ' ಧಾತುವಿನಿಂದ ಬಂದಿದ್ದು ಪುರ ಎಂದರೆ ಶ್ರೇಷ್ಠನಾದವ, ಸಂಪೂರ್ಣ ವ್ಯಕ್ತಿತ್ವ ಪಡೆದವ ಎಂದರ್ಥ ಹೀಗೆ ಸ್ತ್ರೀಪುರುಷರ ಪರಿಕಲ್ಪನೆಯು ನಮ್ಮ ಸಂಸ್ಕೃತಿಯಲ್ಲಿ ವಿಶೇಷವಾಗಿಯೇ ಕಂಡು ಬರುತ್ತದೆ[೨೪]

ಸ್ತ್ರೀ -ಪುರುಷ ಪರಿಕಲ್ಪನೆಯು ಅನೇಕ ಶತಮಾನಗಳ ಹಿಂದಯೇ ಕಾಣಬಹುದು ೧೨ನೇ ಶತಮಾನದ ಜೇಡರ ದಾಸಿಮಯ್ಯ ತಮ್ಮ ವಚನದಲ್ಲಿ

ಮೊಲೆ ಮೂಡಿ ಬಂದರೆ ಹೆಣ್ಣೆಂಬರು

ಗಡ್ಡ ಮೀಸೆ ಬಂದರೆ ಗಂಡೆಂಬರು

ನಡುವೆ ಸುಳಿವಾತ್ಮನು

ಗಂಡು ಅಲ್ಲ ಹೆಣ್ಣು ಅಲ್ಲ

ಕಾಣಾ ರಾಮನಾಥ[೨೫]

ಇಲ್ಲಿ ಸ್ತ್ರೀ ಪುರುಷರ ಅನನ್ಯತೆಯ ಲಕ್ಷಣಗಳನ್ನು ಹೇಳಿದ್ದಾರೆ ೧೨ನೇ ಶತಮಾನದ ವಚನ ಚಳುವಳಿಯು ಧಾರ್ಮಿಕ ಚಳುವಳಿಗೆ ಮಾತ್ರ ಸೀಮಿತವಾಗಿರದೆ ಸ್ತ್ರೀ-ಪುರುಷರ ನಡುವಿನ ಸಮಾನತೆಯನ್ನು ಗುರುತಿಸುವ ಮತ್ತು ಮಹಿಳೆಯರಿಗೆ ಒಂದು ವಿಶಿಷ್ಟ ಸ್ಥಾನವನ್ನು ದೊರಕಿಸಿಕೊಡುವ ಚಳುವಳಿಯೂ ಆಗಿತ್ತು. ಈ ಹಿನ್ನೆಲೆಯಲ್ಲಿ ದಾಸಿಮಯ್ಯ, ಬಸವಣ್ಣ. ಅಕ್ಕಮಹಾದೇವಿ, ಮೊದಲಾದ ವಚನಕಾರರು ತಮ್ಮ ವಚನಗಳ ಮೂಲಕ ಸ್ತ್ರೀ-ಪುರುಷರು ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕವಾಗಿ ಸಮಾನರು ಎಂಬುದನ್ನು ಅಭಿವ್ಯಕ್ತಿಸಿದ್ದಾರೆ.

ಸ್ತ್ರೀ-ಪುರುಷ ಪರಿಕಲ್ಪನೆಗಳು ಜೈವಿಕಾಂಶಗಳು ಅಸಹಜವಾದದ್ದು. ಇದು ಪ್ರಕೃತಿದತ್ತವಾದದ್ದು. ಆದರೆ ಈ ಜೈವಿಕ ನೀತಿ ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡಿದೆ. ಶ್ರೇಷ್ಠ-ಕನಿಷ್ಠ, ಪವಿತ್ರ-ಅಪವಿತ್ರ, ಮೇಲು-ಕೀಳು, ಹಾಗೂ ಹೆಣ್ಣು-ಗಂಡು ಎಂದು ಮನುಷ್ಯ ಹುಟ್ಟಿ ಸಮಾಜಕ್ಕೆ ತಕ್ಕಂತೆ ಅಳವಡಿಸಿಕೊಳ್ಳುತ್ತಾ ಹೋಗುತ್ತಾನೆ. ಹೆಣ್ಣನ್ನು ಪ್ರಕೃತಿಗೆ ಸಂವಾದಿಯಾಗಿ ಹೋಲಿಸಿದರೆ, ಗಂಡನ್ನು ಸಂಸ್ಕೃತಿಯ ಪ್ರತೀಕವಾಗಿ ಹೋಲಿಕೆ ಮಾಡಲಾಗಿದೆ. ಅಂದರೆ ಸ್ತ್ರೀ ಪ್ರಕೃತಿ ಕನಿಷ್ಠ ಎಂದು ಗಂಡು ಸಂಸ್ಕೃತಿ ಶ್ರೇಷ್ಠ ಎಂಬ ಭಾವನೆ ಬೆಳೆಯತೊಡಗಿದೆ.

"ಎಲ್ಲರ ಹೆಂಡಿರು ತೋಳನಿಕ್ಕುವರು

ಎನ್ನ ಗಂಡಂಗೆ ತೋರಿಸುವುದಿಲ್ಲ

ಎಲ್ಲರ ಗಂಡಂದಿರಗೆ ಬಸಿಯುವುದಿಲ್ಲ

ಎನ್ನ ಗಂಡಂಗೆ ಬಸಿಯುವುದಿಲ್ಲ

ಎಲ್ಲ ಗಂಡಂದಿರಿಗೆ ಬೀಜವುಂಟು

ಎನ್ನ ಗಂಡನಿಗೆ ಅಂಡದ ಬೀಜವಿಲ್ಲ

ಎನ್ನ ಗಂಡ ಕೆಳಗೆ, ನಾ ಮೇಲೆ

ಕದಿರ : ಕಿಮ್ಮಿಮೊಡೆಯ ಗುಹೇಶ್ವರ"[೨೬] (ಕದಿರ ರಮ್ಮವ್ವೆ)

ಎಂಬಲ್ಲಿ ಮಹಿಳೆಗೆ ಸಂತಾನೋತ್ಪತ್ತಿಗೆ ಮಾತ್ರ ಸೀಮಿತವಾಗಿದ್ದು, ಅವಳಿಗೆ ಅದರಲ್ಲಿ ಸಾರ್ಥಕತೆಯನ್ನು ಪುರುಷ ಸಂಸ್ಕೃತಿ ವಿಧಿಸಿದ್ದಾನೆ. ಈ ರೀತಿಯ ಜೈವಿಕ ನಿಯಮವನ್ನು ರಮ್ಮವ್ವೆಯ ಕಟುವಾಗಿ ಟೀಕಿಸುತ್ತಾಳೆ ಧಾರ್ಮಿಕವಾಗಿಯೂ ಸ್ತ್ರೀ–ಪುರುಷರ ಪರಿಕಲ್ಪನೆ ವಿಶಿಷ್ಟ ವ್ಯಕ್ತಿತ್ವನ್ನೇ ರೂಪಿಸುತ್ತದೆ. ಧರ್ಮವು ಪುರುಷ ಪ್ರಧಾನವಾಗಿದ್ದು ಅವರ ನಿಯಂತ್ರಣದಲ್ಲಿಯೇ ಹಾಗೂ ಚಿಂತನೆಗಳಿಂದಲೇ ಉಗಮವಾಗಿದೆ. ಇಲ್ಲಿ ಪುರುಷನು ಪ್ರಥಮ ದರ್ಜೆಯಲ್ಲಿ ಕಂಡು ಬಂದರೆ, ಎರಡನೇ ದರ್ಜೆಯವಳಾಗಿ ಸ್ತ್ರೀ ಕಂಡುಬರುತ್ತಾಳೆ, ಪುರುಷ ಪ್ರಧಾನವಾದ ಧರ್ಮವು ಸ್ತ್ರೀಯನ್ನು ಒಂದು ಕಡೆ ಮಾತೆ, ದೇವತೆ, ಪ್ರಕೃತಿ ಎಂದು ಪೂಜಿಸಿದರೆ ಮತ್ತೊಂದು ಕಡೆ ಚಂಚಲೆ, ಮಾಯೆ ಎಂಬೆಲ್ಲಾ ಟೀಕಿಸುತ್ತದೆ.

ಸಾಮಾಜಿಕವಾಗಿಯೂ ಸ್ತ್ರೀ–ಪುರುಷರು ಸಮ ಅಸಮ ಪ್ರಕ್ರಿಯೆಗಳಲ್ಲ ಕಂಡುಬರುತ್ತಾರೆ. ಸ್ತ್ರೀ–ಪುರುಷರು ಸಮಾಜದಲ್ಲಿ ನಿಭಾಯಿಸಬೇಕಾದ ಜವಾಬ್ದಾರಿಗಳನ್ನು ಹಂಚಿಕೆಯ ಮೂಲಕ ಸಿದ್ದಗೊಳಿಸುತ್ತಾರೆ. ಕುಟುಂಬದಲ್ಲಿ ಸ್ತ್ರೀ–ಪುರುಷ, ಕೆಲಸ, ವಿಧಿ, ವಿಧಾನ, ಸಂಪ್ರದಾಯ, ಆಚರಣೆಗಳು ಸಹ ಇಲ್ಲಿ ಸ್ತ್ರೀ–ಪುರುಷರ ನಡುವೆ ಹಂಚಿಕೆಯಾಗುತ್ತಾ ಹೋಗುತ್ತದೆ, ಸಮಾಜವು ಈ ಹಂಚಿಕೆಗೆ ಪೂರಕವಾಗಿದ್ದರೆ ಸ್ತ್ರೀ ಪುರುಷ ಪರಿಕಲ್ಪನೆ ಸಮಾನವಾಗಿ ಮುಂದುವರೆದುಕೊಂಡು ಹೋಗುತ್ತದೆ. ಅಸಮಾನತೆಯುಂಟಾದರೆ ಘರ್ಷಣೆಗಳು ಏರ್ಪಡುತ್ತವೆ. ಸಮಾಜದಲ್ಲಿ ಕೆಲವೂಮ್ಮೆ ಲಿಂಗಾಧಾರಿತವಾದ ನೆಲೆಯಿಂದ ಹೆಣ್ಣಿನ ಮೇಲೆ ಶೋಷಣೆ, ದಬ್ಬಾಳಿಕೆ ನಡೆದರೆ ಕೆಲವೂಮ್ಮೆ ಹೆಣ್ಣು ಒಂದು ಉತ್ತುಂಗ ಸ್ಥಾನಕ್ಕೇರುತ್ತಾಳೆ. ಇದಕ್ಕೆ ಪುರುಷ ನಂಬಿಕೆಗಳು ಕಾರಣವಾಗಿರುತ್ತವೆ. ಈ ನಂಬಿಕೆಗಳು ಇದಕ್ಕೆ ಸಂಬಂಧಿಸಿದ ಆಚರಣೆಗಳು ತಲ ತಲಾಂತರಗಳಿಂದ ಬೆಳೆದು ಉಳಿದುಕೊಂಡು ಬಂದಿವೆ.

ಸ್ತ್ರೀ–ಪುರುಷರಲ್ಲಿ ಬೇರೂರಿರುವ ನಂಬಿಕೆಗಳು ಲೌಕಿಕ ಜೀವನಕ್ಕೆ ಸಂಬಂಧವು ಸಾಂಸ್ಕೃತಿಕ ನಂಬಿಕೆಗಳಾಗಿ ಬದಲಾಗಿವೆ. ಇವುಗಳನ್ನು ಕೆಲ ಸಮುದಾಯಗಳ ಸಂಸ್ಕೃತಿಯು ವೈವಿಧ್ಯತೆಗನುತೆನುಗುಣವಾಗಿ ಸ್ತ್ರೀ–ಪುರುಷರ ಸಂಸ್ಕೃತಿ ರೂಪುಗೊಳ್ಳುತ್ತದೆ. ಸಮುದಾಯಗಳ ಮೌಲ್ಯ ನೈತಿಕತೆ, ಆದರ್ಶ, ಆಸಕ್ತಿ, ನಿಷ್ಠೆ, ಒಳಗೊಂಡಿರುತ್ತದೆ. ಸ್ತಿ–ಪುರುಷರ ಪರಿಕಲ್ಪನೆಗಳು ಅನೇಕ ರೀತಿಯಾಗಿ ಕಂಡುಕೊಳ್ಳಬಹುದು, ಸಮುದಾಯದ ಹಿನ್ನೆಲೆಯಲ್ಲಿ ಆಚರಣಾ ಸಂಬಂಧದಲ್ಲಿ ವಿವಾಹ ಶಾಸ್ತ್ರಗಳಲ್ಲಿ ಭಿನ್ನತೆಗಳನ್ನು ಗುರುತಿಸಬಹುದಾಗಿದೆ. ಇವೆಲ್ಲವುಗಳು ಸಾಂಸ್ಕೃತಿಕ ಸ್ಥಿತ್ಯಂತರಗಳ ಜವಾಬ್ದಾರಿಯಲ್ಲಿ ನೆಲೆಗೊಳ್ಳುತ್ತವೆ. ಈ ಮೇಲಿನ ಎಲ್ಲಾ ಪರಿಕಲ್ಪನೆಗಳಲ್ಲಿ "ಮಹಿಳೆಗೆ ಪುರುಷ ಪ್ರಧಾನ ಮೌಲ್ಯಗಳ ಸಮಾಜದಲ್ಲಿ ಗುರುತಿಸಿಕೊಳ್ಳುವ ಅನಿವಾರ್ಯತೆಯುಂಟಾಗಿದೆ. ಪುರುಷ ಪ್ರಧಾನ ಸಮಾಜವು ಹೆಣ್ಣಿನ ಬದುಕನ್ನು ಅಧೀನವಾಗಿಸಿಕೊಂಡು ಸಮಾಜ ವ್ಯವಸ್ಥೆಯ ಎಲ್ಲಾ ಹೇರಿಕೆ ಮತ್ತು ನಿರ್ಧಾರಗಳಿಂದಾಗಿ ಅಸಹನೆಯುಂಟಾಗಿ ತನ್ನ ಅಸ್ತಿತ್ವಕಾಗಿ ಹಾತೋರಿಯುತ್ತಾಳೆ"[೨೭]

ಇಲ್ಲಿ ಗುರುತಿಸುವ ಸ್ತ್ರೀ–ಪುರುಷರ ಪರಿಕಲ್ಪನೆ ಆಯಾ ಸಮಾಜದ ನಡುವಿನ ಸಂಬಂಧ, ಪಾತ್ರ ನಡಾವಳಿಕೆಯನ್ನು ಗುರುತಿಸುವುದಾಗಿದೆ. ಇದರಿಂದಾಗಿ ಸ್ತ್ರೀ–ಪುರುಷರ ನಡುವಿನ ವ್ಯಾತ್ಯಾಸ

ಅಸಮಾನತೆಗಳು ಕಾರಣವಾಗಬಹುದು, ಲಿಂಗತಾರತಮ್ಯಕ್ಕು, ಲಿಂಗ ಸಮಾನತೆಗೂ ಬುನಾದಿಯಾಗಬಹುದು. ಪುರುಷ ಸಂಸ್ಕೃತಿ ತನ್ನಿಚ್ಛೆಯಂತೆ ಸಾಮಾಜಿಕ ವ್ಯವಸ್ಥೆ ರೂಪಿಸತೊಡಗಿದಾಗ ಘರ್ಷಣೆಗಳು, ಸಂಘರ್ಷಗಳು ಬೆಳೆಯುತ್ತಾ ಹೋಗುತ್ತವೆ. ಆದುದರಿಂದ ಸ್ತ್ರೀ–ಪುರುಷ ಪರಿಕಲ್ಪನೆ ಮುಂದೆ ಬೇರೆ ಬೇರೆ ಕ್ಷೇತ್ರಗಳಲ್ಲಿ ಬೇರೆ ಬೇರೆ ನೆಲೆಯಲ್ಲಿ ರೂಪುಗೊಳ್ಳುತ್ತದೆ ಇಲ್ಲಿಗೆ ಹೊಸ ಸಮಾಜದ ನಿರ್ಮಾಣಕ್ಕೆ ಈ ಪರಿಕಲ್ಪನೆ ಮೂಲ ಪ್ರೇರಕ ಮತ್ತು ಕಾರಕವಾಗುತ್ತದೆ.

ಸ್ತ್ರೀ–ಪುರುಷರ ಕಲ್ಪನೆ ಅನಾದಿ ಮತ್ತು ಅನಂತವಾಗಿದೆ. ಶಿವ–ಶಿವೆಯರಿಂದ ಹಿಡಿದು ಆಡಂ ಮತ್ತು ಈವ್ ವರೆಗೆ ಅನೇಕ ಕಥೆಗಳು ಕಲ್ಪನೆಗಳು ಈ ಸಂಬಂಧಗಳ ಸುತ್ತ ಸುತ್ತುತ್ತಿವೆ. ಆಡಂ ಮತ್ತು ಈವ್ ಇವರ ಸಂಬಂಧದಲ್ಲಿ ನಿಯಮ ಮೀರಿ ಪಾಪ ಮಾಡುವಂತ ಪ್ರಜ್ಞೆವಿದ್ದರೆ ಶಿವ ಮತ್ತು ಶಿವೆಯರ ಸಂಬಂಧದಲ್ಲಿ ಇಡೀ ವಿಶ್ವದ ಸೃಷ್ಟಿಯನ್ನು ಕಾಣಬಹುದಾಗಿದೆ.

“ಆಡಂ ಮತ್ತು ಈವ್‌ರ ಸಂಬಂಧ ಇಂದ್ರಿಯ ಜನ್ಯ ಕಾಮವಾದರೆ ಶಿವ–ಶಿವೆಯರ ಸಂಬಂಧ ಇಂದ್ರಿಯಾತೀತರ ಬಯಲು ಬಯಲಿನ ಸಂಗಮವಾಗುತ್ತದೆ”[೨೮]ರಸ ಋಷಿ ಕುವೆಂಪು ‘ನಾನಿನಗೆ ನೀನನಗೆ ಜೇನಾಗುವ ರಸ ದೇವಗಂಗೆಯೊಳು ಮೀನಾಗುವ... ಶಿವನಾಗುವ ಶಿವೆಯಾಗುವ ರತಿರೂಪಿ ಭಗವತಿಗೆ ಮುಡಿಪಾಗುವ....’ ಎಂದೆ ಗಂಡು ಹೆಣ್ಣಿನ ಸಮಾನತೆ ಕುರಿತು ವರ್ಣಿಸುತ್ತಾರೆ.

ಗಂಡು ಹೆಣ್ಣಿನ ಸಂಬಂಧ ಕೇವಲ ಲೋಕದ ದೃಷ್ಟಿಗೆ ಮಾತ್ರ ನಿಲುಕಿದ್ದಲ್ಲ. ಅದೊಂದು ಲೋಕದ ಕತ್ತಲು–ಬೆಳಕಿನ ಒಡನಾಟವಾಗಿದೆ ಒಳಿತು ಕೆಡಕುಗಳ ತಾಕಲಾಟವಾಗಿದೆ. ನೋವು–ನಲಿವುಗಳ ಹೋರಾಟವಾಗಿದೆ. ಈ ರೀತಿಯ ಹೋರಾಟ ಒಡನಾಟ ಪರಸ್ಪರ ನಂಬಿಕೆ ಪ್ರೀತಿಯೇ ಲೋಕಾತೀತವಾಗಿ ಪರಿವರ್ತನೆಯಾಗುತ್ತದೆ.

ಸ್ತ್ರೀ–ಪುರಷರ ಪರಿಕಲ್ಪನೆಯು ಕನ್ನಡ ಸಾಹಿತ್ಯದಿಂದಲೂ ಕಂಡುಬರುತ್ತದೆ ರಾಮ–ಸೀತೆ, ರಾವಣ–ಮಂಡೋದರಿ, ಲಕ್ಷ್ಮಣ– ಊರ್ವಶಿ ಮಹಾಶ್ವೇತ, ಕಾದಂಬರಿ ಮೊದಲಾದ ಸಂಬಂಧಗಳು ಅನಾವರಣಗೊಳ್ಳುತ್ತಾ ಹೋಗುತ್ತವೆ. ಈ ಪಾತ್ರಗಳೆಲ್ಲಾ ಕೇವಲ ಸ್ತ್ರೀ–ಪುರುಷ ಕಲ್ಪನೆಯಲ್ಲಿ ಸಮಾಜಕ್ಕೆ ಒಂದು ಅರಿವಿನ ಕಲ್ಪನೆಯಾಗಿದೆ. ಕನ್ನಡ ಸಾಹಿತ್ಯದ ಭಾಗವಾಗಿರುವ ಮೌಖಿಕ ಸಾಹಿತ್ಯದಲ್ಲಿಯೂ ಪರಂಪರಾಗತವಾಗಿ ಬಂದ ಸ್ತ್ರೀ–ಪುರುಷರು ಸಮಾಜದ ಜೀವನದಲ್ಲಿ ತಮ್ಮದೇ ಬದುಕಿನ ಕ್ರಮ ಸ್ಥಿತಿಗತಿಗಳು ಒಳಗೊಂಡಿರುತ್ತಾರೆ.

ಜನರ ಬದುಕಿಗೆ ಮಹತ್ವದ ಮಾದರಿಯಂತಿರುವ ಸಾಹಿತ್ಯ ಕಲೆಯ ನಡುವಲ್ಲಿ ಮಾನವನು ಅನೇಕ ಸೃಜನಶೀಲತೆಗಳ ಮೂಲಕ ತನ್ನ ಸಂಸ್ಕೃತಿಯನ್ನು ಅಭಿವ್ಯಕ್ತಪಡಿಸುತ್ತಾನೆ. ಸ್ತ್ರೀ–ಪುರುಷರ ಅಧ್ಯಯನ ಆಕರಗಳಾದ ಗಾದೆ, ಒಗಟು, ಒಡಪು, ನಂಬಿಕೆ, ಸಂಪ್ರಾದಾಯ, ಕಥೆ, –ಕಾವ್ಯ, ಮಹಾಕಾವ್ಯಗಳು ಸೃಷ್ಠಿಯಲ್ಲಿ ಇವರ ಪಾತ್ರ ಅನನ್ಯವಾಗಿದೆ. ಇವೆಲ್ಲವುದರ ಹಿನ್ನೆಲೆಯಲ್ಲಿ ಸ್ತ್ರೀಯ ಸ್ವಾಭಾವ, ಗುಣಲಕ್ಷಣಗಳನ್ನು ಪುರುಷ ಆಲೋಚನೆಯೇ ನಿಯಂತ್ರಿಸುತ್ತದೆ. “ಮೌಖಿಕ ಪರಂಪರೆಯಲ್ಲಿ

ಪುರುಷರ ಸ್ವಾಹಿತಾಸಕ್ತಿಗೆ ತಕ್ಕಂತೆ ಸ್ತ್ರೀಯರ ಜೀವನ ಆರೋಪಿತ ಕಲ್ಪನೆಗಳಾಗಿವೆ. ಯಜಮಾನ ಸಂಸ್ಕೃತಿಯ ಸ್ಥಾಪಿತ ಮೌಲ್ಯಗಳಾದ ಪಾತಿವ್ರತ್ಯ ಮಾತೃತ್ವ ಶೀಲ, ತ್ಯಾಗ, ವಿಧೇಯತೆ ಮುಂತಾದ ಸ್ತ್ರೀ ಸಂಬಂಧಿತ ಏಕಮುಖಿ ಅದರ್ಶದ ಸುಳಿಗಳು ಹೆಣ್ಣಿನ ಬದುಕನ್ನು ದುರಂತವಾಗಿಸಿದ್ದಕ್ಕೆ ಮೌಖಿಕ ಕಾವ್ಯಗಳು ಉದಾಹರಣೆಯಾಗಿ ನಿಲ್ಲುತ್ತವೆ"[೨೯] ಮೌಖಿಕ ಕಾವ್ಯ ಬಹುಭಾಗವು ಸ್ತ್ರೀ ಸಂವೇದನೆಗಳನ್ನೇ ಒಳಗೊಂಡಿದೆ. ಏಕೆಂದರೆ ಇಲ್ಲಿ ಹೆಣ್ಣಿನ ನೋವು ಸಂಕಟಗಳೇ ಸಾಹಿತ್ಯದ ವಸ್ತುವಾಗಿರುವುದನ್ನು ಕಾಣಬಹುದು. ಅನೇಕ ಮಹಿಳೆಯರು ತಮ್ಮ ನೋವನ್ನು ವರ್ಣಿಸುವ ಸಂದರ್ಭದಲ್ಲಿ ಅವೇಶಕ್ಕೆ ಒಳಗಾಗಿ ಕಾವ್ಯಗಳು ಹೊಸ ರೂಪವನ್ನೇ ಪಡೆಯುತ್ತವೆ.

ಮೌಖಿಕರ ಬದುಕಲ್ಲಿ ಅಗಾಧವಾದ ಸ್ತ್ರೀ–ಪುರುಷರ ಸಂಬಂಧ ಚಿತ್ರಣವಿದೆ. ಬಹುತೇಕ ಬದುಕಿನ ಎಲ್ಲ ಸ್ತರಗಳಲ್ಲಿ ಹೆಣ್ಣು ಗಂಡನೊಡನೆ ಸಮನಾಗಿಯೆ ಬಾಳುತ್ತಾಳೆ. ಆದರೆ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ–ಪುರುಷರ ಅಧೀನಳು, ಪುರುಷರು ದೈವತ್ವಕ್ಕೇರಿದರೆ ಸ್ತ್ರೀಯರು ಆ ದೈವಕ್ಕೆ ಕಾರಣರಾಗಿರುತ್ತಾರೆ. ಕೆಲವು ಕಡೆ ಸ್ತ್ರೀ–ಪುರುಷ ಎರಡು ಕಲ್ಪನೆಗಳು ದೈವೀಕರಣಗೊಂಡು ಪುರಾಣ ಸೃಷ್ಟಿಯಾಗುತ್ತವೆ.

ಮೌಖಿಕ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಸ್ತ್ರೀ–ಪುರುಷರ ನಡುವೆ ಅನೇಕ ಭಿನ್ನತೆಗಳಿವೆ. ಸ್ತ್ರೀ–ಪುರುಷರು ಬೇರೆ ಬೇರೆ ವಿಷಯಗಳಿಂದ ಸ್ವ ವಿರೋಧ ಹಾಗೂ ದ್ವಂದ್ವಗಳಿಂದ ಕೂಡಿದ್ದಾರೆ "ಭಾರತೀಯ ಶಿಷ್ಟ ಸಾಹಿತ್ಯದಲ್ಲಾದರೆ ಸ್ತ್ರೀ–ಪುರುಷ ಕಲ್ಪನೆಗಳ ಕುರಿತ ಸಂಬಂಧವು ವೈಚಾರಿಕತೆಯು ಸಂಪೂರ್ಣವಾಗಿ ಪುರುಷಕೇಂದ್ರಿತವಾಗಿದ್ದು, ಆ ಸಾಹಿತ್ಯ ಸ್ತ್ರೀಯ–ತ್ಯಾಗ ಸಂಯಮ ಆತ್ಮ ಸಮರ್ಪಣೆ ಇವುಗಳನ್ನು ವೈಭವೀಕರಿಸಿ ಆ ಮೂಲಕ ಸ್ತ್ರೀ– ಸುತ್ತಾ ಪಾತಿವ್ರತ್ಯವೆಂಬ ಪರಿಕಲ್ಪನೆಯ ಜಾಲವನ್ನೇ ನೇಯುತ್ತದೆ. ಇಂತಹ ವೈಚಾರಿಕತೆಯ ಮೂಲ ಮಾದರಿ ರಾಮಾಯಣದ ಸೀತೆ ಮತ್ತು ಅವಳ ಜೊತೆಗಿರುವವರು ಮಂಡೋದರಿ, ದ್ರೌಪದಿ, ಶಕುಂತಲೆ ಇತ್ಯಾದಿ. ಈ ಮೂಲ ಮಾದರಿಯ ಹೋಲಿಕೆಯಲ್ಲಿ ಜಾನಪದ ವಾಙ್ಮಯದಲ್ಲಿ ಸ್ತ್ರೀಗೆ ಸ್ವಂತ ಧ್ವನಿಯಿದೆ ಆತ್ಮಗೌರವವಿದೆ. ಅದು ಒಂದು ಘಟ್ಟದವರೆಗೆ. ಆನಂತರ ಅವಳೂ ಈ ಪಾತಿವ್ರತ್ರದ ಜಾಲದಲ್ಲಿ ತನ್ನನ್ನು ತಾನು ಬಂಧಿಸಿಕೊಳ್ಳುತಾಳೆ"[೩೦] ಅದೇ ರೀತಿಯಾಗಿ ಮೌಖಿಕ ಕಾವ್ಯಗಳು ಸಹ ಪುರುಷ ಪರವಾಗಿಯೇ ಹೆಚ್ಚಾಗಿವೆ. ಪುರುಷನನ್ನು ಸಾಂಸ್ಕೃತಿಕ ವೀರನನ್ನಾಗಿಸಿ ಅವನ ವೀರತ್ವವನ್ನೆ ವೈಭವೀಕರಿಸುತ್ತಾ ಸ್ತ್ರೀ–ತನ್ನೆಲ್ಲಾ ಶಕ್ತಿಯನ್ನು ಪುರುಷನಿಗೆ ನೀಡುತ್ತಾ ಎರಡನೇ ಸ್ಥಾನದಲ್ಲಿ ನಿಲ್ಲುತ್ತಾಳೆ, ಪುರುಷನು ಸ್ತ್ರೀ–ಶಕ್ತಿಯನ್ನೆಲ್ಲಾ ತನ್ನದಾಗಿಸಿಕೊಂಡು ಅವಳನ್ನು ಅಧೀಳನ್ನಾಗಿ ಮಾಡಿಕೊಂಡು ಬರುತ್ತಿದ್ದಾನೆ. ಈ ಲಕ್ಷಣಗಳನ್ನೇ ಮಾದೇಶ್ವರ ಮಂಟೇಸ್ವಾಮಿ ಕಾವ್ಯಗಳಲ್ಲಿ ಕಾಣಬಹುದಾಗಿದೆ.

"ಮೌಖಿಕ ಕಾವ್ಯಗಳಲ್ಲಿ ತೆರೆದುಕೊಂಡ ಮಹಿಳಾ ಜಗತ್ತು ಮತ್ತು ಅಲ್ಲಿ ಅಭಿವ್ಯಕ್ತಿಸುವ ಪಾತಿವ್ರತ್ಯದ ಮೌಲ್ಯಗಳನ್ನು ಗುರುತಿಸುವುದರ ಜೊತೆಗೆ ಸಾಮಾಜಿಕ ವ್ಯವಸ್ಥೆಯ ಕಟ್ಟುಪಾಡುಗಳನ್ನು ಸ್ತ್ರೀ ಮೇಲೆ ಹೇರುವ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯು ತನ್ನ ಅಧಿಪತ್ಯವನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಿದ ಪರಿಯನ್ನು ಗುರುತಿಸುವುದು ಇಲ್ಲಿನ ಉದ್ದೇಶವಾಗಿದೆ"[೩೧] ಈ ಕಾವ್ಯಗಳಲ್ಲಿ ಪರಂಪರಾಗತವಾಗಿ

ನಡೆದುಕೊಂಡು ಬಂದ ಆಚಾರ ವಿಚಾರಗಳ ಬದಲಾವಣೆಗಳನ್ನ ಸ್ತ್ರೀ-ಪ್ರತಿನಿಧಿಸುತ್ತಾಳೆ. ತಮ್ಮ ಬದುಕಿನುದ್ದಕ್ಕೂ ಪುರುಷ ಕೇಂದ್ರಿತ ವ್ಯವಸ್ಥೆಯನ್ನ ಒಪ್ಪಿಕೊಂಡು ಬರುತ್ತಾರೆ. ಬದಲಾವಣೆಯ ತುಡಿತಕ್ಕೆ ಒಳಗಾದರೂ ಅಸಮಾನ, ಅಧಿಕಾರಾಧಾರಿತ ಸ್ತ್ರೀ ಪುರುಷ ಸಂಬಂಧದ ದುರಂತವನ್ನು ಕಾವ್ಯಗಳಲ್ಲಿ ಕಾಣಬಹುದು. ಪುರುಷ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಲಾಗದ ಸ್ತ್ರೀ- ಕೆಲ ಸಂದರ್ಭದಲ್ಲಿ ಪ್ರತಿಭಟಸಿದರೂ ದುರಂತ ನಾಯಕಿಯಾಗಿಯೇ ಉಳಿಯುತ್ತಾಳೆ.

ದಟ್ಟರಣ್ಯದ ಹಲವು ಬುಡಕಟ್ಟುಗಳ ನಡುವೆ ಆರಂಭವಾಗಿ ಒಂದು ಸಾಂಸ್ಕೃತಿಕ ಮಂಥನವಾಗಿ ರೂಪಗೊಂಡು ಅದೂ ಜನಾಂಗಗಳ ಮೇಲೆ ಬೆಳಕು ಚೆಲ್ಲುವ ಮಲೆಮಾದೇಶ್ವರ ಕಾವ್ಯದಲ್ಲಿ ಒಕ್ಕಲು ಹಾಗೂ ಶಿಶುಮಕ್ಕಳನ್ನು ಪಡೆಯುವ ಕ್ರಿಯೆ ಒಟ್ಟೊಟ್ಟಿಗೆ ನಡೆಯುತ್ತದೆ. ಸಾಮಾನ್ಯವಾಗಿ ಮಾದಪ್ಪನ ವ್ಯವಹಾರಗಳು ಕೆಳವರ್ಗದ ಸ್ತ್ರೀ-ಪುರುಷರ ಪರಿಕಲ್ಪನೆಗಳೊಂದಿಗೆ ಸಾಗುವುದನ್ನು ಕಾವ್ಯದಲ್ಲಿ ಕಾಣಬಹುದು. ಮಾದೇಶ್ವರನ ಕಾವ್ಯದಲ್ಲಿ ಮಾದೇಶ್ವರನ ಬೆಟ್ಟಕ್ಕೆ ಅಂದರೆ ಅವನ ಸೇವೆಗೆ ಬರುವ ಗಂಡು-ಹೆಣ್ಣುಗಳು ಸರಸವಾಡಬಾರದು. ಬ್ರಹ್ಮಚರ್ಯತ್ವವನ್ನು ಪಾಲಿಸಬೇಕು. ತಿಳಿದು ತಪ್ಪಿ ನಡೆಯುವ ಸ್ತ್ರೀ-ಪುರುಷರನ್ನು ಹುಲಿ ಕುಕ್ಕಿ ತಿನ್ನುತ್ತದೆ ಎನ್ನುವ ಪ್ರತೀತಿ ಇದೆ. ಇದು ಮಾದೇಶ್ವರ ಕಾವ್ಯದ ಸ್ತ್ರೀ-ಪುರುಷರ ನಿರ್ಮಲ ಗುಣವನ್ನು ಎತ್ತಿ ತೋರಿಸುತ್ತದೆ.

ಮಲೆಮಾದೇಶ್ವರನ ಕಾವ್ಯದಲ್ಲಿ ಜಗತ್ತಿಗೆ ಮೂಲವಾದಳು ಸ್ತ್ರೀ, ಆದಿಶಕ್ತಿ ಎಂದು ನಂಬಲಾಗಿದೆ. ಈ ಕಲ್ಪನೆ ಅನಾದಿಕಾಲದಿಂದಲೂ ಇದ್ದರೂ ಸ್ತ್ರೀ ಕೃಷಿಯಲ್ಲಿ ತೊಡಗಿದಾಗ ಮಾತೃದೇವತಾರಾದನೆಯು ಜಾರಿಗೆ ಬಂದಿತು. ಆದಿಶಕ್ತಿಯು ಬ್ರಹ್ಮ ವಿಷ್ಣು, ಶಿವ ತ್ರಿಮೂರ್ತಿಗಳನ್ನು ಹುಟ್ಟಿಸಿ ಆ ಮಕ್ಕಳೇ ತನಗೆ ಪುರುಷರಾಗಬೇಕೆಂದಾಗ ಇದಕ್ಕೆ ಒಪ್ಪದ ತ್ರಿಮೂತ್ರಿಗಳು ಸಂವಾದಕ್ಕೆ ಇಳಿಯುತ್ತಾರೆ. ಇಲ್ಲಿ ನಡೆಯುವ ಸಂವಾದವು ಮಾತೃಪ್ರಧಾನ ಸಂಸ್ಕೃತಿ ಅಂದರೆ ಸ್ತ್ರೀ-ಪುರುಷರ ನಡುವಿನ ಸಂಘರ್ಷವನ್ನು ಸೂಚಿಸುತ್ತದೆ. ಇಲ್ಲಿ ಪ್ರಾರಂಭದಲ್ಲಿ ಆದಿಶಕ್ತಿ ಗೆದ್ದರೂ ಮಾದೇಶ್ವರರು ತಮ್ಮ ತರ್ಕದಿಂದ ಆದಿಶಕ್ತಿಯ ಎಲ್ಲ ವಿದ್ಯೆಗಳನ್ನು ಕೈವಶ ಮಾಡಿಕೊಂಡು ಆಕೆಯನ್ನು ನಾಶಗೊಳಿಸುತ್ತಾರೆ. ಅಂದರೆ ಈ ಕಾವ್ಯದ ಮೂಲಕ ಸ್ತ್ರೀಗೆ ಸಂಬಂಧಿಸಿದ ಸಮಾಜದ ಸತ್ತ್ವವನ್ನು ಪುರುಷ ಸಮಾಜ ವಶಪಡಿಸಿಕೊಂಡಿದ್ದನ್ನು ನೋಡಬಹುದಾಗಿದೆ. ಈ ಕಾವ್ಯದಲ್ಲಿ ಸಂಕಮ್ಮನ ಸಾಲಿನ ನಾಯಕಿ ಸಂಕಮ್ಮನು ಸ್ತ್ರೀ ಕುಟುಂಬದ ಪ್ರತೀಕವಾಗಿ ಕಂಡು ಬಂದರೆ ಬೇವಿನಟ್ಟಿ ಕಾಳಮ್ಮನ ಸಾಲಿನಲ್ಲಿ ಬೇವಿನಟ್ಟಿಕಾಳಮ್ಮ ಸ್ತ್ರೀ ಮೂಲ ಕುಟುಂಬದ ನಾಶದ ಪ್ರತೀಕವಾಗಿದ್ದಾಳೆ.

ಸೋಲಿಗರ ನೀಲೇಗೌಡ ದುಂಡೇಗೌಡನ ಮಗಳು ಸತ್ಯಶರಣೆ ಸಂಕಮ್ಮನನ್ನು ತಾನೇ ಮೆಚ್ಚಿ ಮದುವೆಯಾಗಿರುತ್ತಾನೆ. ನೀಲಯ್ಯನು ಚಲುವಿ ಸಂಕಮ್ಮನನ್ನು ಬಿಟ್ಟು ಒಂಬತ್ತು ತಿಂಗಳು ಕಾಲ ಕುಲದ ಬೇಟೆಗೆ ಹೊರಡಬೇಕಾದಾಗ ಸಂಕಮ್ಮ ಒಬ್ಬಳನ್ನು ಬಿಟ್ಟು ಹೋಗಲು ಆತಂಕ ಪಟ್ಟು ತಾನು ಬೇಟೆಯಿಂದ ಹಿಂತಿರುಗಿ ಬರುವುದರೊಳಗೆ ಯಾರಿಗಾದರು ಒಲಿದು ಬಿಟ್ಟರೆ ಎಂದು ಅವಳ ಶೀಲದ ಬಗ್ಗೆ ಶಂಕಿಸಿ ಭಾಷೆ ಕೊಡುವಂತೆ ಸಂಕಮ್ಮನನ್ನು ಒತ್ತಾಯಿಸುತ್ತಾನೆ. ಯಾವ ತಪ್ಪು ಮಾಡದ ಸಂಕಮ್ಮ ಭಾಷೆ ಕೊಡಲು ನಿರಾಕರಿಸುತ್ತಾಳೆ.

ನೀಲಯ್ಯ- “ನಾವು ಬೇರೆ ಮನೆ ಮಾಡ್ಕಂಡು ಒಂದು ವರ್ಷವಾಯ್ತು
ಇಂಥಾ ಹಗೆಯವರಿದ್ದಾರೆ
ಭಾವ ಮೈದ್ದೀರು ಅತ್ತೆಯನ್ನು ಭಾವನ ಮಕ್ಕು ಮಡದಿ
ಆದ್ದರಿಂದ ಒಂದು ಮನೇಲಿ ಬಿಟ್ಟು ಹೋಗಲಾರಿ
ನಾನು ಹೆಜ್ಜೆಯ ಮಲೆಗೆ ಹೋಗ ಬೇಕಾದ್ರೆ
ನನಗೆ ಬಲಗೈ ಭಾಷೆ ಮಾಡ್ಡೆಣ್ಣೆ
ನನ್ನ ಹೆಜ್ಜೇನು ಮಲೆಗೆ ಕೆಳುಗೆಣ್ಯೆ
ಸಂಕಮ್ಮ: ಎಂಥ ಮಾತು ಹೇಳ್ತಾ ಇದ್ದೀರಿ ಯಜಮಾನ
ಏಕಾಂತವಾಗಿ ನನ್ನ ಭಾಷೆ ಕೇಳ್ತಾ ಇದ್ದೀರಲ್ಲಾ
ಕಳನಿಲ್ಲ ಕೆಳವರಿಗೆ ಒಳಗಾಗನಿಲ್ಲ
ಪರಪುರುಷರ ಕಣ್ಣೆತ್ತು ನೋಡ್ನಿಲ್ಲ

ಯಜಮಾನರೆ ನಾನು ಭಾಷೆ ಕೊಡಬೇಕಾ ನಿಮಗೆ”[೩೨]ಎಂದು ನಿರಾಕರಿಸುತ್ತಾಳೆ, ಪುರುಷ ತನ್ನ ಸ್ತ್ರೀ ಗೆ ಅನಾದಿಕಾಲದಿಂದಲೂ ಭಾಷೆ, ಪ್ರಮಾಣಗಳೆಂಬ ಕಟ್ಟಳೆಯಲ್ಲಿಯೇ ಕೂಡಿಹಾಕಿದ್ದಾನೆ. ಸ್ತ್ರೀ ಮತ್ತು ಪುರುಷರು ಒಟ್ಟಿಗೆ ಕೂಡಿ ಬಾಳುವ ಅಗತ್ಯತೆ ಇದ್ದರು ಭೌತಿ ಮತ್ತ ಮಾನಸಿಕವಾಗಿ ಪುರುಷನ ಧೋರಣೆಗಳನ್ನೆ ಅನುಸರಿಸಬೇಕು ಎಂಬುದನ್ನು ನೀಲಯ್ಯನ ವ್ಯಕ್ತಿತ್ವದಲ್ಲಿ ಕಾಣಬಹುದು.

“ಸಂಕಮ್ಮನಿಗೆ ಕೈ ಭಾಷೆ ಕೊಡುವುದು ಬರಿದು ಭಾಷೆಯ ಮಾತಿನ ಪ್ರಶ್ನೆಯಲ್ಲ. ಅದು ಅವಳ ಅಸ್ತಿತ್ವವನ್ನು ಸ್ವಾಂತ್ರ್ಯವನ್ನು ಕಳೆದುಕೊಳ್ಳುವ ಪ್ರಶ್ನೆ, ಕೈ ಭಾಷೆ ಕೊಡುವುದು ತನ್ನ ಸ್ವಾಭಿಮಾನಕ್ಕೆ ಅವಮಾನ ಎನ್ನುವುದರ ಜತೆಗೇನೆ ಅದು ತನ್ನ ಆಂತ್ಮಸಾಕ್ಷಿಗೆ ಮಾಡುವ ಅಪಚಾರ ಎಂದು ಆಕೆ ಭಾವಿಸುತ್ತಾಳೆ”[೩೩]ಪಶುಪಾಲನೆಯ ಹಂತದಲ್ಲಿ ಇದ್ದ ನೀಲಯ್ಯ ಪುರುಷ ಪ್ರಧಾನ ಸಮಾಜದ ಪ್ರತಿನಿಧಿಯಾದರೆ. ಸಂಕಮ್ಮ ಸ್ತ್ರೀಮೂಲ ವ್ಯವಸ್ಥೆಯ ಪ್ರತೀಕವಾಗಿ ಕಂಡುಬರುತ್ತಾಳೆ “ಭಾಷೆ ಕೊಡಲು ನಿರಾಕರಿಸಿದಳೆಂಬ ಒಂದೇ ಕಾರಣಕ್ಕಾಗಿ ಸಂಕಮ್ಮನನ್ನು ನೀಲಯ್ಯ ಮಾಟದ ಮೂಲಕ ಮಂಡಲವನ್ನು ಬರೆದು ಬಂದಿಸುತ್ತಾನೆ, ಈ ಕೃತ್ಯ ಪುರುಷ ನಿರ್ಮಿತ ವ್ಯವಸ್ಥೆಯಲ್ಲಿ ಗಂಡು ಹೆಣ್ಣಿನ ಸ್ವಾತಂತ್ರ್ಯ, ಆದರ್ಶವನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡು, ಹೆಣ್ಣಿನ ಪಾತಿವ್ರತ್ಯದ ರಕ್ಷಣೆಗೆ ಗಂಡು ಅನುಸರಿಸುವ ಮಾರ್ಗ ಆಕೆಗೆ ಹೊರ ಜಗತ್ತಿನ ಸಂಪರ್ಕವನ್ನು ಕಡಿದು ಕಟ್ಟೆಚ್ಚರದಲ್ಲಿ ಬಂಧಿಸುವುದಾಗಿದೆ”[೩೪]

ಮಾದೇಶ್ವರನ ಕಾವ್ಯದಲ್ಲಿ ಬರುವ ಬೇವಿನಟ್ಟಿ ಕಾಳಮ್ಮನಸಾಲು ಸಂಕಮ್ಮನ ಸಾಲಿಗಿಂತ ವಿರುದ್ದ ದಿಕ್ಕನಲ್ಲಿದ್ದು ಕಾಳಮ್ಮ ಇಲ್ಲಿ ಪುರುಷ ಪ್ರಧಾನ ವ್ಯವಸ್ಥೆಗೆ ಅವಕಾಶವನ್ನು ನೀಡದೆ ಅವನ ಪ್ರಾಮುಖ್ಯತೆಯನ್ನು ಗೌಣಮಾಡುವುದರ ಮೂಲಕ ಸ್ತ್ರೀ ಪ್ರಧಾನ ಕುಟುಂಬದ ಲಕ್ಷಣಗಳನ್ನು ಎತ್ತಿ ತೋರಿಸುತ್ತಾಳೆ.

ಮಾದೇಶ್ವರ: "ಏಳುಮಲೆ ಕೈಲಾಸದಲ್ಲಿ
ಬೇಡಗಂಪಣದ ಮಲೆಯೊಳಗೆ
ಏಳುಮಲೆ ಮಾದೇಶ್ವರ ಅಂತೆಹಿ
ಏಕವಾಗಿ ನೆಲೆಗೊಂಡವರೇ
ಆ ಮಾದಪ್ಪನೊ ಎಳ್ಳು ಮಜ್ಜನಕ್ಕೆ ಬಂದಿದ್ದೀನಿ ಕಾಳಮ್ಮ
ನಿನ್ನ ಕೋಟಾರದಲ್ಲಿರುವಂತ
ಮುನ್ನೂರು ಮೂವತ್ತು ಕಂಡ್ಗ ಕೊಡಬೇಡ
ಕಡೆವಲ್ಗಿ ಉಡುರೋಗುತ್ತಲ್ಲಿ
ಅದು ಮೂರು ಕೊಳ್ಗ ಎಳ್ಳು ತಂದು
ನನ್ನ ಮುತ್ತಿನ ಜೋಳಿಗ್ಗೆ ನೀಡಿ ಬಿಟ್ಟರೆ"[೩೫] ಎಂದು
ಕೇಳುತ್ತಾನೆ ಮಾದಪ್ಪ

ಸಂಕಮ್ಮ ಮೂಲಕ ಹೆಣ್ಣಿಗೆ ಇರಬೇಕಾದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿ ಪುರುಷನು ಸ್ತ್ರೀಯ ಭಕ್ತಿ, ಮಾನಸಿಕ ಶಕ್ತಿಯ ಮುಂದೆ ಸೋಲುತ್ತಾನೆ ಎಂಬುದನ್ನು ನೀಲಯ್ಯನ ಮೂಲಕ ತೋರಿಸಲಾಗಿದೆ. ಕಾಳಮ್ಮ ಹೆಣ್ಣಿನ ಒಡೆತನಕ್ಕಾಗಿ ಹೋರಾಡಿ ಸೋಲುತ್ತಾಳೆ ಆದರೆ ಕಾಳಮ್ಮನ ಅಧಿಕಾರ ಕೇವಲ ಪುರುಷರಿಗಷ್ಟೇ ಅಲ್ಲಾ ಎಂಬುದನ್ನು ಮಾದೇಶ್ವರನೊಂದಿಗೆ ಸಂಘರ್ಷ ಮಾಡಿ ಗೆಲ್ಲುತ್ತಾಳೆ. "ಒಟ್ಟಾರೆ ಕಾಳಮ್ಮನ ಪ್ರಸಂಗ ಪುರುಷ ಪ್ರಧಾನ ಸಂಸ್ಕೃತಿ ಮಾತೃ ಪ್ರಧಾನ ಸಮಾಜದ ಮೇಲೆ ಸಾಧಿಸಿದ ಗೆಲುವಿನ ಸಂಕೇತವಾಗಿ ಉಳಿಯುತ್ತದೆ"[೩೬] ಸಮಾಜದಲ್ಲಿ ಇರುವ ಪ್ರತಿಷ್ಠಿತರ ಸೋಗಿನಲ್ಲಿ ಪುರುಷನು ತನ್ನ ಸ್ವಹಿತಾಸಕ್ತಿಗಾಗಿ ದೇವರು, ಧರ್ಮ, ಸಂಪ್ರದಾಯಗಳ ಹೆಸರಿನಲ್ಲಿ ಶೋಷಣೆಗೆ ಒಳಪಡಿಸಿದ್ದಾನೆ.

ಮಂಟೇಸ್ವಾಮಿ ಕಾವ್ಯದಲ್ಲಿ ಸ್ತ್ರೀ-ಪುರುಷರ ಪರಿಕಲ್ಪನೆ ವಿಶೇಷವಾಗಿ ಕಂಡು ಬರುತ್ತದೆ. ಮಂಟೇಸ್ವಾಮಿ ವೈರಾಗ್ಯ ಮೂರ್ತಿಯಾಗಿದ್ದು, ಹೆಣ್ಣಿನ ಮೇಲಿನ ವ್ಯಾಮೋಹವನ್ನು ಸಂಪೂರ್ಣವಾಗಿ ತ್ಯಜಿಸಿ ಜನರ ದೃಷ್ಟಿಯಲ್ಲಿ ಎಲ್ಲ ದೇವತೆಗಳಿಗಿಂತ ಮೇಲ್ತರದಲ್ಲಿ ನಿಂತವರು ಮಂಟೇಸ್ವಾಮಿ. ಎಷ್ಟೊ ದೇವರುಗಳು ನಾಲ್ಕಾರು ಜನ ಹೆಂಡತಿಯರನ್ನು ಹೊಂದಿರುವಾಗ ಮಂಟೇಸ್ವಾಮಿಗೆ ಹೆಣ್ಣನ್ನು ಕುರಿತಂತೆ ಇರುವ ನಿಲುವಿನಲ್ಲಿ ಆತನಿಗೂ ಮತ್ತು ಉಳಿದ ಬೇರೆ ದೇವತೆಗಳಿಗೂ ಬಹಳ ವ್ಯತ್ಯಾಸವಿರುವುದನ್ನು ಕಾಣಬಹುದು.

ಮಂಟೇಸ್ವಾಮಿ ಹೆಣ್ಣು ಅಂದರೆ ಹೆತ್ತ ತಾಯಿಯಂತೆ ಕಾಣುತ್ತಾರೆ. ಇವರ ಶಿಶು ಮಕ್ಕಳಾದ ದೊಡ್ಡಮ್ಮ ತಾಯಿ ಚೆನ್ನಾಜಮ್ಮ ಇವರ ನಡುವಿನ ಸಂಬಂಧಗಳು ದೇವರು-ಭಕ್ತ, ಗುರು-ಶಿಷ್ಯ ತಂದೆ-ಮಗಳ ಸಂಬಂಧಗಳಂತೆ ಕಾವ್ಯದುದ್ದಕ್ಕೂ ಕಂಡು ಬರುತ್ತದೆ. ಮಂಟೇಸ್ವಾಮಿಗಳು ಮಾನವ

ಸಹಜ ಗುಣಗಳಾದ ಕಾಮ, ಕ್ರೋಧ, ಲೋಭ, ಮದ, ಮತ್ಸರಗಳೆಂಬ ಷಡ್ವರ್ಗಗಳನ್ನು ಸಾಧಿಸಿ ಮಾನವೀಯ ಗುಣಗಳನ್ನು ಅಳವಡಿಸಿಕೊಂಡು ಮಹಾದೈವವಾಗಿ ಸ್ತ್ರೀ ಕುಲವನ್ನು ಗೌರವಿಸುತ್ತಾ ಅವರಲ್ಲಿ ತಾಯ್ತನವನ್ನು ಕಾಣುತ್ತಾರೆ. ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿಗಳು ಚೆನ್ನಾಜಮ್ಮನನ್ನು ಆದರಿಸುವಾಗ ಬಳಸುವ 'ನನಕಂದ' ಎಂಬ ಮಾತು ಅವರ ಭಕ್ತವತ್ಸಲತೆ, ಪ್ರೀತಿ ವಾತ್ಸಲ್ಯವನ್ನು ಕಾಣಬಹುದು. ಈ ಮಾತು ಇಡೀ ಪುರುಷ ಸಮಾಜವು ಸ್ತ್ರೀ ಕುಲಕ್ಕೆ ವಿಧಿಸಿದ ಸೂತಕದ ಪರದೆಯನ್ನು ಕಿತ್ತೊಗೆಯುತ್ತದೆ. ಈ ಮೂಲಕ ಕಾವ್ಯದಲ್ಲಿ ಮಂಟೇಸ್ವಾಮಿಗಳು ಸ್ತ್ರೀ-ಪುರುಷರ ಪರಿಕಲ್ಪನೆಯನ್ನು ವಿಶೇಷವಾಗಿಯೇ ನಿರೂಪಿಸಿದ್ದಾರೆ.

ಮಂಟೇಸ್ವಾಮಿಯ – ಚೆನ್ನಾಜಮ್ಮ ರಾಚಪ್ಪಾಜಿ, ದೊಡ್ಡಮ್ಮ ತಾಯಿ ಇವರುಗಳ ಸ್ತ್ರೀ-ಪುರುಷ ಪರಿಕಲ್ಪನೆಯ ಪವಿತ್ರವಾಗಿ, ಗುರುಶಿಷ್ಯರಾಗಿ ಕಂಡುಬರುತ್ತದೆ. ಚನ್ನಾಜಮ್ಮನನ್ನು ಶಿಶುಮಗಳಾಗಿ ಪಡೆಯುವಾಗ ಮಂಟೇಸ್ವಾಮಿ ಹೇಳುವ ಮಾತುಗಳಲ್ಲಿ ಪ್ರೀತಿ, ವಾತ್ಸಲ್ಯವು ತುಂಬಿ ಬರುತ್ತದೆ.

"ಬಾರಪ್ಪ ನನ ಕಂದ ಬವ್ವ ಮಗಳೆ
ಬಾರೋ ನನ ಕಂದ ಶಿಶು ಮಗಳೆ
ಈಗಲೀಗ ರಾಚಪ್ಪಾಜಯರಿಗೆ ಶಿಶುಮಗಳಾಗಿ ಬಂದಿಯವ್ವ
ನನಗೂ ಕೂಡ ನೀನು ಶಿಶುಮಗಳಾಗಿ ಬಂದೀಯ ಕಂದಾ
ಬವ್ವಾ, ಎನುತೇಳಿ ಗುರುದೇವಾ
ರಾಚಪ್ಪಾಜಿಯವರ ಮನಿಗೆ ಕರಕೊಂಡು
ಹಿರೇ ಚನ್ನಾಜಮ್ಮನ ಕರಕೊಂಡು
ಹೊನ್ನರಳಿ ಕಲ್ಲಕಟ್ಟಿ ಜಗಲ ಬಿಟ್ಟು ಬಿಟ್ಟು ಗುರುದೇವಾ"[೩೭]

ಎಂದು ರಾಚಪ್ಪಾಜಿ ಗುರು ಮಂಟೇಸ್ವಾಮಿ ಎಲ್ಲೆಲ್ಲಿ ಸಂಚಾರ ಮಾಡುತ್ತಾರೋ ಅಲ್ಲೆಲ್ಲಾ ಚನ್ನಾಜಮ್ಮನೂ ಹಿಂಬಾಲಿಸುತ್ತಾಳೆ, ಇವರ ಜಾತ್ರೆಯ ಸಂದರ್ಭದಲ್ಲೂ ಚನ್ನಾಜಮ್ಮನಿಗೆ ಪೂಜೆ ಪುನಸ್ಕಾರ ನಡೆಯತ್ತವೆ, ಇಲ್ಲಿ ಸ್ತ್ರೀ-ಪುರುಷರಿಗೆ ಸಂಬಂಧಸಿದ ಆಚರಣೆ ಸಮನಾಗಿ ನಡೆಯುತ್ತವೆ ಹಾಗೂ ಮಂಟೇಸ್ವಾಮಿ ಪರಂಪರೆಯಲ್ಲಿಯೇ ಚೆನ್ನಾಜಮ್ಮ ಸಾಂಸ್ಕೃತಿಕ ನಾಯಕಿಯಾಗಿ ಉಳಿಯುವಂತೆ ಮಂಟೇಸ್ವಾಮಿ ಮತ್ತು ರಾಚಪ್ಪಾಜಿ ಬೆನ್ನೆಲುಬಾಗಿ ನಿಂತಿರುತ್ತಾರೆ.

ರಾಚಪ್ಪಾಜಿಯ ಗದ್ದುಗೆ ಕಪ್ಪಡಿಯಲ್ಲಿದೆ. ಚನ್ನಾಜಮ್ಮನ ಗದ್ದುಗೆಯನ್ನು ರಾಚಪ್ಪಜಿಯ ಪಕ್ಕದಲ್ಲಿಯೇ ಇರಿಸಲಾಗಿದೆ. ಇದರಿಂದಾಗಿಯೇ ಮಂಟೆಸ್ವಾಮಿ ಪರಂಪರೆಯಲ್ಲಿ ಸ್ತ್ರೀ ಪುರುಷರ ಕಲ್ಪನೆ ಪವಿತ್ರವಾಗಿತ್ತು ಎಂಬುದಕ್ಕೆ ಸಾಕ್ಷಿಯಾಗಿದೆ:

ಮಂಟೇಸ್ವಾಮಿ, ರಾಚಪ್ಪಾಜಿ, ದೊಡ್ಡಮ್ಮ ತಾಯಿಯ ಸಂಬಂಧವು ಗುರುಶಿಷ್ಯರ ರೂಪದಲ್ಲಿ ಕಂಡುಬಂದರೂ ಮಂಟೇಸ್ವಾಮಿ ಒಂದು ಸಂಸ್ಕೃತಿಯ ನಿರ್ಮಾಣಕ್ಕಾಗಿ ರಾಚಪ್ಪಾಜಿ ಮತ್ತು ದೊಡ್ಡಮ್ಮ ತಾಯಿಗೆ ಮದುವೆ ಮಾಡಿಸುತ್ತಾರೆ.

'ನಿನ್ನ ರಾಚಪ್ಪಾಜಿಯವರಿಗೆ
ಏಳವ್ವ ದೊಡ್ಡಮ್ಮ
ಧರುಮ ಪತ್ನಿ ನಿನ್ನ ಮಾಡುತೆನಿ
ನಿನಗೆ ಹರಿಸಿನ ಕುಂಕುಮ ಕೊಟ್ಟು ಸ್ಥಿರವಾಗಿ ಇಡುತೇನಿ
ನಿನಗೆ ಮುತ್ತೈದೆ ಭಾಗ್ಯ
ನಿಮ್ಮಿಬ್ಬರಿಗೂ ಕೊಡುತಿನಿ
ಪತಿಪತಿ ಉಳ್ಳಾದವರ
ಮಾಡುತೀನಿ ಎಂದರಲ್ಲಾ ॥ ಸಿದ್ದಯ್ಯ॥[೩೮]

ಇಲ್ಲಿ ಹೆಣ್ಣಿಗೆ ಸಂಬಂಧಿಸಿದ ವಿವಾಹ ಸಂಬಂಧಗಳನ್ನು ಪುರುಷನೇ ನಿರ್ಧರಿಸುವುದನ್ನು ಕಾಣಬಹುದು ಹಾಗೂ ವಿವಾಹ ಏರ್ಪಾಟ್ಟಾಗ ಸ್ತ್ರೀಗೆ ನೀಡುವ ಅರಿಸಿನ, ಕುಂಕುಮ ಮುತ್ತೈದೆ ಭಾಗ್ಯ ಬರುತ್ತದೆ ಎಂಬ ಸಂಪ್ರದಾಯದಲ್ಲಿ ಹೆಣ್ಣನ್ನು ಬಂದಿಸಲಾಗಿದೆ. ಅದರಂತೆ ಸ್ತ್ರೀ–ತನ್ನ ಪತಿಯನ್ನು ಎಲ್ಲಾ ರೀತಿಯಲ್ಲೂ ಅನುಕರಣೆ ಮಾಡಿಕೊಂಡು ಹೋಗಬೇಕೆಂಬುದನ್ನು ಈ ಭಾಗದಲ್ಲಿ ಕಾಣಬಹುದುದಾಗಿದೆ. ಮಂಟೇಸ್ವಾಮಿ ದೊಡ್ಡಮ್ಮ ತಾಯಿಯನ್ನು ಶಿಶುಮಗಳಾಗಿ ಪಡೆದ ಮೇಲೆ ಅವಳನ್ನು ತನ್ನ ಒಕ್ಕಲಾಗಿ ಉಳಿಸಿಕೊಳ್ಳಲು ತನ್ನ ಶಿಷ್ಯನಾದ ರಾಚಪ್ಪಜಿಗೆ ಕೊಟ್ಟು ವಿವಾಹ ಮಾಡುವುದರೊಂದಿಗೆ ಅವರ ಮೂಲಕ ಮಂಟೇಸ್ವಾಮಿ ತನ್ನ ಪರಂಪರೆಯನ್ನೂ ವಿಸ್ತರಿಸುತ್ತಾನೆ.

ಇನ್ನೊಂದು ಕಡೆ ದೊಡ್ಡಮ್ಮ ತಾಯಿಯನ್ನು ಸಂಪ್ರದಾಯ ಕಟ್ಟಳೆಗಳಲ್ಲಿ ನಿರ್ಮಿಸುವುದನ್ನು ಕಾಣಬಹುದು. ಸ್ತ್ರೀಗೆ ಮಾತ್ರ ಇರುವ ಪ್ರಕೃತಿದತ್ತಾವಾಗಿ ಬಂದ ಫಲವಂತಿಕೆಯನ್ನು ಪುರುಷ ಸಮಾಜ ಯಾವ ರೀತಿ ನಿರ್ಬಂದಿಸುತ್ತದೆ. ಎಂಬುದನ್ನು ಕಾಣಬಹುದು

"ರಾಚಪ್ಪಾಜಿಯವರ ಮುಖ ನೋಡಿಬುಟ್ಟು
ದುಡವುಳ್ಳ ದೊಡ್ಡಮ್ಮ
ಮುಟ್ಟು ತಟ್ಟಿಗೊಳಗಾಗಿಬುಟ್ಟಿ ಸ್ವಾಮಿ ಎಂದುರು
ಹಾಗೆ ಆದ ಮೇಲೆ
ನೀನು ಇಲ್ಲೆ ಮುತ್ತಿನಳ್ಳಿ ತೋಪಿನಲ್ಲಿ ವಾಸಮಾಡು ಅಂತೇಳಿ
ಕೈ ಹಿಡಿದ ಮಡದಿಯ
ಮುತ್ತಿನಳ್ಳಿ ತೋಪಿನಲಿ ಬುಟ್ಟು
ಕಿಡಗಣ್ಣು ರಾಚಪ್ಪಾಜಿಯವರು"[೩೯]

ಈ ರೀತಿಯಾಗಿ ದೊಡ್ಡಮ್ಮ ತಾಯಿ ಮುಟ್ಟಾದಳೆಂದು ರಾಚಪ್ಪಾಜಿ ಅವಳನ್ನು ಅಲ್ಲಿಯೇ ಬಿಟ್ಟು ಕಪ್ಪಡಿಗೆ ಹೋಗಿ ಗದ್ದುಗೆ ಏರುತ್ತಾರೆ. ಮುಟ್ಟು ಸ್ತ್ರೀಗೆ ಪ್ರಕೃತಿದತ್ತಾವಾಗಿದ್ದು ಇದನ್ನು ಪುರುಷನು

ಧಾರ್ಮಿಕ ಕಟ್ಟಳೆಯನ್ನು ವಿಧಿಸಿ ಆಚರಣೆಳಿಂದ ನಿಷೇಧಗೊಳಿಸುತ್ತಾನೆ, ಈ ಪದ್ಧತಿ ಅನೇಕ ಕಾವ್ಯಗಳಲ್ಲಿ ಕಂಡು ಬಂದರೂ ಪುರುಷ ಸಮಾಜ ಎಲ್ಲಕಡೆಯೂ ಅವಳನ್ನು ಹೊರಗಿಟ್ಟರುವುದನ್ನು ಕಾಣಬಹುದಾಗಿದೆ.

ಮಂಟೇಸ್ವಾಮಿ ಕಾವ್ಯದಲ್ಲಿ ದೊಡ್ಡಮ್ಮ ತಾಯಿ ಮುಟ್ಟಾದಳೆಂದು ರಾಚಪ್ಪಾಜಿ ಮುತ್ತನಳ್ಳಿಯಲ್ಲೆ ಬಿಟ್ಟರು ಅವಳಿಗೆ ವಿಶೇಷವಾದ ಸಂಸ್ಕೃತಿಯನ್ನು ತಂದುಕೊಡುತ್ತಾರೆ. ಇಲ್ಲಿ ಸ್ತ್ರೀ ಮುಟ್ಟಾದಳೆಂದರೆ ಕುಬ್ಜವಾದಳೆಂಬುದನ್ನು ವಿರೋಧಿಸುತ್ತಾ ಕೆಲ ಆಚರಣೆಗಳನ್ನು ಜಾರಿಗೆ ತರುವುದರ ಮೂಲಕ ಈ ಸಂಪ್ರದಾಯಕ್ಕೆ ಇದ್ದ ಬಿಕ್ಕಟ್ಟನ್ನು ಸಡಿಲಗೊಳಿಸಲಾಗಿದೆ. ಹಲವು ಬುಡಕಟ್ಟು ಸಮುದಾಯಗಳು, ಕಾವ್ಯಗಳಲ್ಲಿ ಹೆಣ್ಣು ಮುಟ್ಟಾದಳು ಎಂದರೆ ಅದನ್ನು ಸೂತಕವೆಂದು ಪರಿಗಣಿಸಿ ಅ ಸಮಯದಲ್ಲಿ ಸ್ತ್ರೀಯನ್ನು ಪ್ರತ್ಯೇಕ ಕುಟೀರದಲ್ಲಿ ವಾಸಿಸುವ ಮೂಲಕ ಅಸ್ಪೃಶ್ಯಳಾಗುವಂತೆ"[೪೦] ಮಾಡಲಾಗಿದೆ.

ಜುಂಜಪ್ಪನ ಕಾವ್ಯದಲ್ಲಿ ಪುರುಷ ಪ್ರಧಾನತೆ ಎದ್ದು ಕಾಣುತ್ತದೆ. ಈ ಕಾವ್ಯದಲ್ಲಿ ಪುರುಷನ ಆದೇಶದಂತೆ ಹೆಣ್ಣು ನಡೆಯಬೇಕು. ಅವನ ನಿರ್ಭಂದದಲ್ಲಿ ಸ್ತ್ರೀ ತನ್ನೆಲ್ಲಾ ಸಾಂಸ್ಕೃತಿಕ ಮೌಲ್ಯವನ್ನು ಅಡಗಿಸಬೇಕು. ಆದರೂ ಜುಂಜಪ್ಪನ ಮೂಲಕ ಸ್ತ್ರೀ-ಪುರುಷರಿಬ್ಬರಿಗೂ ನಿಕಟ ಸಂಬಂಧವನ್ನು ಏರ್ಪಡಿಸಲಾಗಿದೆ. ಸ್ತ್ರೀಯು ಪುರುಷನ ರಕ್ಷಣೆಯಲ್ಲಿಯೇ ಬದುಕಬೇಕು ಎಂಬುದನ್ನು ಜುಂಜಪ್ಪ ಸಾಬೀತು ಮಾಡುತ್ತಾನೆ.ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪನ ತಾಯಿ ಸಿನ್ನಮ್ಮ ಅನೇಕ ಅಪವಾದಗಳಿಗೆ ಒಳಗಾದಾಗ ಅವಳನ್ನು ರಕ್ಷಿಸುತ್ತಾನೆ.

"ಜುಂಜಪ್ಪ ಅವುರ ತಾಯಿನ  
ಅತ್ತೆ ಮಾವನಿಗೆ ಅಡಿಗೆ ಮಾಡಿ ಊಟಕ್ಕಿಟುಕೊಂಡು ಆಯಮ್ಮ  
ಬಹಳ ಸುಖವಾಗಿ ನೋಡಿಕೊಂಡು ಅತ್ತೆ ಮಾವನ್ನು ಮನೆವೊಲಗಿದ್ದ  
ಮದುವೆ ಆಗಿ ಹನ್ನೆರಡು ವರ್ಷ ಆಯ್ತು  
ಗಂಡ ಮನಿಗೆ ಬರಲಿಲ್ಲ  
ಆಯಮ್ಮನಿಗೆ ಮಕ್ಕಳಾಗಲಿಲ್ಲ...........  
ಊರುಗಳು ಜನರಲ್ಲಿ  
ಆಡುಕಂತಾರೆ ಸಿನ್ನಮ್ಮನ ಗಳಿಗಾಗೋ..[೪೧]

ಹೀಗೆ ಊರಿನ ಪ್ರತಿಯೊಬ್ಬರು ಸಿನ್ನಮ್ಮನನ್ನು ಅಪಮಾನಗೊಳಿಸುವಾಗ ಜುಂಜಪ್ಪ ಅಪವಾದಗಳಿಂದ ಕಾಪಾಡುವುದರೊಂದಿಗೆ, ಪುರುಷನೆ ಸ್ತ್ರೀಯನ್ನು ಸಮಾಜದ ನಿಂದನೆಗಳಿಂದ ಕಾಪಾಡಲು ಸಾಧ್ಯ. ಸಮಾಜದ ವ್ಯವಸ್ಥೆಯ ನಿಯಮಗಳಿಗೆ ಹೆಣ್ಣು ಬದ್ಧವಾಗಿರಬೇಕು. ಇಲ್ಲಿ ಹೆಣ್ಣು ಪುರುಷನಿಗಿಂತ ಅಸಮರ್ಥಳು, ಅಸಹಾಯಕಳು ಆಗಿದ್ದಾಳೆ. ಆದ್ದರಿಂದ ರಾತ್ರಿ ಸಮಯ ಕಳೆಯುವುದರೊಳಗೆ

ಮನೆಯನ್ನು ಸೇರಿಕೊಳ್ಳಬೇಕು ಎಂಬ ನಿರ್ಬಂದವನ್ನು ಜುಂಜಪ್ಪ ತನ್ನ ತಾಯಿಗೆ ವಿಧಿಸಿದ್ದನ್ನು ಕಾಣಬಹುದು.

"ಸರಿ ಹೆಣ್ಣು ಸೂರ್ಯ ಮುಣ್ಕುದ ಮ್ಯಾಲೆ

ನಮ್ ಗೊಲ್ಲಣೀಯೊಳುಗೆ ಹುಟ್ಟದುಮ್ಯಾಲೇ

ಇಲ್ಲಿ ಕೊಟ್ಟು ಮನೆಯೊಳಗೆ ಕರುವಿನಿಂದ ಒಳಗಡೆ ಇರಬೇಕು".[೪೨]

ಜುಂಜಪ್ಪ ತನ್ನ ತಾಯಿಗೆ ಇಷ್ಟೆಲ್ಲಾ ಕಟ್ಟುಪಾಡುಗಳನ್ನು ವಿಧಿಸಿದ್ದರು ಸಹ, ಜುಂಜಪ್ಪ ಮಹಿಳಾ ಪ್ರಗತಿ ಪರನಾಗಿ, ಸ್ತ್ರೀ ಪರ ಕಾಳಜಿಯುಳ್ಳವನಾಗಿ ಕಂಡುಬರುತ್ತಾನೆ. ಜುಂಜಪ್ಪ ಸಮಾಜದಲ್ಲಿರುವ ಪುರುಷಾಧಿಕಾರವನ್ನು ಹೊಂದಿದ್ದರು ಸಹ ಹೆಣ್ಣಿಗೆ ಸಮಾಜದಲ್ಲಿ ಒಂದು ಸ್ಥಾನಮಾನ ದೊರಕಬೇಕು ಎಂಬ ಧೋರಣೆ ಹೊಂದಿದಂತೆ ಕಾಣುತ್ತದೆ. ಆದರೂ ಜುಂಜಪ್ಪ ಕಾವ್ಯದುದ್ದಕ್ಕೂ ಸ್ತ್ರೀ–ಪುರುಷನ ತಾರತಮ್ಯತೆಯನ್ನು ಅಳವಡಿಸಿಕೊಂಡಿದ್ದಾನೆ.

ಮೈಲಾರಲಿಂಗನ ಕಾವ್ಯವು ಸಹ ಎಲ್ಲಾ ಕಾವ್ಯಗಳಿಗಿಂತ ಸ್ತ್ರೀ–ಪುರುಷರ ಧೋರಣೆಯನ್ನು ಒಂದು ಪರಂಪರೆಯನ್ನೆ ಸೃಷ್ಟಿಸುವ ಹಾಗೆ ವಿಭಿನ್ನವಾಗಿ ವ್ಯಕ್ತವಾಗಿಸಿದೆ. ಏಕೆಂದರೆ ಮೈಲಾರ ಇಲ್ಲಿ ದ್ವಿಪತ್ನಿತ್ವವನ್ನು ಅನುಸರಿಸುವುದರೊಂದಿಗೆ ಹೆಣ್ಣನ್ನು ಪಡೆಯುವುದರೊಂದಿಗೆ ಸಂಘರ್ಷಗಳನ್ನು ನಡೆಸುತ್ತಾನೆ. ಮೈಲರನು ಇಲ್ಲಿ ಸ್ತ್ರೀ ವ್ಯಾಮೋಹಕನಂತೆ ಕಂಡುಬರುತ್ತಾನೆ. ಈ ಕಾವ್ಯದಲ್ಲಿ ಸ್ತ್ರೀಯು ತನಗಾದ ಶೋಷಣೆಯನ್ನು ಎದುರಿಸುವಲ್ಲಿ ಅಸಮರ್ತಳಾಗಿ ಕಂಡುಬರುತ್ತಾಳೆ. ಗಂಗಿ ಮಾಳವ್ವ ತನಗೆ ಎದುರಾದ ಸವತಿ ಮತ್ಸರವನ್ನು ವಿರೋಧಿಸದೆ ದ್ವಿಪತ್ನಿತ್ವವನ್ನು ಒಪ್ಪುವುದರೊಂದಿಗೆ ಪುರುಷ ಪ್ರದಾನತೆಯ ಸಮಾಜಕ್ಕೆ ಒಪ್ಪಿಗೆ ಕೊಡುತ್ತಾಳೆ.

ಈ ಕಾವ್ಯದಲ್ಲಿ ಹೆಣ್ಣಿನ ಎಲ್ಲಾ ಒತ್ತಡಗಳಿಗೆ ಪುರುಷನೇ ಕಾರಣನಾಗಿದಾನೆ. ಮೈಲಾರನು ಒಂದು ಬದ್ಧ ವ್ಯವಸ್ತೆಯ ವಿರುದ್ದ ದಿಕ್ಕಿನಲ್ಲಿ ನಡೆಯುತ್ತಾನೆ. "ಇದು ಪುರುಷ ಪ್ರದಾನದ ವ್ಯವಸ್ಥೆಯ ಬಹುದೊಡ್ಡ ರಾಜಕಾರಣವಾಗಿದೆ. ಇಂಥ ರಾಜಕಾರಣದ ಕುತಂತ್ರವನ್ನು ಅರಿಯದೇ, ಅರಿತರೂ ಎದುರಿಸಲಾಗದೆ ನಿಸ್ಸಾಹಯಕರಾಗಿ ಒಪ್ಪಿಕೊಂಡಿರುವ ಮಹಿಳೆಯರಾಗಿ"[೪೩] ಗಂಗಿಮಾಳವ್ವ, ಕೋಮಾಲೆ ಕಂಡುಬರುತ್ತಾರೆ.

ಮಾಳಿಂಗರಾಯನ ಕಾವ್ಯದಲ್ಲಿ ಸ್ತ್ರೀ–ಪುರುಷರಿಬ್ಬರೂ ಸಮಾನತೆಯ ಬಾಳ್ವೆ ನಡೆಸುವುದನ್ನು ಕಾಣಬಹುದು. ತುಕ್ಕಪ್ಪರಾಯನು ಬಾನಮತಿಯ ಗೌಡನಾದರೂ ಮಹಿಳೆಯರ ಮೇಲೆ ಯಾವುದೇ ದಬ್ಬಾಳಿಕೆ ನಡೆಸಿರುವುದು ಕಂಡುಬರುವುದಿಲ್ಲ. ತುಕ್ಕಪ್ಪರಾಯನ ಗೈರು ಹಾಜರಿಯಲ್ಲಿ ಮನೆಯ ವ್ಯವಹಾರವನ್ನು ಅವನ ಹೆಂಡತಿ ಅಮೃತಬಾಯಿ ನಿಭಾಯಿಸಿಕೊಂಡು ಹೋಗುತ್ತಾಳೆ. ಇವರಿಬ್ಬರ ಸಮನ್ವತೆಯ ಬದುಕು ಕುಟುಂಬ, ಸಮಾಜದಲ್ಲಿ ಸ್ತ್ರೀ–ಪುರುಷರಿಬ್ಬರು ಸಮಾನತೆಯಿಂದ ಜೀವನ ಸಾಗಿಸಿದಾಗ ಸಾಮರಸ್ಯ ಕಾಪಾಡಿಕೊಳ್ಳಲು ಸಾಧ್ಯ ಎಂದು ಈ ಕಾವ್ಯದ ಮೂಲಕ ಹೇಳಬಹುದು.

ಒಟ್ಟಿನಲ್ಲಿ ಮೌಖಿಕ ಮಹಾಕಾವ್ಯಗಳಲ್ಲಿ ಶೀಲ, ಪಾತಿವ್ರತ್ಯ, ಬಂಜೆತನ, ವಿಧವೆ, ಧಾರ್ಮಿಕತೆ ಮೊದಲಾದ ನಿಷೇಧಗಳನ್ನು ವಿಧಿಸುವ ಮೂಲಕ ಪುರುಷನು ಅವಳನ್ನು ಸಮಾಜದಲ್ಲಿ ಅಬಲೆಯನ್ನಾಗಿ ನಿರ್ಮಿಸಿದ್ದಾನೆ. ಸ್ತ್ರೀಯ ಮೇಲೆ ಅನೇಕ ಸಂಪ್ರದಾಯಗಳನ್ನು ಹೇರುವ ಮೂಲಕ ಅವಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿದ್ದಾನೆ. ಸನಾತನ ಧರ್ಮದಲ್ಲಿ ಇದ್ದಂತೆ ಸ್ತ್ರೀ–ಪುರುಷರಿಗೆ ಸಮಾನವಾದ ಸ್ಥಾನಮಾನ ನೀಡಬೇಕು ಎಂಬ ಮಾತಿಗೆ ವಿರುದ್ಧವಾದಂತಿದೆ. ಶಿವೆ–ಶಿವ, ಪ್ರಕೃತಿ–ಪುರುಷ, ಹೀಗೆ ಸೃಷ್ಠಿಯಲ್ಲಿ ಇಬ್ಬರೂ ಸಮಾನತೆಯಿಂದಲೇ ಕೂಡಿದ್ದಾರೆ.

### ೩.೪ ಮಹಿಳೆಯ ಅನನ್ಯತೆ ಮತ್ತು ಅಸ್ತಿತ್ವ

ಸಾಹಿತ್ಯ ಎನ್ನುವುದು ವಿಶಾಲವಾಗಿದ್ದು ಇದು ಅನೇಕ ವಿಷಯಗಳನ್ನು ಅಡಗಿಸಿಕೊಂಡು ವಿವಿಧ ಆಯಾಮಗಳಲ್ಲಿ ವಿಸ್ತಾರಗೊಳ್ಳುತ್ತಾ ಹೋಗುತ್ತದೆ. ಆ ಹಿನ್ನೆಲೆಯಲ್ಲಿ ಸಾಹಿತ್ಯವು ಮೌಖಿಕವಾಗಿಯೂ ರೂಪಗೊಂಡಿದ್ದನ್ನು ಗಮನಿಸಬಹುದು. ಅಂತಹ ಸಂದರ್ಭದಲ್ಲಿ ಅನಕ್ಷರಸ್ಥಳಾಗಿ ಉಳಿದ ಮಹಿಳೆ ತಮ್ಮ ಅನುಭವ ಹಾಗೂ ಮಾಡುವ ಕೆಲಸ ಕಾರ್ಯಗಳ ಮೂಲಕ ತನ್ನನ್ನು ತಾನು ಗುರುತಿಸಿಕೊಂಡವಳು ಮಾನವನ ಜೀವನ ಪ್ರಾಚೀನ ಕಾಲದಿಂದಲೂ ಒಂದೊಂದು ತಿರುವುಗಳನ್ನು ಪಡೆಯುತ್ತಾ ಬಂದಂತೆ ಇಂತಹ ತಿರುವುಗಳಲ್ಲಿ ಆದರ್ಶಪ್ರಾಯಳಾಗಿ ನಿಂತವಳು ಮಹಿಳೆ. ಮನುಷ್ಯನ ನಾಗರಿಕತೆ ಸಂಸ್ಕೃತಿಯ ಸಂವರ್ಧನೆಗೆ ಮಹಿಳೆಯ ಪಾತ್ರ ಅನನ್ಯವಾದುದಾಗಿದೆ.

"ಮನುಷ್ಯ ಅಭಿವೃದ್ಧಿ ಹೊಂದಲು ಮೂಲ ಆಕರವಾದದ್ದು ಕೃಷಿ ಪ್ರಧಾನ ಸಂಸ್ಕೃತಿಯಾಗಿದೆ. ಈ ಕೃಷಿ ಪದ್ದತಿಯ ಆವಿಷ್ಕಾರ ಹೊಸ ಬೆಳವಣಿಗೆ ಹೊಂದಿರುವ ಮಹಿಳೆಯರ ಮೂಲಕವೇ ಎಂಬುದಂತೂ ಸತ್ಯವಾದ ಸಂಗತಿಯಾಗಿದೆ"[೪೪] ಮಹಿಳೆ ಇಡೀ ಜಗತ್ತಿನ ಇತಿಹಾಸದಲ್ಲಿಯೇ ದುಡಿಮಗೆ ಮಾತ್ರ ಸೀಮಿತವಾಗಿದ್ದಾಳೆ. ಪ್ರತಿಯೊಂದು ಹಂತದಲ್ಲೂ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾ ಪುರುಷನಿಗೆ ಬೆನ್ನೆಲುಬಾಗಿ ನಿಂತಿದ್ದಾಳೆ. ಕೃಷಿ ಪ್ರಧಾನ ಸಂಸ್ಕೃತಿಗೆ ಮಹಿಳೆಯೇ ಆಧಾರವಾಗಿದ್ದಾಳೆ. ಮಹಿಳೆ ನಮ್ಮ ಜಗತ್ತಿನ ಇತಿಹಾಸದಲ್ಲಿ ಕೃಷಿ ಪದ್ದತಿ ಆವಿಷ್ಕಾರಕ್ಕೆ ಮೂಲ ಪ್ರೇರಣೆ ಎಂಬುದಂತೂ ಸತ್ಯವಾಗಿದೆ. ಹೀಗಾಗಿಯೇ ಅನೇಕ ಗೃಹ ಕೈಗಾರಿಕೆಗಳು ಸ್ವ ಅವಲಂಬನಾ ಕಾರ್ಯ ತಯಾರಿಕೆಯಲ್ಲಿ ಮಹಿಳೆಯ ಪಾತ್ರ ಪ್ರಮುಖವಾಗಿದೆ. ಬಟ್ಟೆಗಳನ್ನು ತಯಾರಿಸುವ, ನೂಲು ತೆಗೆಯುವ, ನೇಯುವುದರ ಮೂಲಕ ಮಹಿಳೆ ತನ್ನ ಎಲ್ಲಾ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಆ ಕಾರಣದಿಂದಲೇ ಮಹಿಳೆಯು ನಾಗರಿಕತೆಯ ಸಂಸ್ಕೃತಿಗೆ ಬರಲು ಸಾಧ್ಯವಾಯಿತು. ಕಾಲಘಟ್ಟ ಬದಲಾದಂತೆ ಅನೇಕ ವಿಚಾರಗಳಿಗೆ ಕೊಡುಗೆ ನೀಡಿದ ಮಹಿಳೆಯರನ್ನು ಪುರುಷ ಪ್ರದಾನ ಸಂಸ್ಕೃತಿಯು ಮರೆತು ಹೋಯಿತು. "ಮಾತೃಸಂಸ್ಕೃತಿಯ ಆರಾಧಕರಾದ ಕನ್ನಡ ನಾಡು, ಜನ ಸಮುದಾಯ ಕಾಲಕ್ರಮೇಣ ಪಿತೃಪ್ರದಾನ ಸಂಸ್ಕೃತಿ ಬೆಳವಣಿಗೆ ಹೊಂದಿತು. ಆಗಲೇ ಪುರುಷ ಪ್ರದಾನ ಸಂಸ್ಕೃತಿ ಭಾರತೀಯ ಸಂಸ್ಕೃತಿಯ ಮೇಲೆ ಹಿಡಿತ ಸಾಧಿಸಿತು. ಸಂಪೂರ್ಣವಾಗಿ ಕನ್ನಡ ನಾಡಿನ ಸಂಸ್ಕೃತಿಯ ಮೇಲೆ ತನ್ನ ಅಸ್ತಿತ್ವ ಉಳಿಸಿಕೊಂಡು ಬಂದಿತು."[೪೫]

ವೇದ, ಆಗಮ, ಉಪನಿಷತ್ತುಗಳಂತಹ ಶ್ರೇಷ್ಠವಾದ ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಗೆ ಸ್ವಾತಂತ್ರ್ಯವನ್ನು ಕೊಟ್ಟಿದ್ದಾರೆ. ಆದರೆ ಸಂಪೂರ್ಣವಾಗಿ ನೀಡಿಲ್ಲ. ಋಗ್ವೇದದ ಕೆಲವು ಭಾಗಗಳಲ್ಲಿ ಹೆಣ್ಣಿಗೆ ಸ್ವಲ್ಪ ಸ್ಥಾನ ನೀಡಿದ್ದಾರೆ, ಆದರೆ ಅಥರ್ವಣ ವೇದಗಳ ಕಾಲಕ್ಕೆ ಸಂಪೂರ್ಣವಾಗಿ ಮಹಿಳೆಯರ ಸ್ಥಾನ ಮಾನಗಳನ್ನು ಕಿತ್ತುಕೊಳ್ಳಲಾಯಿತು. ಏಕೆಂದರೆ ಅಥರ್ವಣ ವೇದದಲ್ಲಿ ಹೆಣ್ಣು ಹುಟ್ಟುವುದು ದುರದೃಷ್ಟಕರ ಸಂಗತಿ ಎಂದು ಹೇಳಲಾಗಿದೆ. ಉಪನಿಷತ್ತುಗಳು ನಮ್ಮ ಭಾರತೀಯ ಸಮಾಜದ ಬಹುಮುಖ್ಯ ಆಸ್ತಿಗಳೆಂದು ಹೇಳುತ್ತೇವೆ.ಜಿಜ್ಞಾಸೆ, ಆಧ್ಯಾತ್ಮ, ಸಮಾಜ ಹಾಗೂ ಸಂಸ್ಕೃತಿಯನ್ನು ಕುರಿತು ಆತ್ಮಾವಲೋಕನಕ್ಕೆ ಒಳಗಾದ ಕಾಲವಾಗಿತ್ತು. ಈ ಸಮಯದಲ್ಲಿಯೇ ಭಾರತೀಯ ಪ್ರಮುಖ ಚಿಂತಕರಾದ ಗಾರ್ಗಿ, ಮೈತ್ರೇಯಿ, ಲೋಪಮುದ್ರೆಯಂತಹ ಹಲವಾರು ಸ್ತ್ರೀಯರು ತಮ್ಮದೇ ಆದ ತಾತ್ವಿಕ ಚಿಂತನೆಗಳನ್ನು ನಡೆಸಿದ್ದಾರೆ. ಇಲ್ಲಿಂದಲೇ ಮಹಿಳೆಯರು ಹೊಸ ಹೊಸ ಚಿಂತನೆಗಳನ್ನು ಹೊರ ಹಾಕಲು ಪ್ರಾರಂಭಿಸಿದರು ಉಪನಿಷತ್ತು ಹುಟ್ಟುವ ಮುಂಚೆ ಬ್ರಹ್ಮದಾರಣ್ಯಕವೆಂಬ ಉಪನಿಷತ್ತು ಅನೇಕ ಸಂಸ್ಕೃತಿಗಳ ಬೆಳಕಿಗೆ ಕಾರಣವಾಯಿತು. ಅದ್ದರಿಂದಲೇ ಮಹಿಳೆಯ ಅಸ್ತಿತ್ವ ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ.

ಧರ್ಮಶಾಸ್ತ್ರಗಳು ಸ್ಮೃತಿಗಳು ಗ್ರಂಥಗಳು ಹೆಣ್ಣನ್ನು ಕಾಡತೊಡಗಿದವು. ತಮ್ಮದೇ ಆದ ಧರ್ಮ ಕಟ್ಟಳೆಗಳನ್ನು, ಸಂಪ್ರದಾಯಗಳನ್ನು ನಿರ್ಮಿಸಿಕೊಳ್ಳಲಾರಂಭಿಸಿದಾಗ, ಪುರೋಹಿತ ವರ್ಗವು ಮಹಿಳೆಯ ಮೇಲೆ ಶೋಷಣೆ, ದಬ್ಬಾಳಿಕೆ ಮಾಡಲು ಪ್ರಾರಂಭಿಸಿದವು. ಆಗ ಮಹಿಳೆಗೆ ಅನೇಕ ಕಟ್ಟು ಪಾಡುಗಳನ್ನು ವಿಧಿಸಿ ಹೆಣ್ಣು ಪುರುಷ ಪ್ರಧಾನ ವ್ಯವಸ್ಥೆಯ ತೆಕ್ಕೆಯೊಳಗೆ ನಿಲ್ಲಿಬೇಕಾದ ಪರಿಸ್ಥಿತಿ ನಿರ್ಮಾಣ ಮಾಡಲಾಯಿತು. ಮಹಿಳೆಯ ನಿರಂತರವಾಗಿ ಪುರುಷ ಸಮಾಜದ ಒಳಗೆ ಬೆಳೆಯುತ್ತಾ ಬಂದಳು.

ಜೈನ ಧರ್ಮವು ಮಹಿಳೆಗೆ ಅತ್ಯಂತ ಕಠಿಣವಾದ ಕಟ್ಟುಪಾಡುಗಳನ್ನು ವಿಧಿಸುವುದರ ಮೂಲಕ ಅವಳಿಗೆ ಸಮಾನ ಅವಕಾಶ ನೀಡಲಿಲ್ಲ. ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮಗಳಿಗೆ ಹೊಸ ಅರ್ಥ ಕಲ್ಪಿಸಿದರು ಆದರೆ ಮಹಿಳೆಯನ್ನೆ ಸಂಸ್ಕೃತಿ, ಆಚರಣೆಗಳಿಂದ ದೂರವಿಡಲಾಯಿತು. ಅದೇ ರೀತಿ ಬೌದ್ಧ ಧರ್ಮವೂ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದ್ದು ಪೌರೋಹಿತ್ಯ ಸಾಹಿತ್ಯವನ್ನು ವಿರೋಧಿಸಿತು. ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುತ್ತಾ ತಮ್ಮ ಬೌದ್ದ ಸಂಘಗಳಲ್ಲಿ ಮಹಿಳೆಗೆ ಮೊದಲ ಸ್ಥಾನವನ್ನು ಕೊಡಲಾರಂಭಿಸಿದರು. "ತನ್ನ ಸಂಘದ ಮೇಲೆ ಬೌದ್ಧ ಪ್ರಚಾರಕರ ಮೇಲೆ ನಂಬಿಕೆ, ವಿಶ್ವಾಸ, ಪ್ರೀತಿ, ಬರುವವರಗೂ ಸಹ ಮಹಿಳೆಗೆ ಒಪ್ಪಿಗೆ ನೀಡಲಿಲ್ಲ, ಧೃಡಸಂಕಲ್ಪ ಹೊಂದಿದ ಮೇಲೆ ಸ್ವತಃ ತನ್ನ ಮಡದಿ, ತಾಯಿಯನ್ನು ಸೇರಿಸಿಕೊಂಡರು. ಬೌದ್ದ ಸಂಘದಲ್ಲಿ ಪ್ರಜಾಪತಿ, ಸುಜಾತ, ಅಮೃತಪಾಲಿ ಮುಂತಾದ ೫೦ಕ್ಕೂ ಹೆಚ್ಚು ಬೌದ್ದ ಭಿಕ್ಷುಣಿಯರು ಬೌದ್ದ ಸಂಘದಲ್ಲಿ ಸೇರಿಕೊಂಡರು"[೬] ಬೌದ್ಧ ಸಂಘದಲ್ಲಿ ಸೇರಿದ ಮಹಿಳೆ ತನ್ನನ್ನು ತಾನು ಧರ್ಮ ಪ್ರಚಾರದಲ್ಲಿ ತೊಡಗಿಸಿಕೊಂಡಳು. ಇದರಿಂದ ಮಹಿಳೆಗೆ ವಿಶೇಷ ಸ್ಥಾನಮಾನ ಲಭಿಸಿತು. ಪುರುಷರಿಗಿಂತ ಸಮಾನವಾಗಿ ಕಾಣದಿದ್ದರೂ ಪುರುಷನ ನಂತರದ ಸ್ಥಾನವನ್ನು ಮಹಿಳೆ ಪಡೆದುಕೊಂಡಳು. ಇದರಿಂದ ಕೆಲವು ಧರ್ಮಗಳ

ಕೆಂಗಣ್ಣಿಗೆ ಗುರಿಯಾದದ್ದು ಅಲ್ಲದೆ ಅವಳನ್ನು ಕೀಳಾಗಿ ಕಾಣಲಾರಂಭಿಸಿದರು. ಇದನ್ನು ಗಣನೆಗೆ ತೆಗೆದುಕೊಂಡ ಮಹಿಳೆ ಬೌದ್ಧ ಧರ್ಮ ಪ್ರಸಾರದಲ್ಲಿ ತೊಡಗಿದ್ದರಿಂದ ತನ್ನತನದ ಮೇಲುಗೈ ಸಾಧಿಸಿದಳು.

ರಾಮಾಯಣ ಮಹಾಭಾರತದಂತಹ ಮಹಾಕಾವ್ಯಗಳಲ್ಲಿಯೂ ಸಹ ಮಹಿಳೆಯನ್ನು ಸಂಪೂರ್ಣವಾಗಿ ತದ್ವಿರುದ್ದ ನೆಲೆಗಳಲ್ಲಿಯೇ ನೋಡಲಾಗಿದೆ. ಯುದ್ಧ, ಬೇಟೆ, ದಿಗ್ವಿಜಯ, ರಾಜ್ಯ ವಿಸ್ತರಣೆ ಸೃಜನ ಪರಂಪರೆಯಂತಹ ಹಂತದಲ್ಲಿ ವೀರತೆಯನ್ನು ಹಾಗೂ ಅವರ ಅನುಭವಗಳನ್ನು ಮಹತ್ವೀಕರಸಿರುವುದನ್ನು ಕಾಣಬಹುದು. ಸೀತೆ, ಊರ್ವಶಿ, ಮಂಡೋದರಿ, ಅಹಲ್ಯೆ, ದ್ರೌಪದಿ, ಸುಭದ್ರ, ರುಕ್ಮಿಣಿ, ಕೈಕೇಯಿ, ಮೊದಲಾದ ಸ್ತ್ರಿಯರು ಕೆಲವು ಕಡೆ ತಿರಸ್ಕಾರಕ್ಕೆ ಮತ್ತು ಮನ್ನಣೆಗೆ ಒಳಪಡುವುದರ ಮೂಲಕ ತಮ್ಮನ್ನು ತಾವೂ ನಿರೂಪಿಸಿಕೊಳ್ಳುತ್ತಾ ಹೋಗುತ್ತಾರೆ.

ವಚನ ಸಾಹಿತ್ಯ, ದಾಸ ಸಾಹಿತ್ಯ, ಭಕ್ತ ಸಾಹಿತ್ಯವು, ಮಹಿಳೆಯರ ಹಿತದೃಷ್ಟಿಕೋನದಿಂದ ಹೊಸ ಸಂವೇದನೆಯನ್ನು ಕಟ್ಟಿಕೊಡಲು ಬದುಕಿನ ನಾನಾ ಹಂತಗಳನ್ನು ರೂಪಿಸಲಾಯಿತು. ವಚನ ಯುಗ, ಶರಣರ ಚಳುವಳಿಗಳು ಕ್ರಾಂತಿ ಪಥದತ್ತ ಸಾಗುತ್ತಿದ್ದಾಗ ಕೆಳವರ್ಗದ ಅನೇಕ ಶರಣರು ಇದರಲ್ಲಿ ಭಾಗವಹಿಸಿ ಅನೇಕ ವಚನಗಳನ್ನು ರಚಿಸಿದರು. ಅದನ್ನು ಕೆಳವರ್ಗದ ಸಾಹಿತ್ಯವೆಂದೇ ಕರೆಯಲಾರಂಭಿಸಿತು. ಇಲ್ಲಿ ಅನೇಕ ಮಹಿಳೆಯರು ಮುಕ್ತತೆಗೆ, ಸ್ವಾತಂತ್ರ ಚಳುವಳಿಗೆ, ಸ್ವಾಭಿಮಾನಕ್ಕೆ ಹೆಚ್ಚು ಒತ್ತು ನೀಡಲಾಯಿತು. ಈ ಸಮುದಾಯದಲ್ಲಿ ಮಹಿಳೆಯ ಶೋಷಣೆಯಿಂದ ಹೊರಬಂದು ಸಾಮಾಜಿಕ ನ್ಯಾಯವನ್ನು ಪಡೆಯಲು ಆಲೋಚನೆ ಕೈಗೊಳ್ಳಲಾರಂಭಿಸಿದರು. ದಾಸ ಸಾಹಿತ್ಯದ ಪ್ರಮುಖ ಸಮಾಜದ ಜೊತೆಗೆ ಲಯ, ಸಂಗೀತ ಸ್ಥಾನಮಾನ ಲಭಿಸಿತು. ಭಕ್ತಿ ಸಾಹಿತ್ಯದಲ್ಲಿ ಸಂಗೀತದ ಜೊತೆಗೆ ಮಹಿಳಾ ಸಾಹಿತ್ಯ ಮಹಿಳೆಯರಿಗೆ ಅವಕಾಶ ಕಲ್ಪಿಸಿದ್ದು ಬೆಳರಣಿಕೆಯಷ್ಟು, ಸ್ವರ ವಚನ, ತತ್ವಪದಕಾರರು ಹಾಗೂ ಸೂಫಿ ಸಂತರ ಕಾವ್ಯದ ಯುಗದಲ್ಲಿ ಮಹಿಳೆಯರು ಸ್ವಾತಂತ್ರ್ಯ ಪಡೆಯುತ್ತಾರೆ

ನಂತರ ಬಂದ ಜನಪದ ಸಾಹಿತ್ಯದ ಬಹುಮುಖಿ ನೆಲೆಯಲ್ಲಿ ಕಾಣಬಹುದು. ಸಣ್ಣ ಸಣ್ಣ ಗುಂಪುಗಳ ಸಂಸ್ಕೃತಿಗಳ ಸಂಸ್ಕೃತಿಯು ಸಂವಹನ ರೂಪವನ್ನು ಪಡೆದು ಜಾತಿ, ಜನ ವರ್ಗ ಸಮುದಾಯದ ಚಿತ್ರಣವನ್ನು ಪ್ರತಿಪಾದಿಸಿತು. ಇದರಿಂದಾಗಿ ಮಹಿಳೆಯರು ತಮ್ಮದೇ ಜನಪದ ಸಾಹಿತ್ಯ ಸೃಷ್ಟಿಸಿ ಅದನ್ನು ವಿಶಿಷ್ಟ ನೆಲೆಗಳಲ್ಲಿ ಕಂಡುಕೊಂಡರು. ಎ.ಕೆ.ರಮಾನುಜಾಚಾರ್ಯ, ವಿವೇಕ ರೈ, ಗಾಯತ್ರಿನಾವಡ, ಸಂಧ್ಯಾರೆಡ್ಡಿ, ಮುಂತಾದ ಮಹಿಳಾ ಲೇಖಕಿಯರು ಹಾಗೂ ಲೇಖಕರು ಮಹಿಳಾ ಜನಪದದ ಬಗ್ಗೆ ಅಧ್ಯಯನ ಮಾಡಿದ್ದಾರೆ ಮಹಿಳೆಯರ ಸಾಹಿತ್ಯದಲ್ಲಿ ಕತೆ, ಗೀತೆ, ಒಗಟು, ಗಾದೆ, ಒಡಪುಗಳು ಸಮಗ್ರವಾಗಿ ಅಭಿವ್ಯಕ್ತಗೊಳ್ಳಲಾರಂಭಿಸಿದವು.

ಜನಪದರು ಸೃಷ್ಟಿಸಿದ ಕತೆ, ಗೀತೆಗಳಲ್ಲಿ ಹೆಣ್ಣಿನ ವ್ಯಕ್ತಿತ್ವ ಹಾಗೂ ಶೀಲ, ಪಾತಿವ್ರತ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆ. ಮಹಿಳೆಯ ಕತೆ, ಗೀತೆಗಳಲ್ಲಿ ಪ್ರೀತಿ, ಸಂಬಂಧಗಳ ಮೂಲಕ ತನ್ನನ್ನು

ಕಂಡುಕೊಳ್ಳುವ ನಿಟ್ಟಿನಲ್ಲಿ ಪುರುಷ ನಿರ್ಮಿತ ಸಮಾಜದೊಳಗೆ ಕೇವಲ ಪಾತ್ರವಾಗಿದ್ದಾಳೆ. ಇಲ್ಲ ಅವಳು ತನ್ನ ಅಂತ ಸತ್ವವನ್ನು ಎತ್ತಿ ಹಿಡಿಯಲು ನಾನಾ ಕಷ್ಟಗಳನ್ನು ಎದುರಿಸಬೇಕಾಯಿತು.

ಭಾರತೀಯ ಜೀವನದಲ್ಲಿ ಸಾಂಸ್ಕೃತಿಕ ಕೇಂದ್ರ ಬಿಂದು ಹೆಣ್ಣು, ಇಲ್ಲಿ ಹೆಣ್ಣಿನ ಬಗ್ಗೆ ಇರುವ ಪರಿಕಲ್ಪನೆ ಶೀಲ, ಚಾರಿತ್ರ್ಯ, ತ್ಯಾಗ, ಬಲಿದಾನಗಳು ಆದಿಕಾಲದಿಂದ ಇಂದಿನವರೆಗೂ ಚಾಲ್ತಿಯಲ್ಲಿವೆ. ಕಾಲಬದಲಾಗುತ್ತಾ ಹೋದಂತೆ ಹೆಣ್ಣಿನ ಸ್ಥಾನಮಾನದ ಸ್ಥಿತಿಗಳು ಬದಲಾಗುತ್ತಾ ಹೋಗುತ್ತಿವೆ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಅಭಿವ್ಯಕ್ತಿಗೆ ಅವಕಾಶವನ್ನು ನೀಡಿಲ್ಲ, ಅನಾದಿಕಾದಿಂದಲೂ ಮಹಿಳೆಯೂ ತನ್ನದೇ ಆದ ಸ್ಥಾನಮಾನಗಳನ್ನು ಹೊಂದಿದ್ದಾಳೆ. ಪುರುಷರಿಗಿಂತ ಎಲ್ಲ ವಿಷಯದಲ್ಲೂ ಭಿನ್ನವಾಗಿದ್ದು ವಿವಿಧ ಕ್ಷೇತ್ರಗಳಲ್ಲಿ ಪುರುಷನಷ್ಟೆ ಸಾಧನೆ ಮಾಡಿದ್ದಾಳೆ. ಅಂತಹ ಹೆಣ್ಣು ಲಾಲನೆ, ಪಾಲನೆ, ಪ್ರೀತಿ, ಮಮತೆ, ಉದಾರತೆ ಕರುಣೆ ಜಯಾಶೀಲತೆ, ತಾಳ್ಮೆ, ಸಹನೆ, ಭಕ್ತಿ ಪತಿವ್ರತೆಗೆ ಹೆಸರಾದವಳು, ಅವಳಿಗೆ ಗಂಡ, ಮನೆ, ಮಕ್ಕಳೇ ಸರ್ವಸ್ವ, ಸ್ವರ್ಗ. ಹೆಣ್ಣು ತನ್ನ ಜೀವನದಲ್ಲಿ ಹಂತ ಹಂತವಾಗಿ ಸ್ಥಾನ ಪಡೆಯುತ್ತಾ ಹೋಗುತ್ತಾಳೆ. ತಾಯಿ, ಹೆಂಡತಿ, ಅತ್ತೆ, ಅತ್ತಿಗೆ, ನಾದಿನಿ, ಅಕ್ಕ, ತಂಗಿ, ಸೊಸೆ, ಚಿಕ್ಕಮ್ಮ ದೊಡ್ಡಮ್ಮ ಓರಗಿತ್ತಿ, ಎಂಬ ಸ್ಥಾನಗಳ ಮೂಲಕ ಕುಟುಂಬ ಮತ್ತು ಪುರುಷರ ಅಗತ್ಯಗಳನ್ನು ಪೂರೈಸುತ್ತಾಳೆ.

ತಾಯಿಯನ್ನು ಮೊದಲ ಗುರು ಎಂದು ಹೇಳಿ ಹೆಣ್ಣನ್ನು ಭೂಮಿಗೆ ಹೋಲಿಸಿದ್ದಾರೆ. ಏಕೆಂದರೆ ಹೆಣ್ಣಿಗೆ ಭೂವಿಗೆ ಇರುವಷ್ಟು ಸಹನೆ ಇದೆ, ಆದ್ದರಿಂದ ಅವಳನ್ನು ತಿರಸ್ಕರಿಸಬಾರದು. ಅವಳಿಲ್ಲದಿರುವ ಸೃಷ್ಟಿ ಶೂನ್ಯ ಆದ್ದರಿಂದಲೇ ಸಂಚಿ ಹೊನ್ನಮ್ಮ ಹೇಳಿರುವ ಮಾತು ಅಕ್ಷರಃ ಸತ್ಯ ಎಂದು ಹೇಳಬಹುದು.

"ಪೆಣ್ಣು ಪೆಣ್ಣೆಂದೇಕೆ ಬೀಳುಗಳುವಿರಿ

ಪೆಣ್ಣಲ್ಲದೆ ನಮ್ಮನ್ನೆಲ್ಲ ಪೊರೆತ ತಾಯಿ" ಎಂದು ಹೇಳಿದ್ದಾರೆ.

ರಾಮಾಯಣ, ಮಹಾಭಾರತದ ಕಾಲದಿಂದಲೂ ಇಂದಿನವರೆಗೆ ಸ್ತ್ರೀ ಶೋಷಣೆಗೆ, ಅಪವಾದಗಳಿಗೆ, ಕಷ್ಟಗಳಿಗೆ ತುತ್ತಾಗಿದ್ದಾಳೆ, ಮೌಖಿಕರ ಬಾಯಲ್ಲಿ ಬರುವ ಕಾವ್ಯಗಳಲ್ಲಿಯೂ ಸಹ ಸ್ತ್ರೀ ಶೋಷಣೆಗಳಿಗೆ ಸಂಬಂಧಿಸಿದ ವಿಚಾರಗಳು ಅಡಕಗೊಂಡಿವೆ. ತೀ. ನಂ.ಶ್ರೀ, ಯವರ ಕೆರೆಗೆ ಹಾರ ಕಥನ ಗೀತೆಯಲ್ಲಿ ಕೆರೆಗೆ ನೀರುಬಾರದ ಕಾರಣ ಭಾಗೀರತಿಯನ್ನು ಕೆರೆಗೆ ಬಲಿ ನೀಡುವ ಸನ್ನಿವೇಶಗಳನ್ನು ಕಾಣಬಹುದು ಅದಕ್ಕಾಗಿ ಹೆಣ್ಣು ತನ್ನ ಅಸ್ತಿತ್ವ ಮತ್ತು ಅನನ್ಯತೆಯನ್ನು ಉಳಿಸಿಕೊಳ್ಳಲು ಪರದಾಡುವ ರೀತಿಯನ್ನು ಸಹ ಮೌಖಿಕರು ಇಲ್ಲಿ ಕಟ್ಟಿಕೊಟ್ಟಿದ್ದಾರೆ,

ಮೌಖಿಕ ಕಾವ್ಯಗಳಲ್ಲಿ ಹೆಣ್ಣನ್ನು ಯಾವ ರೀತಿ ಅರ್ಥೈಸಿದ್ದಾರೆ ಹಾಗೂ ಅಲ್ಲಿ ನಡೆಯುವ ಸಂಘರ್ಷಗಳ ಮೂಲಕ ಹೆಣ್ಣಿನ ಧ್ವನಿಯನ್ನು ಗುರುತಿಸಿ ಅವಳ ಅಸ್ತಿತ್ವದ ಬಗ್ಗೆ ಪ್ರಶ್ನೆ ಎತ್ತುವುದರ ಮೂಲಕ ಹೆಣ್ಣನ್ನು ಮತ್ತು ಅದರ ಅನುಭವಗಳನ್ನು ಇಲ್ಲಿ ಅರ್ಥೈಸಲಾಗುತ್ತದೆ. ಹೆಣ್ಣು ಸಾಧ್ವಿ, ತ್ಯಾಗಿ, ಪತಿವ್ರತೆ, ಎಂದು ಅಥವಾ ದುಷ್ಟೆ, ಕಪಟಿ, ರಕ್ಕಸಿ ಎಂದೂ ಎರಡೂ ರೀತಿಯಲ್ಲಿ ವರ್ಣಿಸಲ್ಪಟ್ಟಿದೆ. "ಮೌಖಿಕ ಪರಂಪರೆಯಲ್ಲಿ ಹೆಣ್ಣಿನ ಮಾತು ಇದೆ. ಲಿಖಿತ ಪರಂಪರೆಯಲ್ಲಿ ಹೆಣ್ಣಿನ ಮೂಕತೆ ಇದೆ,

ಮಾತೃರೂಪಿ ಸಂಸ್ಕೃತಿಯಲ್ಲಿ ಹೆಣ್ಣು ಅಸ್ತಿತ್ವ ಪಡೆದಿದ್ದಾಳೆ. ಪಿತೃರೂಪಿ ವ್ಯವಸ್ಥೆಯಲ್ಲಿ ಹೆಣ್ಣು ಅದೃಶ್ಯಳಾಗಿದ್ದಾಳೆ. ಎಂದರೆ ಅದು ಪುರುಷ ಶಕ್ತಿ ರಾಜಕಾರಣಕ್ಕೂ ನೇರವಾಗಿ ಸಂಬಂಧಿಸಿದ್ದಾಗಿದೆ. ಭಾರತೀಯರಲ್ಲಿ ಹೆಣ್ತನವನ್ನು ಈ ಮಾತು ಮೂಕತೆ, ಅಸ್ತಿತ್ವ ಅದೃಶ್ಯಗಳ ಸಂಕೀರ್ಣ ಸ್ಥಿತಿಯಲ್ಲಿ ಪರಿಭಾವಿಸಬೇಕಾಗಿದೆ"[೬೭] ಹೆಣ್ಣು ಈ ಎರಡು ನೆಲೆಗಳಲ್ಲಿ ಕಾಣುವುದರೊಂದಿಗೆ ಇಂದು ಸಮಾಜದಲ್ಲಿ ತನ್ನನ್ನು ತಾನು ಕಂಡುಕೊಳ್ಳುತ್ತಾಳೆ. ಆದರೂ ಹೆಣ್ಣಿನ ಅಸ್ತಿತ್ವ ಪುರುಷನ ಅಧೀನದಲ್ಲಿಯೇ ನಿರ್ಮಿಸಿಕೊಳ್ಳುತ್ತದೆ. ಅಥವಾ ಪುರುಷನೆ ನಿರ್ಮಿಸಿಕೊಟ್ಟ ಸಮಾಜದಲ್ಲಿಯೇ ಇವಳ ಮಾತುಗಳು ಮೂಕವಾಗಿರುತ್ತವೆ.

ಮಾದೇಶ್ವರನ ಕಾವ್ಯದಲ್ಲಿ ಬರುವ ಅನೇಕ ಮಹಿಳಾ ಪಾತ್ರಗಳಾದ ಬೇವಿನಟ್ಟಿ ಕಾಳಮ್ಮ, ಇಕ್ಕೇರಿ ದೇವಮ್ಮ, ಸರಗೂರಿನ ಮೂಗಯ್ಯನ ಹೆಂಡತಿ ರಾಮವ್ವ ಇವರೆಲ್ಲ ದೈವಶಕ್ತಿಯ ಪ್ರತಿರೋಧವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಪ್ರಯತ್ನಪಟ್ಟರೆ, ಹಲಗೇಗೌಡ ಮಹದೇವಮ್ಮ ಮತ್ತು ಸಂಕಮ್ಮ ಇವರು ಶಿಷ್ಟಪರಿಪಾಲನೆಯ ಮೂಲಕ ತಮ್ಮದೇ ವಿಶಿಷ್ಟ ರೀತಿಯ ಅನನ್ಯತೆಯನ್ನು ಉಳಿಸಿಕೊಂಡು ಬರುತ್ತಾರೆ. ಇಲ್ಲಿ ಮಹಿಳೆಯು ತನ್ನದೇ ಅಸ್ತಿತ್ವ ಮತ್ತು ಅನನ್ಯತೆಯನ್ನು ಉಳಿಸಿಕೊಳ್ಳುವಲ್ಲಿ ಹೆಣಗಾಡುತ್ತಿರುತ್ತಾರೆ, ಅದರಲ್ಲಿ ಬಂಜೆತನವು ಮುಖ್ಯವಾಗಿ ಧಾರ್ಮಿಕ ನಂಬಿಕೆಯಾಗಿ ಸ್ತ್ರೀಯರ ಬದುಕು ರೂಪುಗೊಂಡಿದ್ದನ್ನು ಕಾಣಬಹುದು. ಸಮಾಜದ ಕುಟುಂಬ ವ್ಯವಸ್ಥೆಯಲ್ಲಿ ಅನುಭವಿಸುವ ಅವಮಾನ ಬಹಿಷ್ಕಾರಗಳನ್ನು ಬಂಜೆಯ ದಾರುಣ ದು:ಖವನ್ನು ಮಲೆಮಾದೇಶ್ವರನ ಕಾವ್ಯದಲ್ಲಿ ಕಾಣಬಹುದು. ಸೋಲಿಗರ ನೀಲೇಗೌಡ ಜುಂಜೇಗೌಡನ ಕಿರಿಯಮಗಳು ಸತ್ಯಶರಣೆ ಸಂಕಮ್ಮನನ್ನು ತಾನೇ ಮೆಚ್ಚಿ ಮದುವೆಯಾಗಿ ೩ವರ್ಷಗಳು ಕಳೆದರೂ ಮಕ್ಕಳಾಗದಿದ್ದಾಗ ಸಂಕಮ್ಮನ ಓರಗಿತ್ತಿಯರು ಅತ್ತಿಗೆ ನಾದಿನಿಯರು ಇವಳನ್ನು ಹೀಯಾಳಿಸುತ್ತಾರೆ.

"ಇವಳು ಹುಟ್ಟಿ ಬಂದ ಮೂವತ್ತು
ಮುಂಡೇ ಮಾರಿ ಹನ್ನೆರಡು
ಮೈಯಾನ ಬಣ್ಣ ಕೆಡಲಿಲ್ಲ
ಮೊಖದ ಕಲೆಯೇ ತಪ್ಪಾಲಲ್ಲಿ
ದಟ್ಟಾ ಧರಣಿ ಸಂಕೆಣ್ಣು
ಹುಟ್ಟೂ ಬಂಜೆ ಸಂಕೆಣ್ಣು
ಮಕ್ಕಳ ಫಲವೇ ಮೊದಲಿಲ್ಲ
ಎದ್ದು ಮುಖದ ನೋಡಿದರೆ
ನಾವು ಬಂಜೇರಾಗುವವು
ಮಾಡಿದ ಅಡಿಗೆ ಉಂಡಾರೆ

ನಾವು ಬಂಜೇರಾಗುವೆವು

ಮೀದ ನೀರ ಬಾಟಿದರೆ

ನಾವು ಬಂಜೇರಾಯ್ತಿವಿ

ನಮ್ಮ ಮಕ್ಕಳು ಬಂಜೇರಾಗುವರು"[೪೮]

ಎಂಬ ಅನೇಕ ಅವಮಾನಗಳನ್ನು ಪ್ರತಿನಿತ್ಯ ಎದುರಿಸುತ್ತಿದ್ದಳು. ಅವಳು ಮನೆಯ ಹಿತಕ್ಕಾಗಿ ಸಹಿಸಿಕೊಂಡು ಹೋಗಬೇಕಾದ ಪರಿಸ್ಥಿತಿಯನ್ನು ಪುರುಷ ಸಮಾಜ ನಿರ್ಮಿಸಿರುತ್ತದೆ.

ಮಾದೇಶ್ವರ ಕಾವ್ಯದಲ್ಲಿ ಬರುವ ಸಂಕಮ್ಮನ ಸಾಲಿನಲ್ಲಿ ನೀಲೇಗೌಡ ಸಂಕಮ್ಮನಿಗೆ ಬಲಗೈ ಭಾಷೆ ಕೇಳುವ ಸಂದರ್ಭದಲ್ಲಿ "ನೀಲೇಗೌಡ ಪಾತಿವ್ರತ್ಯವನ್ನು ಒಂದು ಮೌಲ್ಯವಾಗಿ ಪ್ರತಿನಿಧಿಸಿದರೆ ಸಂಕಮ್ಮ ಹೆಣ್ಣಿನ ಸ್ವಾಭಿಮಾನ ಆತ್ಮಸಾಕ್ಷಿಯನ್ನು ಒಂದು ಮೌಲ್ಯವಾಗಿ ಮಂಡಿಸುತ್ತಾರೆ."[೪೯]

"ಸಂಕಮ್ಮ ನೀನು ಕಟ್ಟಿದ ತೆರುವ ತಕ್ಕಮ್ಯ

ನನ್ನ ಹಟ್ಟಿಯಂದಾಚೆ ಕಳುವಯ್ಯ

ನಿನ್ನ ದಾರಿಯ ನೀನು ನೋಡಯ್ಯ

ನೆನ್ನ ದಾರಿಯ ನಾನು ನೋಡ್ಡೀನಿ

ನಾನು ಬಲಗೈ ಮುಟ್ಟಿ ಭಾಷೆ ಕೊಡುವಂತ

ಮಗಳಲ್ಲಿ ಹೋಗೋ ಯಜಮಾನ"[೫೦]

ಎಂದು ಪ್ರತಿಸವಾಲು ಒಡ್ಡುತ್ತಾಳೆ. ಈ ಇಡೀ ಪ್ರಕರಣ ಹೇರಲಾಗುತ್ತಿರುವ ಪುರುಷ ಪ್ರಧಾನ ಮೌಲ್ಯಗಳನ್ನು ಸಂಕಮ್ಮ ತೀವ್ರವಾಗಿ ನಿರಾಕರಿಸುವುದರೊಂದಿಗೆ ಇಡೀ ಮಹಿಳೆಯರ ಪರವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡುವುದನ್ನು ಕಾಣಬಹುದು.

ಈ ಕಾವ್ಯದಲ್ಲಿ ಬರುವ ಪ್ರಮುಖ ಮತ್ತೊಂದು ಮಹಿಳಾ ಪಾತ್ರವಾದ ಕಾಳಮ್ಮನ ವ್ಯಕ್ತಿತ್ವ ತನ್ನ ಒರಟು ಮಾತು, ಗಡಸು ವ್ಯಕ್ತಿತ್ವಗಳಿಂದಲೆ ಮಾದೇಶ್ವರನ ಕೆಂಗಣ್ಣಿಗೆ ಗುರಿಯಾಗುತ್ತಾಳೆ. ಬೇವಿನ ಕಾಳಮ್ಮ ಮಾತೃ ಪ್ರಧಾನತೆಯ ಪ್ರತೀಕವಾಗಿ ಆರ್ಥಿಕ ಸಬಲತೆ ಸಾಧಿಸಿದ ಹೆಣ್ಣಾಗಿ, ಸ್ತ್ರೀ ಪ್ರಧಾನ ವ್ಯವಸ್ಥೆಯ ಪ್ರತಿರೂಪವಾಗಿ ಕಂಡುಬರುತ್ತಾಳೆ ಆದರೆ ಕಾಳಮ್ಮ ತನ್ನ ಅಸ್ತಿತ್ವವನ್ನು ಬಿಟ್ಟುಕೊಡಲೊಪ್ಪದೆ

"ಪರದೇಸಿ ಜಂಗಮ

ನನ್ನ ಮುನ್ನೂರು ಮೂವತ್ತು ಕಂಡ್ಗ

ವಿಳ್ಳನ ಕಾಸಿಯಲ್ಲಿ

ಇಲ್ಲಿ ಬೂಬೊನಿಯಾಗೋದ್ರು ಸರಿಯೇ

ನಾನು ದಾನ ಕೊಡುವಂತ ಮಗಳಲ್ಲಿ

ದಾನದ ಕೈ ಬರೋದಿಲ್ಲ"[೫೧]

ಎಂದು ಮಾದಪ್ಪನ ಒಕ್ಕಲನ್ನು ನಿರಾಕರಿಸುತ್ತಾಳೆ

ಇಲ್ಲಿ ಕಾಳಮ್ಮನಿಗೆ ತನ್ನ ಗಂಡ ಹುಲಿಬಾಯಿಗೆ ಸಿಕ್ಕಿ ತುಂಡು ತುಂಡಾಗಿ ಸತ್ತರೂ ಅಧೀನಳಾಗದೆ ಬೆಳೆಯ ರಕ್ಷಣೆಯೇ ಮುಖ್ಯವಾಗುತ್ತದೆ. ಗಂಡನ ಅಸ್ತಿತ್ವ, ಗಂಡಸರ ಅವಲಂಬನೆ ಕಾಳಮ್ಮನಿಗೆ ಮುಖ್ಯವಾಗಿಲ್ಲ. ಅವಳ ಸ್ವಾಭಿಮಾನ ಮಹತ್ವದ ವಿಚಾರವಾಗುತ್ತದೆ. ಭಿಕ್ಷಗೆ ಎಳ್ಳು ಧಾನ್ಯ ನೀಡುವುದರಿಂದ ಅವಳ ಬೆಳೆ ಕಡಿಮೆಯಾಗುತ್ತದೆ ಎಂಬುದು ಸಾಂಕೇತಿಕವಾಗಿ ಕಂಡು ಬಂದರೆ ಮಾದಪ್ಪನಿಗೆ ಭಿಕ್ಷೆ ಕೊಡುವ ಮೂಲಕ ಅವನ ಒಕ್ಕಲಕ್ಕೆ ಶರಣಾಗುವುದಿಲ್ಲ ಎಂಬುದು ಅವಳ ಅಸ್ತಿತ್ವದ ಹೋರಾಟದಲ್ಲಿ ಕಂಡು ಬರುತ್ತದೆ. ಯಾವುದೇ ಕಾರಣಕ್ಕೂ ಕಾಳಮ್ಮ ತನ್ನ ಅಸ್ತಿತ್ವವನ್ನು ಕೊಡಲೊಪ್ಪುವುದಿಲ್ಲ. ಈ ಸ್ವಾಭಿಮಾನ ಮಾದೇಶ್ವರನಿಗೆ ಅಹಂಕಾರವಾಗಿ, ಸೊಕ್ಕಾಗಿ ಕಾಣುತ್ತದೆ, ಆದ್ದರಿಂದ ಮಾದಪ್ಪ ಕಾಳಮ್ಮನನ್ನು ಸರ್ವನಾಶಮಾಡುವುದರೊಂದಿಗೆ ಪುರುಷ ಸಮಾಜ ಹೆಣ್ಣಿನ ಅಸ್ತಿತ್ವವನ್ನು ಕಿತ್ತುಕೊಳ್ಳುವುದರ ಮೂಲಕ ತನ್ನ ಗೆಲುವನ್ನು ಸಾಧಿಸಿಕೊಳ್ಳುತ್ತಾನೆ.

ಮಂಟೇಸ್ವಾಮಿ ಧರೆಗೆ ದೊಡ್ಡವರು ಎಂದು ಕರೆಯುವುದರಲ್ಲೇ ಒಂದು ತರ್ಕವಿದೆ, ಎಲ್ಲಾ ಸಾಂಸ್ಕೃತಿಕ ನಾಯಕರಂತೆ ಇವರು ವರದಿಂದ ಶಾಪದಿಂದಲೇ ಹುಟ್ಟಿದ್ದಲ್ಲ. ಇವರೇ ಜಗತ್ತಿನ ಸೃಷ್ಟಿಕರ್ತ. ಇವರಿಗೆ ಎಲ್ಲಾ ಪಂಥದವರ ಒಕ್ಕಲನ್ನು ಪಡೆಯುವುದು ಮುಖ್ಯವಾಗಿರುತ್ತದೆ. ಮಂಟೇಸ್ವಾಮಿ ಮಹಿಳೆಯರ ವಿಷಯದಲ್ಲೂ ಸಹ ಒಂದು ಸಂಸ್ಕೃತಿಯನ್ನೇ ಹುಟ್ಟುಹಾಕುತ್ತಾನೆ. ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ನೀಲಮ್ಮ, ದೊಡ್ಡಮ್ಮತಾಯಿ, ಚೆನ್ನಾಜಮ್ಮ ಎಂಬ ಸ್ತ್ರೀ ಪಾತ್ರಗಳು ಭಕ್ತಿಗೆ ಸಂಸ್ಕೃತಿಗೆ ಗುರುಸೇವೆಗೆ ಹೆಸರಾಗುವುದರೊಂದಿಗೆ ತಮ್ಮದೇ ಅಸ್ತಿತ್ವವನ್ನು ನಿರ್ಮಿಸಿಕೊಂಡಿದ್ದಾರೆ. ಇವರ ಭಕ್ತಿಯ ಅನನ್ಯತೆಯು ಸಮಾಜದಲ್ಲಿ ಒಂದು ಆಚರಣೆಯಾಗಿ ಕೆಲ ಸಮುದಾಯಗಳು ನಡೆಸಿಕೊಂಡು ಬಂದಿವೆ.

ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ಕಲ್ಯಾಣ ಪಟ್ಟಣದ ಸಾಲು ಪ್ರಮುಖವಾದ ಭಾಗವಾಗಿದೆ. ಇಲ್ಲಿ ಮಂಟೇಸ್ವಾಮಿ ಬಸವಣ್ಣ ಮತ್ತು ನೀಲಮ್ಮರ ಭಕ್ತಿಯನ್ನು ಇಡೀ ಪ್ರಪಂಚಕ್ಕೆ ತಿಳಿಸಬೇಕೆಂದು ಕಲ್ಯಾಣ ಪಟ್ಟಣಕ್ಕೆ ಅಸಹ್ಯಕರ ವೇಷದ ರೋಗಿಯಾಗಿ ಪ್ರವೇಶ ಪಡೆದು ದಿಗ್ಭ್ರಮೆಗೊಳಿಸುತ್ತಾರೆ.

"ಅಲ್ಲಿರುವಂಥ ಗುರುವೆ

ಸತ್ಯ ಶರಣರ ದುಡವ

ನಾನೇ ನೋಡಲೇಬೇಕು

ಶರಣರ ಭಕುತಿ ನಾನೇ ತಿಳಿಯಲೇಬೇಕು ಅಂತ ಹೇಳಿ

ಅವರು ಕಾಲುಚೊತ್ತು ಮಾಡಿ

ಗುರುವೇ ಕೈ ಚೊತ್ತು ಮಡಿ

ಅವರು ಕುಷ್ಟಾ ರೋಗಿಯಾಸವನ್ನೆ

ತಾಳಿಕಂಡರು ಮಾಯಿಕಾರ ॥ ಸಿದ್ದಯ ॥[೫೨]

ಮಂಟೇಸ್ವಾಮಿ ಕಲ್ಯಾಣದ ಒಳಗೆ ನುಗ್ಗಲು ಹೋಗುವಾಗ ಕಾವಲುಗಾರ ಕಟುಕರ ಸಂಗಯ್ಯ ತಡೆದು ಯಕ್ಕತ್ತಿನ ಮೇಲೆ ಗುದ್ದುತ್ತಾನೆ. ಆ ಏಟು ಬಸವಣ್ಣ ಮತ್ತು ನೀಲಮ್ಮರಿಗೆ ಬೀಳುತ್ತದೆ. ಎಚ್ಚರಗೊಂಡ ದಂಪತಿಗಳು ನಾಲಿಗೆ ಇಲ್ಲದ ಗಂಟೆ, ಕುಡುವಿಲ್ಲದ ನಗಾರಿ ಹೊಡೆದುಕೊಳ್ಳವುದನ್ನು ಕೇಳಿ, ಕಲ್ಯಾಣಕ್ಕೆ ಯಾರೋ ಮಹಾತ್ಮರು ಬಂದಿದ್ದಾರೆ ಎಂದು ಬಸವಣ್ಣ ನೀಲಮ್ಮ ದಂಪತಿಗಳು ಮಹಾತ್ಮರಾದ ಮಂಟೇಸ್ವಾಮಿಯನ್ನು ಹುಡುಕಿಕೊಂಡು ಹೊರಡುತ್ತಾರೆ. "ಮಂಟೇಸ್ವಾಮಿ ಮಾದಿಗರ ಕೇರಿಯಲ್ಲಿಯ ತಿಪ್ಪೆಗುಂಡಿಯಲ್ಲಿ ಬಿದ್ದಿರುತ್ತಾರೆ. ಆಗ ಮಂಟೇಸ್ವಾಮಿಯ ಕೈ ಹಿಡಿದು ಮೇಲೆತ್ತಲು ಹೋದಾಗ ಕೈಹಿಡಿದರೆ ಕೈ, ಕಾಲು ಹಿಡಿದರೆ ಕಾಲು ಕಿತ್ತುಬರುತ್ತದೆ. ಹೀಗೆ ಶರೀರದ ಅವಯವಗಳೆಲ್ಲವೂ ಕಿತ್ತು ಕಿತ್ತು ಬರುತ್ತಿದ್ದಾಗ ಆ ಅವಯವಗಳ ಪೊಟ್ಟಣವನ್ನು ಕಟ್ಟಿ ಬಸವಣ್ಣ ತಲೆಯ ಮೇಲೆ ಹೊತ್ತುಕೊಳ್ಳುತ್ತಾನೆ. ನೀಲಮ್ಮ ತಲೆಬುರುಡೆಯನ್ನು ಹಿಡಿದುಕೊಳ್ಳುತ್ತಾಳೆ"[೫೩]

ಬಸವಣ್ಣ- ನೀಲಮ್ಮ ಮಂಟೇಸ್ವಾಮಿ ಅವಯವಗಳನ್ನು ಉರಿಗದ್ದಿಗೆಯ ಮೇಲೆ ಇಟ್ಟು ಪೂಜಿಸ ತೊಡಗುತ್ತಾರೆ. ಮಂಟೇಸ್ವಾಮಿಯ ಅವಯವಗಳನ್ನು ಅಲಂಕರಿಸಲು ನೀಲಮ್ಮ ವಿಧ ವಿಧ ಹೂಗಳನ್ನು ಕರೆಯುವ ಘಟನೆಯು ಅವಳು ಮಂಟೇಸ್ವಾಮಿಯ ಮೇಲೆ ಇಟ್ಟಿರುವ ಭಕ್ತಿಯ ಅಗಾಧತೆಯನ್ನು ತಿಳಿಸುತ್ತದೆ.

"ಅಮ್ಮ ಓಣಿಲಿ ಹುಟ್ಟವಳೆ
ಓಣಿ ಬೆಳೆಯುವಳೆ
ಹೋಗುವರ ಸೆರಗು ಹಿಡಿಯವಾಳೆ
ಅಮ್ಮಾ ಹೋಗುವರ ಸೆರಗ ಹಿಡಿವಂತ
ಗಂಡು ಉತ್ತುರಾಣಿ ತಾಳ
ಶಿವನಾ ಪೂಜೆಗೆ ಬರಬೇಕು
ಅಮ್ಮಾ ಬೇಲೀಲಿ ಹುಟ್ಟವಳೆ
ಬೇಲಿ ಮ್ಯಾಲೆ ಬೆಳಿಯವಳೆ
ಅಮ್ಮ ನಲ್ಲರದ ಸಿಗುವಾ
ನಗೀವಂತಾ ತುಂದೆ ಹೂವೇ
ಶಿವನಾ ಪೂಜೆಗೆ ಬರಬೇಕು
ಅಮ್ಮಾ ಬೆಟ್ಟದಲ್ಲುಟ್ಟವಳೆ
ಕಲ್ಲು ಬಂಡೇಲಿ ಬೆಳೆಯವಳೆ

ಅಮ್ಮಾ ಸೂರ್ಯನಿಗೆ ಕೈಯ ಮುಗಿಯವಳೆ
ಅಮ್ಮಾ ಸೂರ್ಯನಿಗೆ ಕೈಯ ನೀನು
ಮುಗಿವಂತ ಸೂರ್ಯ ಕಾಂತಿಯ ಹೂವೆ
ಶಿವನ ಪೂಜೆಗೆ ಬರಬೇಕು
ಅಮ್ಮಾ ನೀರಲ್ಲಿ ಹುಟ್ಟವಳೆ
ನೀರಲ್ಲಿ ಬೆಳಿಯಾವಳೇ
ನಲ್ಲರದ ಸಿಗುವ ನೆಗಿಯೋವಳೆ
ಅಮ್ಮಾನಲ್ಲಿರದ ಸಿಗುವ
ಸಿಗುವಂತ ತಾವರೆ ಹೂವೇ
ಸ್ವಾಮಿ ಪೂಜೆಗೆ ಬರಬೇಕು
ಅಮ್ಮಾ ಸಂದುಗು ಸೂತುಕವಾಗಿ
ಸರ್ರಾತ್ರಿಗೆ ಬಸುರಾಗಿ
ಮುಂಜಾನೆಗೆ ಮಗನ ಪಡೆಯೋಳ
ಅಮ್ಮಾ ಮುಂಜಾನೆಗೆ ಮಗನ
ಪಡೆವಂತ ಸಾಮಂತಗೆ ಹೊವೆ
ಶಿವನಾ ಪೂಜೆಗೆ ಬರಬೇಕು
ಅಮ್ಮ ಹರಿಸಿಣದ ನೀರೆಗೆ
ಆರುವತ್ತೈದು ಸಿರಿಯ ಊಡಿ
ಪುರಷನಿಲ್ಲದ ಬಾಲೆ ಬಸುರಾಗಿ
ಅಮ್ಮ ಪುರಷನಿಲ್ಲದ ಬಾಲೆ
ಬಸುರಾದ ಚೆಂಡುಮಲ್ಲಿಗಹೊವೆ
ಶಿವನಪೂಜೆಗೆ ಬರಬೇಕು
ಅಯ್ಯ ಗಂಜಿಯ ಸೇರೆಗೆ
ಬನಕನಿಂದ ಸಿರಯ ವಾಡಿ
ಗಂಡನಿಲ್ಲದ ಬಾಲೆ ಗರ್ಭಿಣಿಯಾಗಿ
ಅಮ್ಮ ಗಂಡನಿಲ್ಲದ ಬಾಲೆ
ಗರ್ಭಿಣಿಯಾದೆ ಗಣಗಲೂವೆ

ಸ್ವಾಮಿ ಪೂಜೆಗೆ ಬರಬೇಕು
ಅಮ್ಮ ಕಾಗುಡುಬಾಡಿಯ ಒಳಗೆ
ಜಾಲ್ನಾಡಿ ಬೆಳೀಯವಳೆ
ಕಾವಿ ಜೋತ್ರಕ್ನ ಅಮ್ಮ ಬರುವಾಳೆ
ಅಮ್ಮ ಕಾವಿ ಜೋತುರ್ನೆ ನೀನು
ಅಂಬರದ ಕೆಂಡ ಸಂಪಿಗೆ ಹೂವೇ
ಸ್ವಾಮಿ ಪೂಜೆಗೆ ಬರಬೇಕು
ಅಮ್ಮ ಅಂಡು ಮಲ್ಲಿಗೋ ಹೂವೆ
ದುಂಡು ಮಲ್ಲಿಗೆ ಹೂವೇ
ದಂಡು ಗೋಪುರದ ತುಳಸೀಮೆ
ತುಳದೀ ಪಚ್ಚೆಯ ತೆನೆಯ
ಸ್ವಾಮಿ ಪೂಜೆಗೆ ಬರಬೇಕು
ನಮ್ಮ ಸ್ವಾಮಿ ಪೂಜೆಗೆ ನೀವು
ಬರಬೇಕು ಎನುತೆಳಿ"[೫೪]

ಎಂದು ನೀಲಮ್ಮ ನುಡಿಯುವುದು ನಿಸರ್ಗ ಸೌಂದರ್ಯದೊಂದಿಗೆ ಅವಳು ಮಂಟೇಸ್ವಾಮಿಯಲ್ಲಿ ಇಟ್ಟಿರುವ ಭಕ್ತಿಯ ನಿರೂಪಣೆ ಅಡಗಿದೆ. ನೀಲಮ್ಮ ಈ ರೀತಿ ಸೊಗಸಾಗಿ ಭಕ್ತಿಯಿಂದ ಪೂಜಿಸಿದ ನಂತರ ಮಂಟೇಸ್ವಾಮಿ ನಿಜರೂಪ ತಾಳಿ ಸತ್ಯವನ್ನು ಭಕ್ತಿಗೆ ಮೆಚ್ಚಿದ್ದೇನೆ, ಆದಿ ಕಲ್ಯಾಣ ಪಟ್ಟಣ ಭೂಮಿ ಇರುವವರೆಗೂ ನಿಮ್ಮ ಭಕ್ತಿ ಸ್ಥಿರವಾಗಿರಲಿ ಎಂದು ಆಶೀರ್ವಾದ ಮಾಡುತ್ತಾರೆ. ನೀಲಮ್ಮನ ಭಕ್ತಿ ಎಂತಹುದು ಎಂದು ಮಂಟೇಸ್ವಾಮಿ ಕಲ್ಯಾಣ ಪಟ್ಟಣದ ಸಾಲಿನ ಮೂಲಕ ಜಗತ್ತಿಗೆ ತೋರಿಸಿದರೆ, ನೀಲಮ್ಮ ತನ್ನ ಸಾಧ್ವಿ ಭಕ್ತಿ, ಪಾತಿವ್ರತ್ಯದ ಮೂಲಕವೇ ಇಂದಿಗೂ ಕಲ್ಯಾಣದಲ್ಲಿ ಪೂಜೆಗೆ ಅರ್ಹಳಾಗಿದ್ದಾಳೆ, ನೀಲಮ್ಮನ ಭಕ್ತಿ ಅವಳ ಅಸ್ತಿತ್ವಕ್ಕೆ ಹೊಸ ಅರ್ಥವನ್ನು ತಂದು ಕೊಟ್ಟಿದೆ.

ಮಂಟೇಸ್ವಾಮಿ ಕಾವ್ಯದಲ್ಲಿ ತನ್ನ ಭಕ್ತಿ ಭಾವದ ಮೂಲಕವೇ ಸಮಾಜದಲ್ಲಿ ಅನನ್ಯವಾಗಿ ಉಳಿದಿರುವ ಮಹಿಳೆ ದೊಡ್ಡಮ್ಮತಾಯಿ. ದೊಡ್ಡಮ್ಮತಾಯಿಯನ್ನು ದುಡವುಳ್ಳ ದೇವತೆಯೆಂದು ಕರೆಯುತ್ತಾರೆ. ದೊಡ್ಡಮ್ಮತಾಯಿಯು ಸಹ ಸಮಾಜದಲ್ಲಿ ಇದ್ದಂತಹ ಅಡ್ಡಿ ಆತಂಕಗಳನ್ನು ಎದುರಿಸಿ ಮುತ್ತೇನ ಹಳ್ಳಿಯಲ್ಲಿ ತನ್ನದೇ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದ್ದಾಳೆ. ಈ ಮೂಲಕ ಪುರುಷ ಸಮಾಜ ನಿರ್ಮಿಸಿದ ಎಲ್ಲಾ ಸಂಪ್ರದಾಯಗಳನ್ನು ದಾಟಿ ಮಂಟೇಸ್ವಾಮಿಯ ಶಿಶುಮಗಳಾಗುವುದರೊಂದಿಗೆ ಸ್ತ್ರೀಪರವಾದ ಒಂದು ಹೊಸ ಪರಂಪರೆಯನ್ನೇ ಸೃಷ್ಟಿಸುತ್ತಾಳೆ.

ಜುಂಜಪ್ಪನ ಕಾವ್ಯ ಬುಡಕಟ್ಟು ಸಮುದಾಯದ ಮಹಾಕಾವ್ಯವಾಗಿದ್ದು ಈ ಕಾವ್ಯವು ೩ ತಲೆಮಾರುಗಳೊಂದಿಗೆ ಸಾಗುತ್ತದೆ. ಜುಂಜಪ್ಪನು ಮೂರನೇ ತಲಮಾರಿಗೆ ಸೇರಿದವನಾಗಿದ್ದು ತನ್ನ ಜೀವಿತದ ಕಾಲಾವಧಿಯಲ್ಲಿ ಸ್ತ್ರೀಗೆ ಇರಬೇಕಾದ ನೀತಿ–ನಿಯಮ, ಅವಳು ಹೊಂದಿರಬೇಕಾದ ನಿರ್ಭಂದ, ನಿಷೇಧಗಳನ್ನು ಹೇರುವುದನ್ನು ಕಾಣಬಹುದು. ಜುಂಜಪ್ಪನು ಪಶುಪಾಲಕನಾದರೂ ತನ್ನ ತಾಯಿ, ತಂಗಿ, ಕುಲಕ್ಕೆ ಅವರದೇ ಆದ ಸಂಪ್ರದಾಯಗಳನ್ನು ಹಾಕುತ್ತಾನೆ. ಜುಂಜಪ್ಪನ ತಂದೆ ಕೆಂಗರು ಮಲ್ಲೇಗೌಡ, ತಾಯಿ ಸಿನ್ನಮ್ಮ, ಇವರಿಗೆ ತುಂಬಾ ವರ್ಷ ಮಕ್ಕಳಾಗುವುದಿಲ್ಲ, ಬಂಜೆ ಎಂದು ಎಲ್ಲರಿಂದಲೂ ನಿಂದನೆಗೊಳಗಾಗುತ್ತಾಳೆ.

ನಿನ್ನಮ್ಮ ಬಂಜೆತನದಿಂದ ಅನುಭವಿಸಿದ ಅವಮಾನ ಈ ಕಾವ್ಯದಲ್ಲಿ ಕರುಣಾಜನಕವಾಗಿ ಚಿತ್ರತವಾಗಿದೆ.

"ಬರ್ರೇ ಎದ್ದುಮಕ್ಕೆ ಎದ್ದು ಬಂಜೇಮಕ ಯಾಕೆ ನೋಡತ್ತೀರ
ನಿಟ್ಟು ನಿರಬಂಜೆ ಕಂಬೇರ ಸಿನ್ನಮ್ಮ
ಋತುಮತಿಯಾಗಿ ಹನ್ನೆರಡು ವರ್ಷ ತೌರು ಮನೆಯೊಳಗಿದ್ಲು
ಮದುವೆಯಾಗಿ ಹನ್ನೆರಡು ವರ್ಷ ಗಂಡನ ಮನೆಯೊಲಗವುಳೆ
ಸರಿ ಕನ್ನೆ ಹೂವಿನಂಗೆ ಕೆನ್ನೆಗೆ ನೆರೆ ಬಂದವೆ
ಮಕ್ಕಳಾಗಲಿಲ್ಲ
ಎಂದು ಬಂಜೆ ಮಕ ನೋಡಬಾರದು
ಬಂಜೆರನ್ನ ಆದಿಶಕ್ತಿ ಹೊರೋದಿಲ್ಲ
ಆದಿ ಶಕ್ತಿ ಕಾಪಾಡುದಿಲ್ಲ
ಅಂತ ಹೀಯಾಳಿಸಿ ಬೈಕಂದಿಟ್ಟು
"ಹಿರೇ ಅಣ್ಣನ ಹಂಡ್ತಿ ಹಿರೇ ಅತ್ತಿಗೆ।"[೫೫]
ಒಮ್ಮೆ ಜೋಗಪ್ಪ  ಚಿನ್ನಮ್ಮನ ಮನೆ ಮುಂದೆ ಭಿಕ್ಷೆ ಬೇಡಲು ಬರುತ್ತಾನೆ
" ಸಿನ್ನಮ್ಮ ಅಕ್ಕಿ ಬೇಳೆ ತಗಂಡು ಬಂದ್ಲು
ಏನಮ್ಮ
ಹೆಣ್ಣು ಮಕ್ಕಳೆಷ್ಟು ಗಂಡು ಮಕ್ಳೆಷ್ಟು
ಅಂತ ಕೇಳ್ದ ಜೋಗಪ್ಪ
ಹೆಣ್ಣು ಗಂಡು ಕೂಡ ಇಲ್ಲಪ್ಪ ಅಂದ್ಲು
ಛೇ

ಬಂಜೆ ಕೈಯಾಗಲ ಭಿಕ್ಷೆ ನಾನು ನೀಡಿಸಗಮದಿಲ್ಲ

ಅಂತ ಹೊರಟೋಗಿ ಬಿಟ್ಟ ಜೋಗಯ್ಯ"[೫೬]

ಸಮಾಜದಲ್ಲಿ ಬಂಜೆ ಎನ್ನುವ ಕಾರಣಕ್ಕೆ ಅವಳಿಗೆ ಕುಟುಂಬ ಮತ್ತು ಸಮಾಜದಲ್ಲಿ ಮನ್ನಣೆ ನೀಡದೆ ಅವಳ ಅಸ್ತಿತ್ವವನ್ನೇ ಕಸಿದುಕೊಳ್ಳುತ್ತಾರೆ. ಧಾರ್ಮಿಕ ನಂಬಿಕೆಗೆ ಅನುಗುಣವಾಗಿ ಮಹಿಳೆ ಬಂಜೆ ಎಂಬ ಕಾರಣದಿಂದ ಸಮಾಜ ಮತ್ತು ಕುಟುಂಬ ವ್ಯವಸ್ಥೆಯಲ್ಲಿ ಅವಳು ಬಹಿಷ್ಕರಿಸಲ್ಪಟ್ಟಿದ್ದಾಳೆ. ಇದಕ್ಕೆ ಮೂಲ ಕಾರಣ ಪುರುಷ ಸಮಾಜ ನಿರ್ಮಿಸಿದ ಸಾಮಾಜಿಕ ಮೌಲ್ಯವಾಗಿದೆ.

ಸಿನ್ನಮ್ಮ ತನ್ನ ವಂಶದ ಮನೆದೇವರನ್ನು ಬೇಡಿ ಮಕ್ಕಳನ್ನು ಪಡೆದಳು. ಜುಂಜಪ್ಪನು ದೊಡ್ಡವನಾದಾಗ ತನ್ನ ತಾಯಿ ಎಲ್ಲೂ ಹೋಗಬಾರದು. ಅಣ್ಣಂದಿರ ಮನೆಗೆ ಹೋಗಬಾರದೆಂದು ಆಜ್ಞೆ ಮಾಡುತ್ತಾನೆ. ಆದರೆ ಸಿನ್ನಮ್ಮ ಜುಂಜಪ್ಪ ಮಾತನ್ನು ಮೀರಿ ಅನಿವಾರ್ಯ ಕಾರಣಗಳಿಂದ ಕಾಡಿಗೆ ಕಟ್ಟಿಗೆ ತರಲು ಹೋದಾಗ, ತನ್ನ ಅಣ್ಣಂದಿರು ಎದುರಾಗಿ ಅವಳನ್ನು ತವರಿಗೆ ಕರೆದುಕೊಂಡು ಹೋಗಿ ಬಾಗಿನವನ್ನು ಕೊಡುತ್ತಾರೆ.

ಜುಂಜಪ್ಪ ತನ್ನ ತಾಯಿಗೆ ಎಲ್ಲಿಗೂ ಹೋಗಬಾರದೆಂದು ನಿರ್ಭಂದವನ್ನು ಹೇರುವ ಪ್ರಸಂಗ

" ಅಗ್ಗೆಲ್ಲ ತಿರಕಂಡು ಬಾರಮ್ಮ

ನಾನು ಹೊಟ್ಟೆಯೊಳಗಿಟ್ಟಕೊಂತೀನಿ

ಒಂದು ರಾತ್ರಿ ನೀನು ಈ ಕಿರುವಿನಿಂದ ಆಶೆಲಿದ್ದ ಮ್ಯಾಲೆ

ನೀನು ತಾಯಲ್ಲ ನಾನು ಮಗನಲ್ಲ

ಏನಮ್ಮ

ಸರಿ ಹೆಣ್ಣು ಸೂರ್ಯ ಮುಣಿಕಿದ ಮ್ಯಾಲೆ

ನಮ್ಮ ಗೊಲ್ಲ ಗೊಲ್ಲಾಣಿಯೊಳಗೆ ಹುಟ್ಟಿದ ಮ್ಯಾಲೆ

ಇಲ್ಲಿ ಕೊಟ್ಟ ಮನೆಯೊಳಗೆ ಕಿರುವಿನಿಂದ ಒಳಗಡೆ ಇರಬೇಕು

ಇಲ್ಲಿ ಹುಟ್ಟಿದ ಮನೆಯೊಳಗೆ

ಕಳ್ಳೆಡಲ್ಲೆಯಿಂದ ಹೊರಗಡೆ ಇರಬೇಕು

ಊರೊಳಗೆ ಒಂದೇ ಒಂದು ರಾತ್ರಿ ನಿಂತವುಳೆ ಅಂದ್ರೆ

ಕೆಟ್ಟೋಗವ್ಳೆ ಅಂತ

ಅಲ್ಲಿಗೆ ಬ್ಯಾರೆ ಜಾತಿಯವಳಾದ್ಲು ಅಂತ

ಮನೆಯೊಳಕ ಬಿಟ್ಟು ಕೊಂಬಂದಿಲ್ಲ ಕಣಮ್ಮ

ಭೂಮಿ ಚಂದ್ರ ಇರೋವರ್ಗೂ ಇದೆ ನಡ್ಕೊಗಲಿ"[೫೭]

ಹೀಗೆ ಕಾಡಿಗೆ ಕಟ್ಟಿಗೆ ತರಲು ಹೋಗುತ್ತಿದ್ದ ತಾಯಿಗೆ ಜುಂಜಪ್ಪ ನಿರ್ಭಂದ ಹಾಕುತ್ತಾನೆ.

"ಇಂದಿಗೂ ನಮ್ಮ ವ್ಯವಸ್ಥೆಯಲ್ಲಿ ಹೆಣ್ಣು ಕತ್ತಲಾಗುವುದರ ಒಳಗಾಗಿ ಮನೆ ಸೇರಬೇಕು. ಮುಕ್ತವಾಗಿ ಅಲೆಯಬಾರದು. ಮನೆಯವರ ಪರವಾನಿಗೆ ಪಡೆದು ಹೊರಗೆ ಹೋಗಬೇಕು. ವಯಸ್ಸಿನ ಅಂತರವಿಲ್ಲದೆ ಸ್ತ್ರೀ ಯಾವಾಗಲೂ ಪುರುಷನ ಒಡನಾಡಿಯಲ್ಲಿರಬೇಕು. ಅಂದರೆ ತಂದೆ ತಾಯಿ, ಅಕ್ಕ ತಂಗಿ, ಅಣ್ಣ ತಮ್ಮಂದಿರು, ಮಗ ಅಥವಾ ಪತಿ ಜೊತೆ ಇರುವುದರಿಂದ ಸ್ತ್ರೀಗೆ ಒಂದು ರಕ್ಷಣೆ ಎನ್ನುವುದು ವ್ಯವಸ್ಥೆಯಲ್ಲಿ ನಿರ್ಮಿಸಲ್ಪಟ್ಟಿದೆ"[೫೮] ಈ ರೀತಿಯ ಒತ್ತಾಯವನ್ನು ಹೇರುವುದರೊಂದಿಗೆ ಜುಂಜಪ್ಪ ಮಹಿಳೆಗೆ ತನ್ನ ಸ್ವಂತ ಅಸ್ತಿತ್ವ ಇಲ್ಲ ಎಂಬುದನ್ನು ತೋರಿಸುತ್ತಾನೆ.

ಅಲ್ಲದೆ ಕೆಲವು ಸಂಪ್ರದಾಯ, ಪದ್ಧತಿಗಳ ಹೆಸರಲ್ಲಿ ಬಾಣಂತಿಯರಿಗೆ, ಋತುಮತಿಯಾದವರಿಗೂ ಕಟ್ಟೆಳೆಗಳನ್ನು ವಿಧಿಸುತ್ತಾನೆ.

"ಹೆತ್ತ ಬಾಣಂತಿಯರಿಗೆ ನನಗೆಂಗೆ ಗುಡ್ಲು ಕಟ್ಟಿಸ್ಕಂಡ್ನೊ
ನಮ್ಮಂಜಪ್ಪಂತಾವು
ಅದೇ ರೀತಿ ಗುಡ್ಲು ಕಟ್ಟಿ
ಇಡೀ ನಮ್ಮ ಗೊಲ್ಲಾಣಿಕೆಯಲ್ಲಾ
ಸರಿ ನಮ್ ತಂಗಿ ಮಾರಕ್ಕನಿಗೆ ಗುಡ್ಲಾಕಿದರೆ
ಹದಿನಾರು ದಿನ ಊರು ಬಿಟ್ಟು ಆಕಡೆ ಹಾಕಿಸ್ತಿನಿ
ಹದಿನಾರು ದಿನದವರೆಗೂ ಋತುವಾದ ಮಕ್ಕಳಿಗೆ
ಆ ಕಡೆ ಗುಡ್ಲು ಸುಟ್ಟು
ಸೂತ್ಕ ಕಳಕೊಂಡು ಒಳಿಕರ್ಕಂಬ್ಲಿ
ಈಚೆಯಾದ ಹೆಂಗಸ್ರು
ಐದು ದಿನ ಪಂಚೆಯ ಕಳೆದ್ ಮೇಲೆ
ಊರೊಳಕಿ ಬರಲಿ ಅಂತ
ಆಶೀರ್ವಾದ ಮಾಡಿಬಿಟ್ಟ ಜುಂಜಪ್ಪ"[೫೯]

ಇಲ್ಲಿ ಜುಂಜಪ್ಪ ಮಹಿಳೆಗೆ ಯಾವುದೇ ರೀತಿಯಾ ಸ್ವಾತಂತ್ರ್ಯ ನೀಡದೆ, ಶಾಸ್ತ್ರ, ಆಚರಣೆಗಳ ಹೆಸರಲ್ಲಿ ಧಾರ್ಮಿಕತೆಯನ್ನು ಹೇರುತ್ತಾನೆ. ನಂಬಿಕೆ, ಶಾಸ್ತ್ರ, ಸಂಪ್ರದಾಯ, ನಿಯಮ, ಕಟ್ಟುಪಾಡು ಆಚಾರ, ವಿಚಾರ ಇವೆಲ್ಲವುಗಳಿಂದ ಮಹಿಳೆ ದೂರವೇ ಉಳಿಯಬೇಕಾಗುತ್ತಾದೆ ಎಂಬುದನ್ನು ಜುಂಜಪ್ಪನ ಕಾವ್ಯದಲ್ಲಿ ನೋಡಬಹುದು.

ಸಿನ್ನಮ್ಮ ಕಾಡಿಗೆ ಕಟ್ಟಿಗೆ ತರಲು ಹೋದಾಗ ಅನಿವಾರ್ಯ ಕಾರಣದಿಂದ ತನ್ನ ಅಣ್ಣಂದಿರ ಮನೆಗೆ ಹೋಗಿ ಬಾಗಿನದೊಂದಿಗೆ ಜುಂಜಪ್ಪನ ಬಳಿಗೆ ಬರುತ್ತಾಳೆ ಆಗ ಜುಂಜಪ್ಪ ಅವಳನ್ನು ಈ ಹಿಂದೆ ಹೇಳಿದ ನಿಯಮಗಳನ್ನು ಮೀರಿ ನಡೆದಿದ್ದೀಯ ಎಂದು ದೂಷಿಸುತ್ತಾ

"ಕೇಳೆ ಭ್ರಷ್ಟಾ ಮುಂಡೆ
ತವುರು ಮನಿಗೋದೋಳಂಗೆ
ಅಂಗರ ಮಡಲಕ್ಕಿ
ಕಟಗೊಂಡ ಬಂದಿದ್ದೀಯಾ
ರಾತ್ರಿ ಕರೆಕ್ವಾಮಿಟಗದನು ಮನೆಯೊಳಗೆ
ಅವುನ್ನ ಇಲ್ಲಿಗೆ ಮೂರು ತಿಂಗಳಿಗಿಂಟ
ಸೌದೆ ಮಾರಿ ತ್ವಾಮ್ಬಿಗರನ
ಬಳಕೆ ಮಾಡಿಕೊಂಡು
ರಾತ್ರಿ ಠಣ ದೀವಿಗೆ ಹಚ್ಚಿತ್ತು
ನೀಲುವಗನ್ನಡಿಕಚ್ಚಿತ್ತು
ನಿನ್ನ ತೊಳಿನು ಮ್ಯಾಲ ನಿನ್ನ ತಲಿಯಮ್ಮ
ಬೆಳಗ್ಗೆ ಎದ್ದು
ತಾಯಿ ಮನಿಗೋದೋಳಂತೆ ಬಂದಿದ್ದೀಯಾ
ಆಗಲೇ ತಾಯಿ ಮಕ್ಕಳ ನ್ಯಾಯ
ಕಳುವಾರಳ್ಳಿ ದಿನ್ನ ಒಳಗೆ
ಹನ್ನೆರಡು ತಿಂಗಳು
ನಡೆಯಲೆಂದೇಳಿ ಜುಂಜಪ್ಪ"[೬೦]

ಇಲ್ಲಿ ಪುರುಷ ನಿರ್ಮಿಸಿರುವ ಸಮಾಜದಲ್ಲಿ ಹೆಣ್ಣು ತನ್ನ ಪಾತಿವ್ರತ್ಯವನ್ನು ಉಳಿಸಿಕೊಂಡು ಬರಬೇಕು. ಇದು ಅವಳ ಹುಟ್ಟಿನಿಂದ ತಂದೆ, ಗಂಡ, ಮಗ, ಎಲ್ಲಾ ಪುರುಷರು ವಿಧಿಸಿದ ಕಟ್ಟಳೆಯಾಗಿದೆ. ಹೆಣ್ಣೆಂದರೆ ಶೀಲ ಎಂಬ ಮೌಲ್ಯೈಕತೆಯನ್ನು ಸಾಂಸ್ಕೃತಿಕ ಹೆಸರಲ್ಲಿ ಅವಳ ಸುತ್ತಲೂ ಹೆಣೆಯಲಾಗಿದೆ. ಹಾಗಾಗಿಯೇ ಪಾತಿವ್ರತ್ಯವನ್ನು ಮೌಲ್ಯವಾಗಿ ಸ್ವೀಕರಿಸಿದ ಎಲ್ಲ ಸಂಸ್ಕೃತಿಗಳಲ್ಲೂ ಹೆಣ್ಣನ್ನು ನೋಡುವ ನೆಲೆ ಇದೇ ಆಗಿದೆ. "ಪಾತಿವ್ರತ್ಯವನ್ನು ಪಾಲಿಸುವ ಹೆಣ್ಣಿನ ಪವಾಡ ಮಹಿಮಗಳನ್ನೆ ವೈಭವೀಕರಿಸುವಲ್ಲಿ ಮತ್ತು ಪಾತಿವ್ರತ್ಯವನ್ನು ಮೀರಿದ ಹೆಣ್ಣಿಗೆ ಅತ್ಯಂತ ಕಟುವಾದ ದಿವ್ಯಗಳನ್ನು ಒಡ್ಡಿ ಅವಮಾನಿಸುವಲ್ಲಿ ಶೀಲದ ಮೌಲ್ಯವನ್ನೆ ಕಾಪಾಡಿಕೊಂಡು ಬರಲಾಗಿದೆ[೬೧] ಶೀಲ..ಎಂಬ ಮೌಲ್ಯವನ್ನು ಹೆಣ್ಣಿಗೆ ಹೇರುವುದರೊಂದಿಗೆ ತನ್ನತನವನ್ನೆ ಕಾಪಾಡಿಕೊಳ್ಳಲು ಅವಳು ಹೆಣಗಾಡುತ್ತಾಳೆ, ಇಲ್ಲಿ ಅಸ್ತಿತ್ವದ ಪ್ರಶ್ನೆ ಕೇವಲ ಶೀಲ, ಪತಿವ್ರತ್ಯಕ್ಕೆ ಸೀಮಿತಗೊಳ್ಳುತ್ತದೆ. ಪತಿವ್ರತ್ಯ ಎಂಬ ಮೌಲ್ಯವನ್ನು ಆಧಾರವಾಗಿಟ್ಟುಕೊಂಡು ಹೆಣ್ಣನ್ನು ಶೋಷಿಸುವ ರೀತಿಯು ಅವಳ ಹೆಣ್ತನವನ್ನು ಪ್ರಶ್ನಿಸುವುದಾಗಿದೆ.

"ಹೆಣ್ಣಿನ ಲೈಂಗಿಕ ಬದುಕನ್ನು ನಿಯಂತ್ರಿಸುವ ಮೂಲಕ ಹೆಣ್ಣಿನ ಶೀಲದ ಬಗ್ಗೆ ಸಂಶಯ ಬಂದಾಗ ಆಕೆಯನ್ನು ಹಲವು ಬಗೆಯ ಪರೀಕ್ಷೆಗಳಿಗೆ ಒಳಪಡಿಸುತ್ತಿದ್ದರು. ಎನ್ನುವುದಕ್ಕೆ ಸಿನ್ನಮ್ಮನೇ ಸಾಕ್ಷಿಯಾಗಿದ್ದಾಳೆ, ಹೆಣ್ಣು ಪರೀಕ್ಷೆಗಳ ಮುಖೇನ ತನ್ನ ಪಾತಿವ್ರತ್ಯವನ್ನು ವ್ಯಕ್ತಪಡಿಸುತ್ತಿದ್ದಳು. ಪುರುಷ ಕೇಂದ್ರಿತ ನಮ್ಮ ಸಾಮಾಜಿಕ ವ್ಯವಸ್ಥೆ ಮತ್ತು ಧಾರ್ಮಿಕ ವಿಧಿ ನಿಷೇಧಗಳ ಚೌಕಟ್ಟಿನಲ್ಲಿ ಮಹಿಳೆಯು ಅನುಭವಿಸಿದ ಯಾತನೆ ಸ್ವರೂಪವನ್ನೂ ಪುರುಷ ರಾಜಕಾರಣದ ವೈಚಾರಿಕ ಆಕೃತಿಗಳ ಸ್ತ್ರಿ ಪ್ರಜ್ಞೆಯನ್ನು ಅದೃಶ್ಯ ಮತ್ತು ಮಾನವ ನೆಲೆಗೆ ನೂಕದ ಸಂಚುಗಳನ್ನು ಈ ಮೂಲಕ ತಿಳಿಯಬಹುದು"[೬೨]

ಮೈಲಾರಲಿಂಗನ ಕಾವ್ಯದಲ್ಲಿ ಪ್ರಾಧಾನವಾಗಿ ಸಿದ್ದಿ ಸಾಧನೆಗಳು.ಕಂಡುಬರುತ್ತವೆ. ಈ ಕಾವ್ಯದಲ್ಲಿ ಮೈಲಾರಲಿಂಗನು ತನ್ನ ಹಾಗೂ ತನ್ನ ಸಮುದಾಯದ ಅಸ್ತಿತ್ವಕ್ಕಾಗಿ ಹೊರಾಡಿರುವುದನ್ನು ಕಾಣಬಹುದೇ ಹೊರತು ಮಹಿಳೆಯ ಅಸ್ತಿತ್ವ ಇಲ್ಲಿ ಗೌಣವಾಗಿಯೇ, ಶೋಷಣೆಯೇ ಕಂಡುಬರುತ್ತದೆ ಹಾಗೂ ಹೆಣ್ಣನ್ನು ಪಡೆಯಲು ನಡೆಸಿದ ಹೋರಾಟಗಳೇ ಈ ಕಾವ್ಯದಲ್ಲಿ ಅಡಗಿವೆ. ಒಂದು ನೆಲೆಯಲ್ಲಿ ನೋಡಿದರೆ ಮೈಲಾರಲಿಂಗ ತನ್ನ ಅಸ್ತಿತ್ವಕ್ಕಾಗಿ ಸ್ತ್ರಿ ವ್ಯಾಮೋಹವನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ.

ಮೈಲಾರ ಲಿಂಗನ ಕಾವ್ಯದಲ್ಲಿ ಮಹಿಳೆಗೆ ಅಗತ್ಯವಾದ ಸ್ಥಾನ ಮಾನಗಳು ದೊರೆತಿಲ್ಲ. "ಮೈಲಾರನ ಸಂಪ್ರದಾಯದಲ್ಲಿ ಬಸವ ಪದ್ದತಿ ಇರುವುದನ್ನು ಕಾಣಬಹುದಾಗಿದೆ"[೬೩] ಈ ಹಿನ್ನೆಲೆಯಲ್ಲಿ ಮೈಲಾರ ಲಿಂಗನು ಮೂರು ಜನ ಸ್ತ್ರೀಯರನ್ನು ಮದುವೆಯಗುವುದರೊಂದಿಗೆ ಎಲ್ಲಾ ಸಾಂಸ್ಕೃತಿಕ ವೀರರಿಗಿಂತ ಭಿನ್ನವಾಗಿ ಕಂಡುಬರುತ್ತಾನೆ. ಈ ಕಾವ್ಯದಲ್ಲಿ ಗಂಗಿಮಾಳವ್ವ, ಕುರುಬತ್ತೆವ್ವ, ಕೋಮಾಲಿ ಇವರು ೩ ಜನ ಸ್ತ್ರಿಯರು ಮೈಲಾರನ ಪ್ರೀತಿ, ವ್ಯಾಮೋಹದೊಳಗೆ ಸಿಲುಕಿ ತಮ್ಮ ಅಸ್ತಿತ್ವವನ್ನೆ ಕಳೆದುಕೊಂಡವರು, ಆದರೆ ಮೈಲಾರಲಿಂಗನ ವ್ಯಾಪ್ತಿ ಎಲ್ಲೆಲ್ಲಿ ಹರಡಿದಿಯೋ ಅಲ್ಲೆಲ್ಲಿ ಈ ಮೂವರು ಸ್ತ್ರೀಯರ ದೇವತೆಗಳಿಗೆ ಗುಡಿಯನ್ನು ಕಟ್ಟಲಾಗಿದೆ. ಇದರಿಂದಾಗಿ ಕೆಲವರಿಗೆ ಪೂಜೆಗೆ ಅರ್ಹಗೊಸುವುದರೊಂದಿಗೆ ಸಮಾಜದಲ್ಲಿ ಒಂದು ಸ್ಥಾನಮಾನವನ್ನು ತಂದು ಕೊಟ್ಟಿದ್ದಾನೆ ಎಂದೇ ಹೇಳಬಹುದು. ಮೈಲಾರನ ಗುಡಿ ಇರುವ ಕಡೆ "ಗಂಗೆಮಾಳವ್ವನಿಗೆ ಗುಡಿಯೂ ಇದೆ, ವಿಗ್ರಹವೂ ಇವೆ, ಕುರುಬತ್ತೆವ್ವನಿಗೆ ಪುಟ್ಟಗುಡಿಯಿದೆ, ಆದರೆ ವಿಗ್ರಹವಿಲ್ಲ, ಕೋಮಾಲಿಗೆ ಗುಡಿಯೂ ಇಲ್ಲ ವಿಗ್ರಹವೂ ಇಲ್ಲ"[೬೪] ದಿರುವುದನ್ನು ಗಮನಿಸಿದರೆ ಮೈಲಾರನು ಸಂಪ್ರದಾಯಬದ್ದವಾಗಿ ಮದುವೆಯಾದ ಹೆಂಡತಿಗೂ (ಗಂಗಿಮಾಳಮ್ಮ) ವ್ಯಾಮೋಹಕ್ಕಾಗಿ ತನ್ನ ಅಸ್ತಿತ್ವಕ್ಕೊಸ್ಕರ ಪೀಡಿಸಿ ಪ್ರೇಮಿಸಿ ಮದುವೆಯಾದ ಹೆಂಡತಿ ಕೋಮಲೆಗೊ ಬೇರೆ ಬೇರೆ ಸ್ಥಾನ ಕೊಟ್ಟಿರುವುದನ್ನು ನೋಡಬಹುದಾಗಿದೆ.

ಮೈಲಾರಲಿಂಗನ ಕಾವ್ಯದಲ್ಲಿ ಮೈಲಾರನ ಮೊದಲ ಹೆಂಡತಿಯಾದ ಗಂಗಿಮಾಳಮ್ಮ ಗಂಡನಿಂದ ದೂರವಾಗಿ ಅನೇಕ ರೀತಿಯ ದುಃಖವನ್ನು ಅನುಭವಿಸುತ್ತಾಳೆ. ಗಂಗಿಮಾಳಮ್ಮನ ಮೂಲಕ ಗಂಡನಿಲ್ಲದಿದ್ದರೆ ಹೆಣ್ಣು ಸಮಾಜದಲ್ಲಿ ಒಂಟಿಯಾಗಿ ಬದುಕಲು ಸಾಧ್ಯವಿಲ್ಲ ಎಂಬುದನ್ನು ತಿಳಿಸುತ್ತಾಳೆ.

"ಮುರುಷರಿಲ್ಲದ ಜೀವಾ ಶಿವಾ ಶಿವಾ

ಬೀಳಾ ಮಂಚವಾಗೈತೇ

ಗಂಡರಿಲ್ಲದಾ ಜೀವಾ ಶಿವಾ ಶಿವಾ

ಬೀಳಾ ಮಂಚವಾಗೈತೇ"[೬೫] ಎಂದು ದುಃಖಿಸುತ್ತಾ ಒಂಟಿ ಹೆಣ್ಣು ಎಂದರೆ ಸಮಾಜವು ನೋಡುವ ದೃಷ್ಟಿಕೋನವೇ ಬದಲಾಗಿರುತ್ತದೆ. ಆದ್ದರಿಂದ ಗಂಡನಿಗಾಗಿ ಹಲುಬುತ್ತಾಳೆ. ಗಂಡನಿಗಾಗಿ ಹರಕೆಯನ್ನು ಕಟ್ಟುತ್ತಾ ಸಮಾಜವನ್ನು ಎದುರಿಸಲಾಗದೆ ಪರಿತಪಿಸುತ್ತಾಳೆ. ಆಗ ಹನುಮಪ್ಪ ದೇವರು ಗಂಗಿಮಾಳಮ್ಮಗೆ ಅವಳ ಗಂಡ ಮೈಲಾರನು ಎಲ್ಲಿ ಹೋಗಿದ್ದಾನೆಂದು ತಿಳಿಸುತ್ತಾ,

"ಆ ಮಾಯಿಕಾರ ನಿನ ಮೇಲೆ

ಸವತಿನ ತರಲು ಹೋಗ್ಯಾನ

ದೇವರು ದೇವ"[೬೬]

ಎಂದು ಹೇಳುವಾಗ ಗಂಗಿಮಾಳಮ್ಮ ಅವನ ಮೇಲೆ ಸಿಟ್ಟಾಗಿ ಗಂಡನ ಬಗ್ಗೆ ಅಪವಾದ ಬೇಡವೆಂದು ಹೇಳಿ ಕಳುಹಿಸುತ್ತಾಳೆ. ಗಂಡ ಎಷ್ಟೇ ಕೆಟ್ಟವನಾದರು ಹೆಂಡತಿಯಾದವಳು ಅವನನ್ನು ಬಿಟ್ಟು ಕೊಡದೆ ಅವನ ಪರವಾಗಿಯೇ ಮಾತನಾಡುತ್ತಾನೆ.ಇದು ಹೆಣ್ಣಿನಲ್ಲಿರುವ ವಿಶೇಷ ಗುಣವಾಗಿದೆ. ಈ ಮೂಲಕವೇ ಹೆಣ್ಣು ಮೊದಲಿಗೆ ಗಂಡನ ಮನಸ್ಸಲ್ಲಿ ತನ್ನ ಅಸ್ತಿತ್ವವನ್ನು ಸಾಧಿಸಿಕೊಳ್ಳುತ್ತಾಳೆ. ಗಂಗಿಮಾಳಮ್ಮ ಮೈಲಾರನು ಕೋಮಾಲಿಯನ್ನು ವಿವಾಹವಾಗಿ ಕರೆತಂದರು ಅದನ್ನು ಪ್ರತಿಭಟಿಸದೆ ಒಪ್ಪಿಕೊಂಡು ಅವರೊಂದಿಗೆ ಜೀವನ ಸಾಗಿಸುತ್ತಾಳೆ. ಇದು ಅವಳ ಅಸ್ತಿತ್ವಕ್ಕೆ ಅಡ್ಡಿಯುಂಟು ಮಾಡುತ್ತಿದ್ದರು ಗಂಡನನ್ನು ಬಿಟ್ಟುಕೊಡಲೊಪ್ಪದೆ ಇರುವ ಗಂಗಿಮಾಳಮ್ಮನ ನಿಲುವು ಮಹಿಳೆಯರ ಅಸ್ತಿತ್ವವನ್ನು ಪ್ರಶ್ನಿಸುವ ಮನೋಭಾವನೆಯನ್ನು ಹೊಡೆದುಹಾಕಿ ಗಂಡನ ನೆರಳಲ್ಲಿ ಪಾತಿವ್ರತ್ಯದಿಂದ ಉಳಿದರೆ ಸಾಕು ಎಂಬ ಅನನ್ಯ ಭಾವನೆ ಕಾಣಬಹುದು.

ಇದೇ ಕಾವ್ಯದಲ್ಲಿ ಬರುವ ಕೋಮಲೆ ಎಂಬ ಹೆಣ್ಣು ಸಹ ತನ್ನ ಅಸ್ತಿತ್ವಕ್ಕಾಗಿ ಪರದಾಡುವುದನ್ನು ಕಾಣಬಹುದು. ಮೈಲಾರನು ಕೋಮಾಲೆಯನ್ನು ನಾನಾ ರೀತಿಯ ಮಾಟ, ಮಂತ್ರ, ಮೋಡಿಯನ್ನು ಮಾಡಿ ಒಲಿಸಿಕೊಳ್ಳುತ್ತಾನೆ. ಮೈಲಾರನು ಕೋಮಾಲಿಯನ್ನು ವಿವಾಹವಾಗುವುದರ ಮೂಲಕ ಕುರುಬರ ಪಾರಪತ್ಯವನ್ನು ಪಡೆಯಬೇಕೆಂಬ ಉದ್ದೇಶವನ್ನು ಹೊಂದಿರುತ್ತಾನೆ. ಆದ್ದರಿಂದಲೇ ಮೈಲಾರನ ಜೀವನದಲ್ಲಿ ಕೋಮಾಲೆಯು ಸ್ಥಿರವಾದ ಅಸ್ತಿತ್ವವನ್ನು ಪಡೆದುಕೊಳ್ಳುತ್ತಾಳೆ.

ಈ ಕಾವ್ಯಗಳ ಮೂಲಕ ಮಹಿಳೆಯು ಅನೇಕ ಕಷ್ಟ, ಶೋಷಣೆ, ಅಪವಾದಗಳನ್ನು ಎದುರಿಸಿ ವಿಭಿನ್ನ ನೆಲೆಯಲ್ಲಿ ಕಾಣಿಸಿಕೊಂಡು ತಮ್ಮ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದನ್ನು ಕಾಣಬಹುದು. ಪ್ರತಿಯೊಬ್ಬ ಮಹಿಳೆಯು ತನಗೆ ತೊಂದರೆ ನೀಡಿದವರನ್ನು ವಿರೋಧಿಸುತ್ತಾ ಎಲ್ಲವನ್ನು ಧೈರ್ಯದಿಂದ ಪ್ರತಿಭಟಿಸುತ್ತಾ ಸಮಾಜದಲ್ಲಿ ತಮ್ಮ ಸ್ಥಾನವನ್ನು ಗಟ್ಟಿಗೊಳಿಸುತ್ತಾರೆ. ಸಾಮಾನ್ಯವಾಗಿ ಮಹಿಳೆಯರು

ಸಮಾಜ ಒಡ್ಡುವ ಅನೇಕ ಪರೀಕ್ಷೆಗಳಿಗೆ ಒಳಗಾದರೂ ತಮ್ಮ ಶೀಲ ಪಾತಿವ್ರತ್ಯವನ್ನು ಉಳಿಸಿಕೊಂಡು ಬರುತ್ತಾರೆ. ಮೌಖಿಕ ಕಾವ್ಯಗಳಲ್ಲಿ ಸಾಂಸ್ಕೃತಿಕ ನಾಯಕರು ಕೆಲವು ಕಡೆ ಮಹಿಳೆಯ ಅಸ್ತಿತ್ವಕ್ಕೆ ಅಡ್ಡಿಯಾದರು ಅದನ್ನು ಪ್ರತಿಭಟಿಸುತ್ತಾ ತಮ್ಮ ಸಾಮರ್ಥ್ಯವನ್ನು ನಿರೂಪಿಸುತ್ತಾರೆ. ಇನ್ನೂ ಕೆಲವು ಸಾಂಸ್ಕೃತಿಕ ನಾಯಕರು ಮಹಿಳಾ ಪರ ನಿಂತು ಅವರಿಗೆ ಸಲ್ಲಬೇಕಾದ ನ್ಯಾಯವನ್ನು ದೊರಕಿಸಿಕೊಡುತ್ತಾರೆ.

ಮೌಖಿಕ ಕಾವ್ಯಗಳಲ್ಲಿನ ಸ್ತ್ರೀಯರು ಸಾಮಾನ್ಯ ಮಹಿಳೆಯರಂತೆ ಕಂಡರೂ ಸಹ ಸಮಾಜದಲ್ಲಿ ಅಸಮಾನ್ಯರಾಗಿ ನಿಲ್ಲುತ್ತಾರೆ. ಈ ಕಾವ್ಯಗಳಲ್ಲಿನ ಮಹಿಳೆಯರು ಸಮಾಜದಲ್ಲಿ ಅನುಭವಿಸುವ ಹೊಟ್ಟೆಪಾಡು, ಅಲೆದಾಟ, ಕೂಲಿ, ಸ್ತ್ರೀ ಶೋಷಣೆಗಳನ್ನು ಅನುಭವಿಸುತ್ತಾ ಸಮಾಜದಲ್ಲಿ ತಾವು ಬದುಕಲೇಬೇಕು ಎಂಬ ಹಂಬಲ ಹೊಂದಿರುವುದನ್ನು ಕಾಣಬಹುದು. ಈ ಕಾವ್ಯಗಳಲ್ಲಿನ ಮಹಿಳೆಯರ ಅಸ್ತಿತ್ವದ ಮೂಲಕವೇ ಸಮಾಜದಲ್ಲಿ ಮಾನವೀಯ ಮೌಲ್ಯಗಳನ್ನು ಬೆಳೆಸಲು ಸಾಧ್ಯವಾಗಿದೆ.

**ಕೊನೆಟಿಪ್ಪಣಿ**

೧. ತಿರುಮಲೇಶ್ ಕೆ.ವಿ ,ಅಸ್ತಿತ್ವವಾದ, ೧೯೮೯, ಪು.ಸಂ–೧೩.

೨. ಅದೇ ಪುಸ್ತಕ, ಪು.ಸಂ–೩೭

೩. ಮುತ್ತಯ್ಯ ಎಂ. ಎಸ್., ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಸಂಸ್ಕೃತಿ, ೨೦೦೮, ಪು.ಸಂ–೧೧.

೪. ಅದೇ ಪುಸ್ತಕ. ಪುಟ ಸಂಖ್ಯೆ– ೫೦

೫. ಕೇಶವನ್ ಪ್ರಸಾದ್.ಕೆ, ಮಲೆಮಾದೇಶ್ವರ, ೧೯೯೭, ಪುಟ ಸಂಖ್ಯೆ–೫

೬. ಬೋರಲಿಂಗಯ್ಯ ಹಿ.ಚಿ, ಮಂಟೇಸ್ವಾಮಿ ಕಾವ್ಯ, ೧೯೯೭, ಪುಟ ಸಂಖ್ಯೆ–೧೦.

೭. ಅದೇ ಪುಸ್ತಕ. ಪುಟ ಸಂಖ್ಯೆ–೭೩.

೮. ಚಲುವರಾಜು,ಜುಂಜಪ್ಪ, ೧೯೯೭ ಪುಟ ಸಂಖ್ಯೆ–೨೮೪.

೯. ಮಂಜುನಾಥ ಬೇವಿನಕಟ್ಟಿ, ಮೈಲಾರಲಿಂಗ, ೧೯೯೯, ಪುಟ ಸಂಖ್ಯೆ–೨೨.

೧೦. ಗಂಗಾದರ ದೈವಜ್ಞ, ಮಾಳಿಂಗರಾಯನ ಕಾವ್ಯ, ೧೯೯೯, ಪುಟ ಸಂಖ್ಯೆ–೧೬,೧೭.

೧೧. ಕೇಶವನ್ ಪ್ರಸಾದ್.ಕೆ, ಮಲೆಮಾದೇಶ್ವರ, ೧೯೯೭, ಪುಟ ಸಂಖ್ಯೆ–೩೧೩.

೧೨. ಬೋರಲಿಂಗಯ್ಯ ಹಿ.ಚಿ, ಮಂಟೇಸ್ವಾಮಿ ಕಾವ್ಯ, ೧೯೯೭, ಪುಟ ಸಂಖ್ಯೆ–೩೦೯.

೧೩. ಚಲುವರಾಜು,ಜುಂಜಪ್ಪ, ೧೯೯೭, ಪುಟ ಸಂಖ್ಯೆ–೬೧೭.

೧೪. ಮುತ್ತಯ್ಯ.ಎಂ.ಎಸ್.ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಸಂಸ್ಕೃತಿ, ೨೦೦೮, ಪುಟ ಸಂಖ್ಯೆ– ೯೨, ೯೩.

೧೫. ತಿರುಮಲೇಶ್ ಕೆ.ವಿ ,ಅಸ್ತಿತ್ವವಾದ, ೧೯೮೯, ಪು.ಸಂ-೧೮೨.

೧೬. ಅದೇ ಪುಸ್ತಕ, ಪು.ಸಂ-೧೮೩.

೧೭. ಗೀತ ಮಲ್ಲೇಶ್ವರಪ್ಪ, ಆಧುನಿಕ ಕುಟುಂಬಗಳಲ್ಲಿ ಪಿತೃಪ್ರಧಾನತೆಯ ಸ್ವರೂಪ, ೨೦೦೭, ಪು.ಸಂ-೨, ಪಿಎಚ್‌ಡಿ ಅಪ್ರಕಟಿತ (ಮಹಾಪ್ರಬಂದ).

೧೮. ಸುನಂದ ಎಂ, ನಿಷೇಧಗಳು ಮತ್ತು ಲಿಂಗವ್ಯವಸ್ಥೆ, ೨೦೧೧, ಪು.ಸಂ-೬೮.

೧೯. ಬೋರಲಿಂಗಯ್ಯ ಹಿ.ಚಿ. ಜನಪದ ಮಹಾಕಾವ್ಯ ಮೀಮಾಂಸೆ ಮತ್ತು ತಾತ್ವಿಕತೆ, ಪು.ಸಂ-೫೧.

೨೦. ಕೇಶವನ್ ಪ್ರಸಾದ್.ಕೆ. ಮಲೆಮಾದೇಶ್ವರ, ೧೯೯೭, ಪು.ಸಂ-೩೨೬.

೨೧. ಅದೇ ಪುಸ್ತಕ, ಪು.ಸಂ-೧೨೫.

೨೨. ಚಲುವರಾಜು, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೨೦೬.

೨೩. ಹೇಮಾವತಿ.ಟಿ.ಆರ್. ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ, ೨೦೦೪ , ಪು.ಸಂ-.೧೧೧ ಪಿಎಚ್‌ಡಿ ಅಪ್ರಕಟಿತ (ಮಹಾಪ್ರಬಂದ).

೨೪. ಸುನಂದ.ಎಂ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ-೮೦.

೨೫. ಅಂತರ್ಜಾಲ,https://lingayatreligion.com.

೨೬. https://lingayatreligion.com.

೨೭. ಸುನಂದ.ಎಂ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ-೭೯,೮೦.

೨೮. ವೆಂಕಟೇಶ್.ಸಿ.ಡಿ.ಜನಪದ ಸಾಹಿತ್ಯದಲ್ಲಿ ಸ್ತ್ರೀ ಪರಿಕಲ್ಪನೆ, ೨೦೧೦, ಪು.ಸಂ-೧.

೨೯. ಸುನಂದ.ಎಂ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ-೧೧೧.

೩೦. ರಾಮಚಂದ್ರನ್.ಸಿ.ಎನ್. ಹೊಸಮಡಿಯ ಮೇಲೆ ಚದುರಂಗ, ಪು.ಸಂ-೧೨೧.

೩೧. ಸುನಂದ.ಎಂ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ-೧೧೨.

೩೨. ಕೇಶವನ್ ಪ್ರಸಾದ್,ಕೆ, ಮಲೆಮಾದೇಶ್ವರ, ೧೯೯೭, ಪು.ಸಂ-೧೫೨.

೩೩. ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ ಒಂದು ಸಂಕಥನ, ೨೦೦೦, ಪು.ಸಂ-೩೪,೩೫.

೩೪. ಹೇಮಾವತಿ.ಟಿ.ಆರ್. ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ, ೨೦೦೪, ಪು.ಸಂ-೧೧೨, ಪಿಎಚ್‌ಡಿ ಅಪ್ರಕಟಿತ (ಮಹಾಪ್ರಬಂದ).

೩೫. ಕೇಶವನ್ ಪ್ರಸಾದ್.ಕೆ. ಮಲೆ ಮಾದೇಶ್ವರ, ೧೯೯೭, ಪು.ಸಂ-೩೪೧.

೩೬. ಬೋರಲಿಂಗಯ್ಯ.ಹಿ.ಚಿ. ಕಾಡು ಕಾಂಕ್ರೀಟ್ ಮತ್ತು ಜಾನಪದ, ೧೯೯೫, ಪುಸಂ-೬೭.

೩೭. ಬೋರಲಿಂಗಯ್ಯ.ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ-೨೧೪,೨೧೫.

೩೮. ಅದೇ ಪುಸ್ತಕ, ಪು.ಸಂ-೨೧೭, ೨೧೮.

೩೯. ಅದೇ ಪುಸ್ತಕ, ಪು.ಸಂ-೮೧೭.

೪೦. ಸುನಂದ.ಎಂ. ನಿಷೇಧಗಳು ಮತ್ತು ಲಿಂಗವ್ಯವಸ್ಥೆ, ೨೦೧೧, ಪು.ಸಂ-೧೮೭.

೪೧. ಚಲುವರಾಜು. ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೧೩೧.

೪೨. ಅದೇ ಪುಸ್ತಕ. ೧೯೯೭, ಪು.ಸಂ-೨೦೬.

೪೩. ಮುತ್ತಯ್ಯ.ಎಂ.ಎಸ್. ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ, ೨೦೦೮, ಪು.ಸಂ-೧೯೭.

೪೪. ಶಕುಂತಲಾ ಮಾ.ಶೆಟ್ಟಿ., ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನಾ ನೆಲೆಗಳು, ೨೦೦೮, ಪು.ಸಂ-೮.

೪೫. ಅದೇ ಪುಸ್ತಕ., ಪು.ಸಂ-೯.

೪೬. ಶಕುಂತಲಾ ಮಾ.ಶೆಟ್ಟಿ, ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನಾ ನೆಲೆಗಳು, ೨೦೦೮, ಪು.ಸಂ-೧೨ ಪಿಎಚ್‌ಡಿ ಅಪ್ರಕಟಿತ (ಮಹಾಪ್ರಬಂದ)

೪೭. ಗಾಯತ್ರಿ ನಾವಡ, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ೧೯೯೯, ಪು.ಸಂ-೨.

೪೮. ಕೇಶವನ್ ಪ್ರಸಾದ್.ಕೆ. ಮಲೆಮಾದೇಶ್ವರ, ೧೯೯೭, ಪು.ಸಂ-೩೫

೫೦. ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ ಒಂದು ಸಂಕಥನ, ೨೦೦೦, ಪು.ಸಂ-೩೩,

೫೧. ಅದೇ ಪುಸ್ತಕ, ಪು.ಸಂ-೩೪.

೫೨. ಕೇಶವನ್ ಪ್ರಸಾದ್.ಕೆ. ಮಲೆಮಾದೇಶ್ವರ, ೧೯೯೭, ಪು.ಸಂ-೩೪೭.

೫೩. ಬೋರಲಿಂಗಯ್ಯ.ಹಿ.ಚಿ., ಕರ್ನಾಟಕ ಜನಪದ ಮಹಾಕಾವ್ಯ ಮೀಮಾಂಸೆ ಮತ್ತು ತಾತ್ವಿಕತೆ, ೨೦೧೮ , ಪು.ಸಂ-೯೧.

೫೪. ಅದೇ ಪುಸ್ತಕ. ಪು.ಸಂ-೯೨.

೫೫. ಬೋರಲಿಂಗಯ್ಯ.ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ-೧೩೭, ೧೩೮, ೧೩೯.

೫೬. ಚಲುವರಾಜು, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೧೩೨.

೫೭. ಅದೇ ಪುಸ್ತಕ. ಪು.ಸಂ-೧೩೩.

೫೮. ಅದೇ ಪುಸ್ತಕ. ಪು.ಸಂ-೨೦೬, ೨೦೭.

೫೯. ಸುನಂದ.ಎಂ, ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ-೧೨೮.

೬೦. ಚಲುವರಾಜು. ಜುಂಜಪ್ಪನ ಕಾವ್ಯ, ೧೯೯೭, ಪು.ಸಂ- ೨೦೭.

೬೧. ಅದೇ ಪುಸ್ತಕ, ಪು.ಸಂ-೨೨೦, ೨೨೧.

೬೨. ಗಾಯತ್ರಿ ನಾವಡ, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ೧೯೯೯, ಪು.ಸಂ-೭೧.

೬೩. ಸುನಂದ.ಎಂ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ-೧೩೧.

೬೪. ನೇಗಿನಾಳ.ಎಂ.ಬಿ. ಮೈಲಾರಲಿಂಗ ಖಂಡೋಬ ಒಂದು ಸಾಂಸ್ಕೃತಿಕ ಅಧ್ಯಯನ, ೧೯೯೨, ಪು.ಸಂ-೩೭೨.

೬೫. ಪುರುಷೋತ್ತಮ ಬಿಳಿಮಲೆ, ಕೂಡುಕಟ್ಟು, ೧೯೯೭, ಪು.ಸಂ-೧೨.

೬೬. ಮಂಜುನಾಥ ಬೇವಿನಕಟ್ಟೆ, ಮೈಲಾರಲಿಂಗನ ಕಾವ್ಯ, ೧೯೯೯, ಪು.ಸಂ-೧೨೦.

೬೭. ಅದೇ ಪುಸ್ತಕ. ಪು.ಸಂ-೧೨೪.

# ಅಧ್ಯಾಯ : ನಾಲ್ಕು
# ಮೌಖಿಕ ಮಹಾಕಾವ್ಯ ಆರ್ಥಿಕ ಮತ್ತು ರಾಜಕೀಯ ನೆಲೆಗಳು

೪.೧. ಆರ್ಥಿಕ ಸಂರಚನೆಯ ಸ್ವರೂಪ ಮತ್ತು ಕಸಬುಗಳು

೪.೨. ಉತ್ಪಾದನೆಯ ಮೇಲಿನ ಒಡೆತನ ಮತ್ತು ಲಿಂಗಸಂಬಂಧಗಳು

೪.೩. ಸಾಮುದಾಯಿಕ ಉತ್ಪಾದನೆ ಮತ್ತು ಮಹಿಳಾ ಪ್ರತಿನಿಧೀಕರಣ

೪.೪. ಸಮುದಾಯದ ಒಳಾಡಳಿತ ಮತ್ತು ಲಿಂಗಭೇದಗಳು

# ಅಧ್ಯಾಯ : ನಾಲ್ಕು

# ಮೌಖಿಕ ಮಹಾಕಾವ್ಯ ಆರ್ಥಿಕ ಮತ್ತು ರಾಜಕೀಯ ನೆಲೆಗಳು

## ೪.೧. ಆರ್ಥಿಕ ಸಂರಚನೆಯ ಸ್ವರೂಪ ಮತ್ತು ಕಸುಬುಗಳು

ಪ್ರಾಚೀನ ಕಾಲದಲ್ಲಿ ಮಾನವನು ಅಲೆಮಾರಿ ಜೀವನವನ್ನು ನಡೆಸುತ್ತಿದ್ದನು. ಕಾಡಿನಲ್ಲಿ ಸಿಗುವ ಗೆಡ್ಡೆಗೆಣಸು, ಹಣ್ಣು ಹಂಪಲುಗಳು ತನಗಿಂತ ಕಿರಿದಾದ ಪ್ರಾಣಿಗಳ ಮಾಂಸವನ್ನು ಬೇಟೆಯಾಡಿ ತಿನ್ನುತ್ತಿದ್ದನು ಹಾಗೂ ತನ್ನನ್ನು ತಾನು ಕಾಡಿನಲ್ಲಿ ಸುರಕ್ಷತೆಯನ್ನು ಕಾಪಾಡಿಕೊಳ್ಳಲು ಮೊದಲು ಕಲಿತಿದ್ದು ಬೇಟೆ, ಇದಕ್ಕಾಗಿ ಹರಿತವಾದ, ಮೊಣಚಾದ ಶಿಲೆಗಳನ್ನು ಬಳಸಿ ಪ್ರಾಣಿಗಳನ್ನು ಬೇಟೆಯಾಡಿ ಹಸಿ ಮಾಂಸವನ್ನು ತಿನ್ನತೊಡಗಿದ. ನಂತರ ಮಾನವ ಬೆಂಕಿಯ ಬಳಕೆಯನ್ನು ಹುಡುಕಿಕೊಂಡು ಮಾಂಸವನ್ನು ಬೇಯಿಸತೊಡಗಿದನು, ಇದಕ್ಕಾಗಿ ನದಿ ತೀರಗಳನ್ನು ಆರಿಸಿಕೊಳ್ಳತೊಡಗಿದ. ದೇಹವನ್ನು ಮುಟ್ಟಿಕೊಳ್ಳಲು ಮತ್ತು ರಕ್ಷಣೆಗಾಗಿ ಗಿಡಗಳ ಎಲೆ ಮತ್ತು ತೊಗಟೆಗಳಿಂದ ಉಡುಗೆಗಳನ್ನು ತಯಾರಿಸಿಕೊಂಡನು, ಬೇಟೆಯ ಕಾರಣದಿಂದ ಕ್ರಮೇಣ ಪ್ರಾಣಿಗಳ ಸಂಖ್ಯೆ ಕಡಿಮೆಯಾದಾಗ ತನ್ನ ಆಹಾರ ಸಂಗ್ರಹಣೆಗಾಗಿ ಬೇರೆ ಬೇರೆ ಮಾರ್ಗಗಳನ್ನು ಕಂಡುಕೊಂಡನು, ಆ ಸಂದರ್ಭದಲ್ಲಿ ಕಂಡುಕೊಂಡ ಮಾರ್ಗವೇ ಪಶುಪಾಲನೆ, ಕುರಿಗಳ ಸಾಕಾಣಿಕೆ. ಕುರಿಗಳ ಉಣ್ಣೆಯ ಬಳಕೆಯಿಂದ ಉಣ್ಣೆ, ಬಟ್ಟೆ ತಯಾರಿಸತೊಡಗಿದ. ನಂತರ ಮಣ್ಣಿನ ಮಡಕೆ, ಬಟ್ಟಲು ಮುಂತಾದ ಅಗತ್ಯ ಮೂಲಭೂತ ವಸ್ತುಗಳನ್ನು ತಯಾರಿಸಲು ಪ್ರಾರಂಭಿಸಿದ ಅಲ್ಲಿಗೆ ಒಂದು ವಿಕಾಸದ ಘಟ್ಟವು ಆರಂಭವಾಯಿತು. ಈ ಘಟ್ಟದ ಮುಖ್ಯವಾದ ಭಾಗವೇ ಪಶುಪಾಲನೆ ಮತ್ತು ಕೃಷಿ. ಇವುಗಳನ್ನು ತನ್ನ ಅಭಿವೃದ್ಧಿಗೆ ಅಗತ್ಯವಾದ ಆರ್ಥಿಕ ಮೂಲವನ್ನಾಗಿ ಬಳಸತೊಡಗಿದನು. ಪುರುಷರು ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡಿದ ಮಾಂಸ ಇತರೆ ಆಹಾರ ವಸ್ತುಗಳನ್ನು ಹೊರಗಿನಿಂದ ತಂದರೆ ಅದನ್ನು ಶೇಖರಿಸಿ ಇಡುವ ಕೆಲಸ ಹೆಣ್ಣಿಗೆ ಸೇರಿತ್ತು. ಇದಕ್ಕಾಗಿ ಅವಳು ಆಹಾರವನ್ನು ಕೆಡದಂತೆ ಸಂಗ್ರಹಿಸುವ ಸಲುವಾಗಿ ಮಡಕೆ ಕುಡಿಕೆಗಳು, ಬಟ್ಟಲುಗಳನ್ನು ತಯಾರಿಸಲು ಪ್ರಾರಂಭಿಸಿದಳು. ಇದು ಆಹಾರ ಸಂಗ್ರಹಣಾ ಹಂತದಿಂದ ಆರ್ಥಿಕ ಸಂರಚನೆಯನ್ನು ನಿಭಾಯಿಸುವ ಕಡೆಗೆ ಸಾಗಿತು.

ಮೌಖಿಕ ಮಹಾಕಾವ್ಯಗಳಲ್ಲಿ ಪ್ರಧಾನವಾಗಿ ಕಂಡುಬರುವ ಜನರ, ಕಸುಬು, ಆರ್ಥಿಕ ಚಲನೆಯು ಅವರ ಬದುಕಿನ ಅವಿಭಾಜ್ಯ ಅಂಗವಾಗಿದೆ. ಕಾಯಕವಿಲ್ಲದೆ ಬದುಕಿಲ್ಲ, ಪ್ರತಿಯೊಬ್ಬ ಮನುಷ್ಯನು

ದುಡಿದು ಜೀವಿಸಬೇಕಾಗಿರುತ್ತದೆ, ಹಸಿವನ್ನು ಸಹಿಸಿಕೊಳ್ಳಬೇಕಾಗಿರುತ್ತದೆ, ಕೆಲಸವನ್ನು ಮಾಡಲೇಬೇಕಾಗಿರುತ್ತದೆ. ಕೀರ್ತನೆಕಾರರು ಹೇಳುವಂತೆ ಎಲ್ಲರೂ 'ದುಡಿಯುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ' ಬಸವಣ್ಣನವರು ಹೇಳುವ ಪ್ರಕಾರ 'ಕಾಯಕವೇ ಕೈಲಾಸ,' 'ಕೆಲಸ ಮಾಡಿದರೆ ಬಾಯಿ ಮೊಸರಾಗುತ್ತದೆ' ಇದೆ ನಿಲುವನ್ನು ಜನಪದ ಕವಿಗಳು ಹೊಂದಿದ್ದರು, ಹಾಗಾಗಿಯೇ ನಮ್ಮ ಜನಪದ ಕವಿಗಳು ತಮ್ಮ ಕಾವ್ಯಗಳಲ್ಲಿ ತಮ್ಮ ಉತ್ಪಾದನೆಯ ಆರ್ಥಿಕ ಸಂರಚನೆಯನ್ನು ಅಭಿವ್ಯಕ್ತಿಸುತ್ತಾರೆ.

ಕಾವ್ಯಗಳಲ್ಲಿ ಬರುವ ನಾಯಕ ಮತ್ತು ನಾಯಕಿಯರು ಹಾಗೂ ಪ್ರತಿಯೊಬ್ಬರು ಕಾಯಕದಲ್ಲಿ ತೊಡಗಿರುವವರು. ಸಾಮಾನ್ಯವಾಗಿ ಇಲ್ಲಿ ಬರುವ ಪಾತ್ರಗಳು ಕೃಷಿ ಮೂಲದಿಂದ ಬಂದವುಗಳಾಗಿದ್ದು, ಇಂದಿಗೂ ಆ ಸಮುದಾಯಗಳು ಕೃಷಿಯನ್ನು ಅವಲಂಭಿಸಿರುವುದನ್ನು ಕಾಣಬಹುದು. ಮಲೆಯ ಮಹಾದೇಶ್ವರ ಕಾವ್ಯದಲ್ಲಿ ಮಾದೇಶ್ವರನು ಭಿಕ್ಷಾವೃತ್ತಿ, ರಾಗಿ ಬೀಸುವ ಮೊದಲಾದ ಕೆಲಸಗಳನ್ನು ಮಾಡುತ್ತಾನೆ. ಮಂಟೇಸ್ವಾಮಿಯು ಭಿಕ್ಷಾಟನೆಯನ್ನು ಮಾಡುತ್ತಾನೆ, ಜುಂಜಪ್ಪ ದನಕರುಗಳನ್ನು ಸಾಕುವ ಹೈನುಗಾರಿಕೆ ಕೆಲಸವನ್ನು ರೂಢಿಸಿಕೊಂಡಿರುತ್ತಾನೆ, ಮೈಲಾರನು ಕುರಿಗಳನ್ನು ಸಾಕುವ ಕೆಲಸವನ್ನು ಮಾಡುತ್ತಾನೆ, ಬೇವಿನಹಟ್ಟಿ ಕಾಳಮ್ಮ ಎಳ್ಳು ಬೆಳೆಯುವ ಕೃಷಿಕಳು. ಮುದ್ದಮ್ಮ ಹಾಲು ಕರೆಯುವಳು, ಸಿನ್ನಮ್ಮ ಸೌದೆ ಮಾರುವ ಮತ್ತು ಇತರೆ ವ್ಯಾಪಾರ ಮಾಡುವಳು. ದೊಡ್ಡಕಜ್ಜಿ ಅವರೆ ಬೆಳೆಯುವಳು, ಮಡಿವಾಳ ಮಾಚಪ್ಪನ ಹೆಂಡತಿ ಮಲ್ಲಿಗೆ ದೇವಿ ಬಟ್ಟೆಯನ್ನು ಒಗೆಯುವ ಅಗಸಿ, ಕೋಮಲೆಯು ಕುರಿ ಕಾಯುವವಳು, ಕೆಂಪಾಚಾರಿ ಕುಲುಮೆ ಕೆಲಸ ಮಾಡುವನು, ಪಾಂಚಳ ದೊರೆಗಳು ಕಬ್ಬಿಣ ಕೆಲಸ ಮಾಡುವರು, ಏಳು ಜನ ಕಂಟೇರು ಗೊಲ್ಲರು ದನಗಳನ್ನು ಕಾಯುವರು. ಹೊನ್ನಟ್ಟಾಲೆಗೌಡ ದನಗಳನ್ನು ಕಾಯುವನು. ಸರಗೂರಪ್ಪ ರಾಮವ್ವ ಸೊಪ್ಪು ಮಾರುವರು, ಹೀಗೆ ಕಾವ್ಯಗಳಲ್ಲಿ ಬರುವ ಪ್ರತಿಯೊಬ್ಬರು ಒಂದೊಂದು ವೃತ್ತಿಯನ್ನು ಅನುಸರಿಸುತ್ತಿರುವುದನ್ನು ಕಾಣುತ್ತೇವೆ. ದುಡಿಮೆಯೊಂದಿಗೆ ಪ್ರಾರಂಭವಾಗುವ ಅವರ ಜೀವನವು ಮುಂದಿನ ಪೀಳಿಗೆಗೆ ಆರ್ಥಿಕ ಸಂರಚನೆಯನ್ನು ಕಟ್ಟಿಕೊಡುವಲ್ಲಿ ಮಗ್ನರಾಗುತ್ತಾರೆ. ಇವುಗಳಿಗೆಲ್ಲ ಮೌಖಿಕ ಮಹಾಕಾವ್ಯಗಳಲ್ಲಿ ಮೊದಲ ಆದ್ಯತೆಯಿದ್ದು, ದುಡಿಯುವ ಮುಖಾಂತರವೇ ಕಥೆಯ ಪಯಣ ನಡೆಯುತ್ತದೆ. ಇದರಲ್ಲಿ ಅನೇಕ ಪಾತ್ರಗಳ ಸಣ್ಣ ಸಣ್ಣ ಕಥೆಗಳು ಕೆಳವರ್ಗದಿಂದ ಬಂದಿದ್ದು, ಬಡತನದ ಮೌಲ್ಯಗಳನ್ನು ಉಳಿಸಿಕೊಳ್ಳುವಲ್ಲಿ ಪ್ರಯತ್ನಿಸುತ್ತಾರೆ.

ಮಲೆ ಮಾದೇಶ್ವರ ಕಾವ್ಯದಲ್ಲಿ ಬರುವ ಅನೇಕ ಸಮುದಾಯಗಳು ತಳಹಂತದ್ದೇ ಆಗಿವೆ. ಮಾನವ ಅನೇಕ ವಿಕಾಸಗಳನ್ನು ದಾಟಿದ ನಂತರ ಕೃಷಿಯನ್ನು ಕಂಡುಕೊಂಡ. ಆದರೆ ಮಾದೇಶ್ವರನ ಕಾವ್ಯದಲ್ಲಿ ಬರುವ ಯಾವ ಕುಟುಂಬ ಮತ್ತು ಸಮುದಾಯಗಳು ಕೃಷಿಯನ್ನು ಅವಲಂಬಿಸಿಲ್ಲ. ತಮ್ಮ ಆಹಾರ ಉತ್ಪಾದನೆಗಾಗಿ ಬೇಟೆ, ಚಿಕ್ಕ ಪುಟ್ಟ ಕೆಲಸಗಳಲ್ಲಿ ತೊಡಗಿಕೊಂಡಿರುವುದನ್ನು ಗಮನಿಸಬಹುದು. ಆದರೆ ಮಾದೇಶ್ವರನಿಗೆ ಒಕ್ಕಲಾಗದೆ ತನ್ನದೇ ಸ್ವಾಭಿಮಾನವನ್ನು ಉಳಿಸಿಕೊಂಡ ಕಾಳಮ್ಮ ಮಾತ್ರ ಕೃಷಿಕಳಾಗಿರುತ್ತಾಳೆ. ಸ್ವತಃ ಮಾದೇಶ್ವರನೆ ತನ್ನ ಜೀವನೋಪಾಯಕ್ಕಾಗಿ ಅನೇಕ ಸಣ್ಣ ಪುಟ್ಟ ಕೆಲಸಗಳಲ್ಲಿ ತೊಡಗುತ್ತಾನೆ. ಮಾದೇಶ್ವರ ಸಂಚಾರ ಮಾಡುತ್ತಾ ಕೆಲ ಮಠಗಳಿಗೆ ಭೇಟಿಕೊಟ್ಟಾಗ ಅಲ್ಲಿ ಸಿದ್ದಾನಂದ

ದೇಶಿಕ ಸ್ವಾಮಿಗಳು ಮಾದೇಶ್ವರನಿಗೆ ರಾಗಿಬಿಸುವ ಕೆಲಸಕ್ಕೆ ನೇಮಿಸುತ್ತಾರೆ. ಮಾದೇಶ್ವರ ರಾಗಿ ಬೀಸುವ ಕಾಯಕ ಹೇಗಿತ್ತೆಂದರೆ

"ಮಾಯ್ಕಾರ ಗಂಡ

ಮೂರು ಕೊಳಗ ರಾಗಿ ತುಂಬ್ಕೊಂಡ್ಹೋಗಿ

ಆ ದೊಡ್ಡ ರಾಗಿ ಕಲ್ಲಮ್ಯಾಲೆ ಮಡಗುಟ್ಟು

ಕಣ್ಮುಚ್ಕೊಂಡು ಬಾಗ್ಲಲ್ಲಿ ಕೂತ್ಕೊಂಡು ರಾಗಿ ಬೀಸುತ್ತಾರೆ."[೧]

ಮಾದೇಶ್ವರ ಕುಂತೂರು ಮಠದಲ್ಲಿ ಲಿಂಗ ಪೂಜೆಗೆ ಪುಷ್ಪಗಳನ್ನು ಕೀಳುವ ಕಾಯಕವನ್ನು ಮಾಡುತ್ತಾರೆ. ಮಾದೇಶ್ವರ ಸಮಾಜದಜಲ್ಲಿ ಕಾಯಕದ ಮಹತ್ವವನ್ನು ಹೇಳುವುದರೊಂದಿಗೆ ಉತ್ಪಾದನಾ ಕಾರ್ಯದಲ್ಲಿ ಯಾವ ಸಮುದಾಯದವರೇ ಆಗಲಿ ಇಂತಹದ್ದೆ ಕಾಯಕ ಮಾಡಬೇಕೆಂಬುದಿಲ್ಲ. ಇಲ್ಲಿ ಬದುಕಲು ಯಾವ ವ್ಯಕ್ತಿ ಯಾವ ಕೆಲಸವನ್ನಾದರೂ ಮಾಡುವುದು ಅವರ ಹಕ್ಕಾಗಿದೆ. ಇದರಲ್ಲಿ ಜಾತಿ, ಭೇದ, ಮೇಲು, ಕೀಳು ಎಂಬ ಭಾವನೆ ತೋರಬಾರದು ಎಂಬುದನ್ನು ಮನವರಿಕೆ ಮಾಡಿಕೊಡುತ್ತಾನೆ.

ಮಾದೇಶ್ವರ ಕಾವ್ಯದಲ್ಲಿ ಬರುವ ಜುಂಜೇಗೌಡನು ಪಶುಪಾಲನೆ ಮಾಡುವ ವ್ಯಕ್ತಿ, ಅವನ ಹೆಂಡತಿ ಮಲ್ಲಾಜಮ್ಮ. ಸತಿಪತಿಗಳಾಗಿ ಅತಿಥಿಗಳ ಸೇವೆ ಮಾಡುತ್ತಾ ಆದರ್ಶವಾಗಿದ್ದ ದಂಪತಿಗಳು. ಇವರ ಆರ್ಥಿಕತೆ ಪ್ರಬಲವಾಗಿ ಇತ್ತು ಹಾಲುಮತ ವಂಶಕ್ಕೆ ಸೇರಿದವರಾಗಿದ್ದರಿಂದ ಇವರಲ್ಲಿ ಬಡತನವಿರಲಿಲ್ಲ.

"ಡೊಳ್ಳೊಟ್ಟೆ ಜುಂಜಪ್ಪ

ಹೆಂಡ್ತಿ ಮಲ್ಲಾಜಮ್ಮ

ಆರು ಜನ ಗಂಡ ಮಕ್ಕಳ ಕಟ್ಕೊಂಡು

ಆರು ಜನ ಜೀತಗಾರರ ಕಂಟ್ಕೊಂಡು

ಏಳೂರು ಗೊಲ್ಲರ ಪೋಡು ಇಟ್ಕೊಂಡ್ರು

ಏಳುಂಡಿ ದನ ಏಳುಂಡಿ ಕುರಿ ಇಟಗೊಂಡು

ಜುಂಜಪ್ಪ ಬಾಳಾದ ಐಶ್ವರ್ಯದಲ್ಲಿವರೇ ಜುಂಜಯ್ಯ"[೨]

ಹೀಗೆ ದುಡಿದು ತಿನ್ನಬೇಕೆಂಬ ಯಾವುದೇ ಇರಾದೆ ಜುಂಜಪ್ಪಗೆ ಇಲ್ಲದೆ ತನ್ನ ಕುಟುಂಬಕ್ಕೂ ಮುಂದಿನ ತಲಮಾರಿನವರಿಗೆ ಹಂಚಬಹುದಾದಷ್ಟು ಆರ್ಥಿಕ ಸಾಮರ್ಥ್ಯ ಹೊಂದಿದ್ದ ಜುಂಜಪ್ಪನ. ಮಾದೇಶ್ವರನ ಗುಡಿಕಟ್ಟಿಸಿಕೊಳ್ಳಲು ಭಿಕ್ಷ ಬೇಡಲು ಬರುತ್ತಾನೆ. ಮದೇಶ್ವರ ತನ್ನ ಒಕ್ಕಲು ಮಾಡಿಕೊಳ್ಳುವ ಮುಂಚೆ ಆ ಸಮುದಾಯ ಉತ್ಪಾದನಾ ಸಾಮರ್ಥ್ಯ, ಸಮುದಾಯಗಳಲ್ಲಿ ಅವರ ಅಸ್ತಿತ್ವ ಹಾಗೂ ಸಾಮಾಜಿಕ ಸಂಬಂಧವನ್ನು ಪರಿಗಣಿಸಿ ಅವರನ್ನು ಒಕ್ಕಲನ್ನಾಗಿ ಪಡೆಯುತ್ತಾನೆ.

ಮಾದೇಶ್ವರನ ಕಾವ್ಯದಲ್ಲಿ ಕೃಷಿಕಳಾಗಿ ಕಂಡುಬರುವ ಕಾಳಮ್ಮ ಕೃಷಿಯು ಸ್ತ್ರೀಯ ಅನ್ವೇಷಣೆಯಿಂದ ಬಂದದ್ದು ಎಂಬುದಕ್ಕೆ ಸಾಕ್ಷಿಯಾಗಿ ಕಂಡುಬರುತ್ತಾಳೆ. ಇವಳ ಗಂಡ ಕೆಂಡೆಗೌಡ, ದನ, ಕುರಿಗಳನ್ನು ಮೇಯಿಸುವ ಕೆಲಸವನ್ನು ಮಾಡುತ್ತಿರುತ್ತಾನೆ. ಇವಳ ಶ್ರೀಮಂತಿಕೆ ಹೇಗಿತ್ತೆಂದರೆ

"ಗಂಧ ತೊಟ್ಟಿ ಗಾರೆತೊಟ್ಟಿ
ಚಿನ್ನದ ತೊಟ್ಟಿ ರನ್ನ ತೊಟ್ಟಿ ಕಟ್ಟಿಸಾವಳೇ
ಚಿನ್ನ ಬೆಳ್ಳಿ ಗೂಟ ನಡಿಸಿದ್ದಾಳೆ
ಕಂಬಳಗಾರ ಮಲ್ಲಣ್ಣ ಅಂತೇಳಿ
ಕೌದಳ್ಳಿಯಿಂದ ಒಬ್ಬ ಮೇಸ್ತ್ರೀ
ಇಟ್ಟಕ್ಕಂಡವಳೇ"[೩]

ಏಳು ಜನ ಜೀತಗಾರರನ್ನು ಹೊಂದಿದ್ದ ಕಾಳಮ್ಮ ಮನೆಯ ಆರ್ಥಿಕ ಸಂರಚನೆಯ ಚುಕ್ಕಾಣಿಯನ್ನು ಹಿಡಿದವಳು. ಗಂಡ ಮತ್ತು ಮಕ್ಕಳು ಬೇಟೆ, ಆಹಾರ, ಸಂಗ್ರಹಣೆ ಹಾಗೂ ಪಶುಸಂಗೋಪನೆಯನ್ನು ಮಾಡುತ್ತಿರುತ್ತಾರೆ. ಇದೇ ಮಹದೇಶ್ವರನ ಕಾವ್ಯದಲ್ಲಿ ಬರುವ ಸರಗೂರಯ್ಯ ಮತ್ತು ರಾಮವ್ವ ದಂಪತಿಗಳು ಬಡವರು. ನಿಷ್ಠಾವಂತ ಭಕ್ತರು ಮತ್ತು ಸ್ವಾಭಿಮಾನಿಗಳು ಸೊಪ್ಪು ಮಾರಾಟ ಮಾಡುವುದು ಹಾಗೂ ಮೀನು ಹಿಡಿಯುವ ಕೆಲಸ ಮಾಡುತ್ತಿರುತ್ತಾರೆ.

ಮಾದೇಶ್ವರನ ಕಾವ್ಯದ ಸಂಕಮ್ಮನ ಸಾಲಿನಲ್ಲಿ ಬರುವ ಸೋಲಿಗ ಸಮುದಾಯಕ್ಕೆ ಸೇರಿದ ಕುಟುಂಬ ಬೇಟೆಯನ್ನು ಮುಖ್ಯ ವೃತ್ತಿಯನ್ನಾಗಿಸಿಕೊಂಡಿತ್ತು. ಆದರೆ ಇವರು ಬೇಟೆಯನ್ನು ಆಹಾರ ಸಂಗ್ರಹಣೆಗಾಗಿ ಮಾತ್ರ ಮಾಡುತಿದ್ದರು ಉಳಿದಂತೆ ದನ ಕುರಿಗಳನ್ನು ಕಾಯುವ ಕೆಲಸ ಮಾಡುತ್ತಾರೆ. ಉಳಿದ ಮಕ್ಕಳು ಕೃಷಿ ಮಾಡುತ್ತಿರುತ್ತಾರೆ. ಸೋಲಿಗರು ಬೇಟೆಗೆ ಹೊರಡುತ್ತಿದ್ದ ವಿಧಾನ & ಉತ್ಸಾಹ ಇಲ್ಲಿ ಚಿತ್ರಿತವಾಗಿರುವ ರೀತಿ ಅನನ್ಯವಾಗಿದೆ.

"ಮುದ್ದು ಮೀಸೆ ತಿರುದವನೆ"
ಸೈ ಕಾಕನಾದ್ರೆ ಹೊಡುದವನೆ
ತೊಡೆಯನಾದರೆ ತಟ್ಟಿವನೆ
ಬೀಸು ಮಚ್ಚ ತಗದವನೆ
ಈಟಿ ಭರ್ಜಿ ತಗದವನೆ
ಗಂಡುಗೊಳ್ಳಿ ಹಿಡಿದವನೆ
ಚಕಳಾದ ಚಡ್ಡಿ ಇಕ್ಕವ್ರನೆ
ಅರಮಳ ಪರುಮಳವ ಧರುಸವನೆ-----------

ಒಂದು ಕಾಳುನಾಯಿ ಹಿಡಿದವನೆ ಒಂದು ಕೆಂದು ನಾಯ ಹಿಡಿದವನೆ"[೪] ಬೇಟೆಗೆ ಹೋಗುವ ಸೋಲಿಗ ಸಮುದಾಯದವರು ಇಷ್ಟೆಲ್ಲಾ ತಯಾರಿ ಮಾಡಿಕೊಂಡು ಹೋಗುವುದನ್ನು ವರ್ಣಿಸಲಾಗಿದೆ. ಆದರೆ ಇವರ ಬೇಟೆ ಕೇವಲ ಆಹಾರ ಸಂಗ್ರಹಣೆ ಹಾಗೂ ಕುಲದ ಒಂದು ಪದ್ಧತಿಯಾಗಿ ಮಾತ್ರ ಇಲ್ಲಿ ಚಿತ್ರಿತವಾಗಿದೆ. ಸೋಲಿಗರಿಗೆ ತಿಳಿದಂತಹ ಆಹಾರದ ವಸ್ತುಗಳೆಂದರೆ

"ಹೆಜ್ಜೇನು ತುಪ್ಪ ತಕ್ಕೊಂಡು
ಕಾಡುಜೇನು ತುಪ್ಪ ತಕ್ಕೊಂಡು
ತುಡುಬೆ ತುಪ್ಪ ತಕ್ಕೊಂಡು
ಮ್ಯಾಣದರುಬಿಗೆ ತೂಂಬೊಂಡು
ಏಯ್ ದಟ್ಟ ಒರ್ಕೇಲಿ ಇಟ್ಟವನೆ
ದುಂಡೆ ಕಾಯ ತಕ್ಕೊಂಡು
ಮಾಗಾಳಿಬೇರ ತಕ್ಕೊಂಡು
ಬೆಲ್ಲಗೆಣಸ ತಕ್ಕೊಂಡು
ಕಾಡು ಬಾಳಣ್ಣ ತಕ್ಕೊಂಡು
ಮದರಂಗಿ ಬಾಳಣ್ಣ ತಕ್ಕೊಂಡು
ಬಿದುರಕ್ಕಿಯ ತಕ್ಕಂಡು
ದಟ್ಟಿ ಹೊರ್ಕೇಲಿ ಇಟ್ಟವುನಲ್ಲೋ
ಕಾಡು ಸ್ವಾಲುಗೆ।

ಇವೆಲ್ಲವುಗಳನ್ನು ಗಮನಿಸಿದಾಗ ಸೋಲಿಗರು ಪ್ರಧಾನವಾಗಿ ಆಹಾರ ಸಂಗ್ರಾಹಕಾರು ಎಂಬುದನ್ನು ಮನದಟ್ಟು ಮಾಡುತ್ತದೆ ಬೇಟೆ ಹವ್ಯಾಸವಾಗಿ ಇತ್ತಾದರೂ ವೃತ್ತಿಯಾಗಿರಲಿಲ್ಲ,"[೫] ನೀಲಯ್ಯ ಹೆಂಡತಿ ಸಂಕಮ್ಮನ ಮೇಲೆ ಅನುಮಾನ ವ್ಯಕ್ತಪಡಿಸುವಾಗ ಕೆಲವು ಕಸುಬುದಾರರ ಹೆಸರನ್ನು ಹೇಳುತ್ತಾನೆ.

ಒಬ್ಬ ಬಳಗಾರ ಸಟ್ಟಿ ಬತ್ತವುನೆ
ಒಬ್ಬ ಆಟನಕಾರ ಬತ್ತವುನೆ
ಒಬ್ಬ ಮಾಟನಕಾರ ಬತ್ತವನೆ
ಬುಡು ಬುಡಕೇನೆ ಬತ್ತವುನೆ
ಮುಳ್ಳು ಗುರುಬಾನೆ ಬತ್ತವನೆ"[೬]

ಎಂದು ಕೆಲ ವೃತ್ತಿಗಳನ್ನು ಹೊಂದಿ ಜೀವನ ಸಾಗಿಸುವವರ ಹೆಸರನ್ನು ಹೇಳುವುದರೊಂದಿಗೆ ಸೋಲಿಗ ಸಮುದಾಯದಲ್ಲಿ ಕೃಷಿಕರಾದರೂ ಸಹ ಇತರೆ ವೃತ್ತಿಗಳ ಪರಿಚಯ ಈ ಸಮುದಾಯಕ್ಕೆ ಇರಬಹುದು ಎಂಬುದನ್ನು ತಿಳಿಯಬಹುದು.

ಮಾದೇಶ್ವರ ಕಾವ್ಯದಲ್ಲಿ ಆರ್ಥಿಕತೆಯ ಸಂರಚನೆಯು ಒಂದು ವೃತ್ತಿಯಾಗಿರದೆ ಕೆಲವು ಸಮುದಾಯಗಳ ಪದ್ಧತಿಗಳಾಗಿ ಕಂಡುಬರುತ್ತವೆ, ಮಾದೇಶ್ವರ ತನಗೆ ಅಗತ್ಯವಾಗ ಭಕ್ತರನ್ನು ಒಪ್ಪಿಸಿಯೋ ಅಥವಾ ಶಿಕ್ಷೆ ನೀಡಿಯೋ ಎಣ್ಣೆ ಮಜ್ಜನಕ್ಕಾಗಿ, ಎಳ್ಳೆಣ್ಣೆ ಮಜ್ಜನಕ್ಕಾಗಿ, ಸಂಘರ್ಷದ ಮೂಲಕ ಒಕ್ಕಲುಗಳನ್ನು ಪಡೆಯುತ್ತಾನೆ. ಬೇಟೆ, ಕೃಷಿ, ಪಶುಪಾಲನೆ, ಕುರಿಸಾಕಾಣಿಕೆ ಹೀಗೆ ಒಂದೊಂದೆ ವಿಕಾಸದ ಹಂತವಾಗಿ ವೃತ್ತಿಗಳನ್ನು ಸಾಂಘಿಕವಾಗಿ ಬೆಳಸಿಕೊಂಡು ಬಂದಿರುವುದನ್ನೆ ಕಾಣಬಹುದು.

ಮಂಟೇಸ್ವಾಮಿ ಕಾವ್ಯದಲ್ಲಿ ಯಾವುದೇ ಒಂದು ಸಮುದಾಯವು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಒಂದು ಕಾಯಕವನ್ನೆ ಕೈಗೊಳ್ಳಲೇಬೇಕು. ಆದ್ದರಿಂದಲೇ ಮಂಟೇಸ್ವಾಮಿಯ ಶಿಶುಮಕ್ಕಳಾಗಿ ದೈವಿಕೃಪೆಗೆ ಪಾತ್ರರಾದರು ಸಹ ಸಮುದಾಯದ ಅಭಿವೃದ್ಧಿಗಾಗಿ ಆರ್ಥಿಕ ಸಂರಚನೆಯನ್ನು ಅವಲಂಬಿಸಿರುತ್ತಾರೆ.

ಮಂಟೇಸ್ವಾಮಿಯ ಕಾವ್ಯದಲ್ಲಿ ಬರುವ ಮಂಟೇಸ್ವಾಮಿಯ ಶಿಶುಮಗನಾದ ಸಿದ್ದಾಪ್ಪಾಜಿಯ ತಂದೆ ತಾಯಿಯು ಬಾಚಿ ಬಸವಯ್ಯ, ಮತ್ತು ಮುದ್ದಮ್ಮರು ಕಡು ಬಡವರಾಗಿದ್ದು ಶಿವಚಾರರ ಮಠ ಮನೆಯೊಳಗೆ ದನಕಾಯುವುದು, ರಾಗಿ ಬೀಸುವುದು, ಹಾಲು ಕರೆಯುವ ಕೆಲಸದಲ್ಲಿ ತೊಡಗಿರುತ್ತಾರೆ. ಮಂಟೇಸ್ವಾಮಿ ಇವರಿಗೆ ಕೆಂಪಾಚಾರಿಯನ್ನು ಮಗನಾಗಿ ನೀಡುವುದರೊಂದಿಗೆ ಶ್ರೀಮಂತಿಕೆಯನ್ನು ದಯಪಾಲಿಸುತ್ತಾನೆ. ಕೆಂಪಾಚಾರಿ ಕಾಲುಮೆ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿರುತ್ತಾನೆ. ಕೆಂಪಾಚಾರಿಯನ್ನು ಶಿಶುಮಗನನ್ನಾಗಿ ಪಡೆಯಲು ಮಾರುವಳ್ಳಿ ಗ್ರಾಮಕ್ಕೆ ಬರುತ್ತಾರೆ. ಕೆಂಪಾಚಾರಿ ಕುಲುಮೆ ಕೆಲಸ ಮಾಡಿಸುವ ರೀತಿಯನ್ನು ನೋಡಿ ಮಂಟೇಸ್ವಾಮಿ ಸಂತೋಷದಿಂದ ನಿಲ್ಲುತ್ತಾರೆ.

ಒತ್ತರ್ಲ ತಿದಿಯ
ಕಾಸಿರ್ಲ ಕಬ್ಬಿಣವ
ಒಡೀರ್ಲ ಒಡೀರ್ಲ
ಆಗನತೇಳಿ ಕೆಂಪಣ್ಣ
ಗುರುವೇ ಬಾರಿ ಬಾರೀ ಗಲಾಟೆ
ಮಾಡುತ ನನ್ನ ಕಂದಾ
ಕುಳಿತಿದ್ದ ಕೆಂಪಣ್ಣ"[೭]

ಎಂಬುದನ್ನು ಕೆಂಪಚಾರಿಯ ವೃತ್ತಿಯ ಮೂಲಕ ಕಾಣಬಹುದು. ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ತಳವರ್ಗದ ಮಾಚಯ್ಯನು, ಮಡಿವಾಳ. ವೃತ್ತಿಯನ್ನು ಶ್ರದ್ಧೆಯಿಂದ ಮಾಡುತ್ತಾನೆ.

"ಸತ್ತ ಸೂತಕದ ಬಟ್ಟೆ
ನೆರೆದ ಸೂತಕದ ಬಟ್ಟೆ
ಮೈಲಿಗೆ ಮಡಿ ಬಟ್ಟೆಗಳನ್ನು"[೮]

ಬೀದಿ ಬೀದಿಯಲ್ಲಿ ಎತ್ತಿ ಅವುಗಳನ್ನು ಒಗೆಯುವ ಕಾಯಕ ಮಾಡುತ್ತಾನೆ. ಮಂಟೇಸ್ವಾಮಿಗಳು ಇವನ ಕಾಯಕಕ್ಕೆ ಮೆಚ್ಚಿ ಮಾಚಯ್ಯನ ಮಡಿಬಟ್ಟೆ ಬರೋವರೆಗು ನನ್ನ ಮಠದ ಪೂಜೆ ನಡೆಯುವುದಿಲ್ಲ ಎಂದು ಹೇಳುವುದರ ಜೊತೆಗೆ ಮಾಚಯ್ಯನನ್ನು ಶಿಶುಮಗನನ್ನಾಗಿ ಮಾಡಿಕೊಳ್ಳುತ್ತಾರೆ. ಮಂಟೇಸ್ವಾಮಿ ಮಡಿವಾಳ ಮಾಚಯ್ಯನನ್ನು ಶಿಶುಮಗನನ್ನಾಗಿ ಮಾಡಿಕೊಳ್ಳುವುದರ ಮೂಲಕ ಸಮಾಜದಲ್ಲಿದ್ದ ಮೇಲ್ವರ್ಗದವರು ಕೆಳವರ್ಗದವರ ಮೇಲೆ ನಡೆಸುತ್ತಿದ್ದ ಪ್ರಭುತ್ವ ನಾಶಕ್ಕೆ ಮುಂದಾಗುತ್ತಾನೆ.

ಕಾಡು ನಾಡಾಗಿ ಪರಿವರ್ತಿತವಾಗಿ ನಾಗರಿಕರಾಗುವ ಸಂದರ್ಭದಲ್ಲಿ ಆಹಾರ ಸಂಗ್ರಹಣೆಗಾಗಿ ಕೃಷಿಯ ಕಡೆಗೆ ಸಮುದಾಯಗಳು ವಾಲಿದವು. ಕೃಷಿಗೆ ಅಗತ್ಯವಾದ ಕಬ್ಬಿಣದ ಉಪಯೋಗ ಮಾಡಿಕೊಳ್ಳುವ ಕಾಲದಲ್ಲಿ ಕಬ್ಬಿಣಕ್ಕೆ ಹೆಚ್ಚು ಬೇಡಿಕೆ ಬಂದಿತು ಹಾಗೂ ಕಬ್ಬಿಣ ಉತ್ಪಾದಿಸುವವರಿಗೆ ಮರ್ಯಾದೆ, ಮೇಲ್ವರ್ಗಸ್ಥಾನವನ್ನು ತಂದುಕೊಟ್ಟಿತು. ಹೀಗಾಗಿ ಮಂಟೇಸ್ವಾಮಿಯ ಕಾವ್ಯದಲ್ಲಿ ಬರುವ ಪಾಂಚಾಳರು ದೊರೆಗಳಾಗಿ ಮೆರೆಯುತ್ತಿರುತ್ತಾರೆ. ಇಂತಹವರಿಂದ ಕಬ್ಬಿಣದ ಭಿಕ್ಷೆ ಕೇಳಲು ಸಿದ್ದಪ್ಪಾಜಿ ಬಳೆಗಾರನಾಗಿ ಬಂದು ಪಾಂಚಾಳರ ದೊರೆಗಳ ಹೆಂಡತಿಯರ ಬಳಿ ಬಳೆಗಳಿಗೆ ತಗಲುವ ದುಡ್ಡಿನ ಬದಲಾಗಿ

"ನನ್ನಗೂ ಹೆಚ್ಚಾಗೂ ಕೊಡಬ್ಯಾಡಿ,
ಅಪ್ಪಾರ ಕೊಡಬೇಡಿ ಕಣ್ರವ್ವ
ನನ್ನ ಬಳೆ ದುಡ್ಡುಗಾಗುವಂತ
ಉಡ್ಗಬ್ಬಣ ಕೊಟ್ಟುಬಿಡಿ ಅಕ್ಕಯ್ಯಾ"[೯]

ಎಂದು ಕೇಳುವುದು ಸಾಂಕೇತಿಕವಾಗಿದೆ. "ಇದರಿಂದ ಕಬ್ಬಿಣವನ್ನು ಪಡೆಯುವುದೆಂದರೆ ಅವರನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವುದು ಎಂದರ್ಥ"[೧೦] ಇದೊಂದು ತನ್ನ ಕುಲದವರ ಆರ್ಥಿಕ ಸಂರಚನೆಯ ಮೇಲೆ ನಡೆಸುವ ದಂಗೆ ಎಂದೇ ಹೇಳಬಹುದು.

ಹೀಗೆ ಮಂಟೇಸ್ವಾಮಿಯು ತನಗೆ ಬೇಕಾದ ಒಕ್ಕಲುಗಳನ್ನು ಪಡೆದುಕೊಳ್ಳಲು ಮೇಲ್ವರ್ಗ ಕೆಳವರ್ಗ ಎಂಬ ಭೇದವನ್ನು ಎಣಿಸದೆ ಆಯಾ ಸಮುದಾಯಗಳ ಆರ್ಥಿಕ ಚೈತನ್ಯದ ಮೇಲೆ ಅಧಿಪತ್ಯ ಸಾಧಿಸುವುದರ ಮೂಲಕವೇ, ಮಂಟೇಸ್ವಾಮಿ ತಳವರ್ಗದ ಪರವಾಗಿ ಆರ್ಥಿಕ ಚಟುವಟಿಕೆಯ ವಿರುದ್ಧ ದಂಗೆ ಹೇಳುತ್ತಾನೆ.

ಆರ್ಥಿಕ ಸಂರಚನೆಯ ಹಿನ್ನೆಲೆಯಿದ್ದ ಕಸುಬುಗಳನ್ನು ಗುರುತಿಸುವುದರಲ್ಲಿ ಜುಂಜಪ್ಪನ ಕಾವ್ಯದಲ್ಲಿ ಕಾಡುಗೊಲ್ಲರ ಪ್ರಧಾನ ವೃತ್ತಿಯಾಗಿ ಪಶುಪಾಲನೆ, ಹುಲ್ಲುಗಾವಲು ರಕ್ಷಣೆ, ಪ್ರಮುಖವಾದ ಆರ್ಥಿಕ ಚುಟವಟಿಕೆಯಾಗಿರುವುದು ಕಂಡು ಬರುತ್ತದೆ. ಪಶುಪಾಲನೆ ಗೊಲ್ಲ ಸಮುದಾಯಕ್ಕೆ ಒಂದು ಪ್ರಮುಖ ವೃತ್ತಿ ಹಾಗೂ ಸವಾಲಾಗಿತ್ತು ಏಕೆಂದರೆ ದನಕರುಗಳನ್ನು ಕದಿಯುವುದನ್ನೇ ಮುಖ್ಯ ವೃತ್ತಿಯನ್ನಾಗಿಸಿಕೊಂಡಿದ್ದ ಒಂದು ವರ್ಗದವರಿಂದ ಹಾಗೂ ಕಾಡುಪ್ರಾಣಿಗಳಿಂದ ರೋಗ ರುಜಿನಗಳಿಂದ

ದನಗಳನ್ನು ಸಂರಕ್ಷಿಸಿಕೊಳ್ಳುವುದು ತಮ್ಮ ಆರ್ಥಿಕ ಸಬಲತೆಯನ್ನು ಕಾಪಾಡಿಕೊಳ್ಳುವುದು ಮುಖ್ಯವಾಗಿತ್ತು. ಗೊಲ್ಲರು ಸಾಮಾಜೀಕರಣ, ಸಾಂಸ್ಕೃತೀಕರಣಗೊಂಡು ಪಶುಪಾಲನೆ ಹಾಗೂ ಕೃಷಿಯ ನಡುವಣದ ಆರ್ಥಿಕ ಸಬಲತೆ ಹೊಂದಿರುವ ಬುಡಕಟ್ಟಾದರು ಗ್ರಾಮದಿಂದ ದೂರದ ಕಾಡುಗಳಲ್ಲಿ ವಾಸಿಸುತ್ತಾ ಪಶುಪಾಲನೆಯನ್ನು ಮುಖ್ಯ ಕಸುಬನ್ನಾಗಿಸಿಕೊಂಡು ಬಂದರು."[೧೧] ಜುಂಜಪ್ಪನ ಕುಟುಂಬವು ಮೂರು ತಲೆಮಾರುಗಳಿಂದಲೂ ಪಶುಪಾಲನೆಯನ್ನೇ ಮಾಡಿಕೊಂಡು ಬಂದಿದೆ. ಪಶುಗಳ ಮೇಲಿನ ಪ್ರೀತಿಯಿಂದ ಹೆಂಡತಿ, ಮಕ್ಕಳನ್ನು ಬಿಟ್ಟು ಕಾಡಿನಲ್ಲಿ ವಾಸಿಸುವಷ್ಟು ಪ್ರೀತಿಯನ್ನು ಅವರು ಪಶುಗಳ ಮೇಲೆ ಹೊಂದಿದ್ದರು. ಮಾರುಮುತ್ತಣ್ಣ ಜುಂಜಪ್ಪನ ತಾತ ಒಬ್ಬ ಪಶುಪಾಲಕನಾಗಿದ್ದು ಅವುಗಳಿಗೊಸ್ಕರ ಕಾಡಿನಲ್ಲಿ ಒಬ್ಬ ತಪಸ್ವಿಯಂತೆ ಜೀವಿಸುತ್ತಿರುತ್ತಾನೆ. ಜುಂಜಪ್ಪನ ತಂದೆ ಕೆಂಗರು ಮಲ್ಲೇಗೌಡನು ಪಶುಪಾಲಕನಾಗಿದ್ದು, ಪಶುಗಳಿಗೆ ಇವನೆಂದರೆ ತುಂಬಾ ಪ್ರೀತಿ, ಕೆಂಗರು ಮಲ್ಲೇಗೌಡನು ಪಶುಗಳನ್ನು ಕರೆಯುವ ರೀತಿ ಮನೋಜ್ಞವಾಗಿದೆ.

"ಕಳುವರಳ್ಳಿ ಹತ್ರ
ಆಲರತಿ ಕಟ್ಟೇಏರಿ ಮೇಲೆ ಕುಂತಗಂಡು
ಪಿಳಗೋಣ್ ಹಿಡಿತಾನೊ
ಕೆಂಗರು ಮಲ್ಲೇಗೌಡ
ಗಂಗೆಗೌರಿ
ಅಂಗನಮಣಿ
ತುಂಗಭದ್ರಿ
ಅಮ್ಮಾ ಗೊಲ್ಲ ಕರೆದ ದನಿಯನ್ನಾ ಕೇಳಿ ಎಲ್ಲಾ ಗೋವುಗಳು ಬನ್ನಿರಮ್ಮ.
ಅಂದಾನು

ಜುಂಜಪ್ಪನಪ್ಪ ಗಳಿಗಾಗೋ"[೧೨]ಎನ್ನುವಲ್ಲಿ ಹೆಂಡತಿ ಮಕ್ಕಳಿಗಿಂತ ಪಶುಪಾಲನೆಯಲ್ಲಿ ಅಪಾರ ಪ್ರೀತಿಯನ್ನು ಹೊಂದಿ ಅವುಗಳ ರಕ್ಷಣೆಯಲ್ಲಿಯೇ ಜೀವನ ಕಳೆಯುತ್ತಾರೆ.

ಜುಂಜಪ್ಪನು ಸಹ ಪಶುಸಂಗೋಪನೆಯನ್ನೇ ವೃತ್ತಿಯಾಗಿಸಿಕೊಂಡಿದ್ದ. ಸಹ ಅವಲಂಬಿತ ವೃತ್ತಿಯಾಗಿ ಸಿನ್ನಮ್ಮನು ಸೌದೆ ಮಾರುವ ಕಾಯಕ ವೃತ್ತಿಯನ್ನು ಮಾಡುತ್ತಿರುತ್ತಾಳೆ. ಅವಳು ಕಾಡಿಗೆ ಹೋಗಿ ಸೌದೆ ತಂದು ಮಾರುವ ರೀತಿ ಹೇಗಿತ್ತೆಂದರೆ

"ಅರಣ್ಯಕ್ಕೊಗಿ
ಆಗಲೀಗಂಡಗಾಸಿ ಕಟ್ಟ್ಯವುಳ್ಳಣ್ಣ
ಸಿಪ್ಪುಗೊಡುಲಿ ಒಳುಗಣ್ಣ

ಒಳಿಕೇ ಒಳಿಕೇ ಸೌದೆನೇ

ಕಡುದವ್ನೊ ಸಿನ್ನಮ್ಮ

ಮೂಕೂಲಿಟ್ಟು ಹೊರೆಯನ್ನ

ಕಟ್ಟ್ಯಾವುಳೋ ಮಹಾತಾಯಿ

ಹೊರೆಯನ್ನು ಕಟ್ಟಿ ಸಿನ್ನಮ್ಮ

ಆಗಲೇ ಸೌದೆ ಹೊತ್ತುಗಂಡು

ಹೋಗುತಾಳಿರಿಯೂರ ಪ್ಯಾಟೆಗೇ

ಸೌದೆ ಸೌದೆ ಎಂದು

ನೆಡಿಕೇರಿ ಒಳುಗಣ್ಣ

ಕೂಗಿದಳೋ ಸಿನ್ನಮ್ಮ ಗಳಿಗಾಗೋ"[೧೩]

ಸಿನ್ನಮ್ಮ ಒಬ್ಬ ಸಾಂಸ್ಕೃತಿಕ ವೀರನ ತಾಯಿಯಾಗಿ ಒಂದು ಸಮುದಾಯವನ್ನು ಮುನ್ನೆಲೆಗೆ ತರುವ ಸ್ತ್ರೀಯಾದರೂ ತನ್ನ ಹಾಗೂ ತನ್ನ ಮಕ್ಕಳ ಪೋಷಣೆಗಾಗಿ ಯಾವುದೋ ಒಂದು ಕಾಯಕವನ್ನು ಅವಲಂಬಿಸುವುದು ತಪ್ಪಲಿಲ್ಲ, ಸ್ವತಃ ಜುಂಜಪ್ಪನೇ ತಾಯಿಗೆ ಒಂದು ಉದ್ಯೋಗ ಅರಸುವಂತೆ ತಿಳಿಸುತ್ತಾನೆ. ಈ ಮೂಲಕ ಮಹಿಳೆಯನ್ನು ಆರ್ಥಿಕವಾಗಿ ಸಬಲರನ್ನಾಗಿಸುವ ಉದ್ದೇಶವನ್ನು ಜುಂಜಪ್ಪನಲ್ಲಿ ಕಾಣಬಹುದು. ಒಟ್ಟಿನಲ್ಲಿ ಕಾಡುಗೊಲ್ಲರು ಹುಲ್ಲುಗಾವಲು ಹಾಗೂ ಪಶುಪಾಲನೆಯಲ್ಲಿ ತೊಡಗಿದ್ದು ಅವರ ಮುಖ್ಯ ಕಸುಬಾಗಿತ್ತು. ಹುಲ್ಲುಗಾವಲಿನ ಅತಿಯಾದ ಬಳಕೆಯಿಂದ ಕಾಡಿನ ನಾಶವಾದಂತೆಲ್ಲ ಗೊಲ್ಲರು ಪ್ರಸ್ತುತವಾಗಿ ಕುರಿಗಳ ಸಾಕಾಣಿಕೆಯನ್ನು ವೃತ್ತಿಯಾಗಿ ರೂಢಿಸಿಕೊಳ್ಳುತ್ತಿದ್ದಾರೆ.

ಮೈಲಾರಲಿಂಗನು ಕುರಿಕಾಯುವ ವೃತ್ತಿಯನ್ನು ಮಾಡುತ್ತಿರುತ್ತಾನೆ . ಮೈಲಾರನು ಹರಕು ಕಂಬಳಿ ಹುಟ್ಟು, ಮುರುಕು ಬೆತ್ತವನ್ನು ಹಿಡಿದು ಅರಣ್ಯದ ಕಡೆಗೆ ತಿರುಗುತ್ತಾ ಕೋಮಾಲಿಯ ಅಣ್ಣಂದಿರ ಬಳಿ ಬರುತ್ತಾನೆ. ತನ್ನ ಹಸಿವಿನ ನಿವಾರಣೆಗಾಗಿ ಅವರಲ್ಲಿ ಅಂಬಲಿ ಹಾಗೂ ಕುರಿ ಹಾಲನ್ನು ಕೇಳಿ ಪಡೆಯುತ್ತಾನೆ. ನಂತರ ಅವರ ಬಳಿಯೆ ಕುರಿ ಕಾಯುವ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಮೈಲಾರನ ಕುರಿ ಕಾಯುವ ರೀತಿ ಹೇಗಿತ್ತೆಂದರೆ

"ಈ ಮಾಯಿಕಾರ

ಹೊಳಿಗೆ ಕುರಿಯು ಹೊಡೆಯುತಾನ

ದೇವರು ದೇವಾ

ಈ ಮಾಯಿಕಾರ

ಟುರ್ರ ಎಂದು ತಾನೇ ಕರೆಯುತಾನ

ದೇವರುದೇವಾ

ಈ ಮಾಯಿಕಾರ

ಟುರ್ರ ಎಂದು ತಾನೇ ಹೊಡೆಯುತಾನೆ

ದೇವರು ದೇವಾ"[೧೪]

ಎಂದು ಮೈಲಾರನು ಕೋಮಾಲಿಯನ್ನು ಮದುವೆಯಾಗಲು ಹಾಗೂ ಕುರುಬರನ್ನು ತನ್ನ ಒಕ್ಕಲಾಗಿಸಿಕೊಳ್ಳಲು ಕುರಿಗಳನ್ನು ನೋಡಿಕೊಳ್ಳುವ ನೆಪದಲ್ಲಿ ಅವುಗಳನ್ನು ಒಗೆದು ಕೊಂದುಹಾಕುತ್ತಾನೆ. ನಂತರ ಕೋಮಾಲಿಯೊಂದಿಗೆ ಮದುವೆ ಮಾಡಿಕೊಟ್ಟರೆ ಕುರಿಗಳನ್ನು ಬದುಕಿಸುವುದಾಗಿ ಹೇಳಿ ಕೋಮಾಲಿಯನ್ನು ವಿವಾಹವಾಗುತ್ತಾನೆ. ಅಷ್ಟೇ ಅಲ್ಲದೇ ಮೈಲಾರನು ಕುರುಬರ ಬಳಿ ಕಂಬಳಿ ನೇಯುವ ಕೆಲಸಕ್ಕೂ ಸೇರಿಕೊಳ್ಳುತ್ತಾನೆ.

" ಏ ಕುರುಬರೆ

ಕಂಬಾಳಿ ನಾನು ನೇಯುತ್ತೀನೊ

ಆ ಮಾಯಿಕಾರ

ಏಳು ಮಗ್ಗಾಗಳು ಹೂಡೂತಾನ

ದೇವರು ದೇವಾ

ಆ ಮೈಲಾರಲಿಂಗ

ಏಳು ಮಗ್ಗಾಗಳು ಹಾಕ್ಯಾನಲ್ಲ

ದೇವರು ದೇವಾ

ಆ ಮೈಲಾರಲಿಂಗ

ಬಣ್ಣಾಕೊಂದು ಕಂಬಳಿ ಹಾಕ್ಯಾನಲ್ಲಾ

ಆ ಮೈಲಾರಲಿಂಗ

ಏಳು ಕಂಬಳಿ ನೇಯುದಾನ

ದೇವರು ದೇವಾ"[೧೫]

ಹೀಗೆ ಮೈಲಾರನು ಕುರಿ ಕಾಯುವ ಮತ್ತು ಕಂಬಳಿ ನೇಯುವುದರೊಂದಿಗೆ ತನ್ನ ಸಮುದಾಯಕ್ಕೆ ಒಂದು ಶಾಶ್ವತ ಕೆಲಸವನ್ನು ಒದಗಿಸಬೇಕೆಂಬ ಹಂಬಲವನ್ನು ಹೊಂದಿರುತ್ತಾನೆ ಹಾಗೂ ಮೇಲ್ವರ್ಗಕ್ಕೆ ಮಾತ್ರ ಸೀಮಿತವಾಗಿದ್ದ ಕಂಬಳಿ ನೇಯುವ ವೃತ್ತಿಯನ್ನು ತನ್ನ ಸಮುದಾಯದವರಿಗೆ ವರ್ಗಾಯಿಸುತ್ತಾನೆ. ಈ ಕಾವ್ಯದಲ್ಲಿ ಕೋಮಾಲಿಯು ತನ್ನ ಅಣ್ಣಂದಿರಿಗಾಗಿ ಕಂಬಳಿ ಮಾರುವ ಕೆಲಸ ಮಾಡುತ್ತಾಳೆ.

"ಆ ಕೋಮಾಲಿ

ಗಂಟುಗಳ ತಾನೆ ಬಿಚ್ಯಾಳಲ್ಲಾ

ದೇವರು ದೇವಾ

ಏ ನಮ್ಮ ತಾತ

ಏಳಾಣೆಗೊಂದು ಕೊಡುತ್ತೀನೊ

ದೇವಾರು ದೇವಾ

ಏ ನಮ್ಮ ತಾತ

ಒಂಟಿ ಕಂಬಾಳಿ ಕೊಡದಿಲ್ಲ

ದೇವಾರು ದೇವಾ"[೧೬]

ಎಂದು ಕೋಮಾಲಿಯೊಂದಿಗೆ ಕಂಬಳಿ ಮಾರಾಟ ಮಾಡಿಸುವುದರೊಂದಿಗೆ ವ್ಯಾಪಾರ ಮಾಡುವ ಎಲ್ಲ ಸಂತೆಗಳ ಪರಿಚಯವನ್ನು ಎಲ್ಲಾ ಸಮುದಾಯಗಳಿಗೂ ತಿಳಿಯಪಡಿಸುತ್ತಾನೆ.

ಮಾಳಿಂಗರಾಯನ ಕಾವ್ಯ ಪಶುಪಾಲನೆಯನ್ನು ಆಧರಿಸಿದ ಕಾವ್ಯವಾಗಿದ್ದು, ಈ ಕಾವ್ಯದಲ್ಲಿ ಇದನ್ನು ನಂಬಿ ಭೂಮಿಯ ಮೇಲಿನ ನೀರು ಮತ್ತು ಪಶುಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದೆ. ಈ ಸಮುದಾಯದ ಪಾಳೆಗಾರರಾದ ತುಕ್ಕಪ್ಪರಾಯ, ಸೋಮರಾಯ, ಅಣ್ಣತಮ್ಮಂದಿರು. ಬಾರಾಮತಿ ಮತ್ತು ತೇರಾಮತಿ ಪಟ್ಟಣದ ಗೌಡರಾಗಿ ಕಾರ್ಯನಿರ್ವಹಿಸುತ್ತಿದ್ದರೂ ಸಹ ಗೋವು ಸಾಕಾಣಿಕೆ ಇವರ ಪ್ರಧಾನ ಕಸುಬಾಗಿದೆ. ಪಶುಗಳೆ ಇವರ ಪ್ರಧಾನ ಆರ್ಥಿಕ ಸಂಪಾದನೆಯಾಗಿದೆ.

ಮಾಳಿಂಗರಾಯನ ಕಾವ್ಯದಲ್ಲಿ ಪಶುಪಾಲನೆಯನ್ನು ಗುರುವಿನ ಸೇವೆಯೆಂದು ನಂಬಿ ಬದುಕುತ್ತಿರುವುದನ್ನು ಕಾಣಬಹುದು.

"ಗುರುವಿ ಕಿಲ್ಹಾರ

ಈಗ ನಮ್ಹಂತೇಕ

ಮರುಗತಾವ ನೋಡ ತಮ್ಮಾ

ಹೊಟ್ಟಿಗಿ ಇಲ್ಲದಕ

ಅಷ್ಟ ಐಶ್ವರ್ಯ

ಬೇಕೊ ಯಾತಕ

ಗುರು ಸೇವೆ ಒಂದು

ಇದ್ದರೆ ಸಾಕ

ಕಿಲ್ಲಾರ ಸಲುವಾಗಿ ನಾವು

ಊರ ಬಿಡಬೇಕ

ತುಕ್ಕಪ್ಪ ಹೇಳ್ತಾನ

ಸೋಮರಾಯನ ಬಲ್ಲೇಕ

ನಿಷ್ಠುರಾಗಿ ಹೊಂಟಾರ

ಕಿಲ್ಲಾರ ಮೇಸುದಕ"[೧೭]

ಪಶುಪಾಲಕರಾಗಿದ್ದ ತುಕ್ಕಪ್ಪರಾಯ, ಸೋಮರಾಯರು ಗೌಡರಾಗಿದ್ದರು. ಊರಿನಲ್ಲಿ ಬರಗಾಲ ಬಂದ ಕಾರಣ ಹಸುಗಳಿಗೆ ಹುಲ್ಲು ಮೇವಿನ ಕಷ್ಟ ಬಂದಾಗ ಹಸುಗಳೇ ದೈವವೆಂದು ನಂಬಿದ ಇವರು ಊರು ತೊರೆದು ಕಾಡು ಸೇರುತ್ತಾರೆ. ಕಾಡಿನಲ್ಲಿ ಪಶುಗಳ ಸಂರಕ್ಷಣೆಗಾಗಿ ಬಿಲ್ವಿದ್ಯೆಯನ್ನು ಬಲ್ಲವರಾಗಿದ್ದರು. ತುಕ್ಕಪ್ಪರಾಯ, ಸೋಮರಾಯ ಪಶುಸಂಗೋಪನೆಗಾಗಿ ಪ್ರಾಣವನ್ನಾದರೂ ಕೊಡಲು ಸಿದ್ದರಿದ್ದರು. ಪಶುಗಳೊಂದಿಗೆ ಕಾಡಲ್ಲಿ ನೆಲೆಸಿದ್ದಾಗ ಏಳೂನೂರ ಬೇಡರು ಪಶುಗಳನ್ನು ಕದಿಯಲೂ ಬಂದಾಗ

"ತುಕ್ಕಪ್ಪರಾಯ ಎದ್ದ ನೋಡ್ತಾನ

ತುಕ್ಕಪ್ಪರಾಯ ತಾ ನೋಡ್ತಾನ ಅಲ್ಲೀ

ಕೇಳರಿ ಅವಸರ ಮಾಡೀ

ಈರಗಾಲ ಹೂಡಿ ತೀರ

ಚಿಮ್ಮಟ ಹಚ್ಚಿ

ಬಾಣ ಬಿಟ್ಟ ದೌಡ ಮಾಡಿ

ಕೇಳರಿ ಹೊಯ್ಕದ ನುಡಿ

ಅಷ್ಟು ಬಾಣ ಹುಸಿ ಹ್ವಾದಾವ ನೋಡಿ

ತುಕ್ಕಪ್ಪರಾಯ ಬಾಣ ಹೊಡಿಕೊಂಡ ಬಿದ್ದಾನೋ

ಬ್ಯಾಡರ ಸಂಗಟ ಯುದ್ಧ ಆಡೀ"[೧೮]

ಹೀಗೆ ತುಕ್ಕಪ್ಪರಾಯನು ಹಸುಗಳ ರಕ್ಷಣೆಗಾಗಿ ಬೇಡರೊಂದಿಗೆ ಹೋರಾಡಿ ಕೊನೆಗೆ ಅಸಾಯಕನಾಗಿ ಸಾಯುತ್ತಾನೆ. ಇಲ್ಲಿ ಮನುಷ್ಯನಿಗಿಂತ ಹೆಚ್ಚಾಗಿ ಪ್ರಾಣಿಗಳಿಗೆ ಬೆಲೆ ಕೊಡುವುದರ ಮೂಲಕ ತಮ್ಮ ಜೀವನದ ಅವಿಭಾಜ್ಯ ಅಂಗವಾಗಿ ಪಶುಗಳು ಪ್ರಾಮುಖ್ಯತೆ ವಹಿಸುತ್ತವೆ ಎಂಬುದನ್ನು ಸಾಬೀತುಪಡಿಸಲಾಗಿದೆ.

ಒಟ್ಟಿನಲ್ಲಿ ಯಾವುದೇ ವ್ಯಕ್ತಿ, ಕುಟುಂಬ, ಸಮುದಾಯ ತನ್ನ ಇರುವಿಕೆಯನ್ನು ಕಂಡುಕೊಳ್ಳಲು ಒಂದು ಆರ್ಥಿಕ ವ್ಯವಸ್ಥೆಯನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಆದ್ದರಿಂದಲೇ ಮೌಖಿಕ ಕಾವ್ಯಗಳಲ್ಲಿ

ಬರುವ ಪ್ರತಿಯೊಂದು ಕುಟುಂಬಗಳು ಒಂದೊಂದು ವೃತ್ತಿಯನ್ನು ಅವಲಂಬಿಸಿದ್ದಾರೆ. ಕೆಲ ವೃತ್ತಿಗಳು ಸಂಪ್ರದಾಯಕವಾಗಿದ್ದರೆ ಮತ್ತೆ ಕೆಲವು ವೃತ್ತಿಗಳು ಅವಲಂಬಿತವಾಗಿರುತ್ತವೆ. ನಾಯಕರು ಭಿಕ್ಷೆಯನ್ನು ಸಹ ಒಂದು ವೃತ್ತಿಯಾಗಿ ಪರಿಗಣಿಸಿ ತಮಗೆ ಒಕ್ಕಲು ಬೇಕಾದ ವ್ಯಕ್ತಿ, ಸಮುದಾಯಗಳನ್ನು ಭಿಕ್ಷೆ ಬೇಡುತ್ತಾ ಮುಂದೆ ಸಾಗುತ್ತಾರೆ. ನೀಲಗಾರರು ಹಾಡುವುದನ್ನೇ ಒಂದು ವೃತ್ತಿಯಾಗಿಸಿಕೊಂಡು ಸಾಂಸ್ಕೃತಿಕ ವೀರರ ಗದ್ದುಗೆ ಇರುವ ಕ್ಷೇತ್ರಗಳಲ್ಲಿ ಹಾಡುತ್ತಾರೆ. ಇದನ್ನೇ ತಮ್ಮ ಜೀವನೋಪಾಯಕ್ಕಾಗಿ ಹಾಡುವ ಪರಂಪರೆಯನ್ನೇ ಮುಂದುವರೆಸಿದ್ದಾರೆ. ಇನ್ನೂ ಅನೇಕ ಸಮುದಾಯಗಳು ಇಂದು ತಮ್ಮ ಮೂಲ ವೃತ್ತಿಯನ್ನು ತೊರೆದು ಆಧುನಿಕ ಸಮಾಜಕ್ಕೆ ತಕ್ಕಂತೆ ವೃತ್ತಿಗಳನ್ನು ಅವಲಂಬಿಸಿ ಮಾಡಿ ಜೀವನ ಸಾಗಿಸುತ್ತಿದ್ದಾರೆ.

### ೪.೨ ಉತ್ಪಾದನೆಯ ಮೇಲಿನ ಒಡೆತನ ಮತ್ತು ಲಿಂಗಸಂಬಂಧಗಳು

ಉತ್ಪಾದನೆ ಎಂಬುದು ಒಂದು ಸಮುದಾಯದ ಅಭಿವೃದ್ಧಿಯ ಮೂಲವಾಗಿದೆ. ಉತ್ಪಾದನೆಯನ್ನು ಕೈಗೊಳ್ಳುವ ಸಮುದಾಯಗಳು ಆರ್ಥಿಕವಾಗಿ ಬಲಿಷ್ಟವಾಗಿದ್ದಾಗ ಅಗತ್ಯವಾಗಿ ಒಡೆತನವು ಉಂಟಾಗುತ್ತದೆ. ಇಂತಹ ಸಂದರ್ಭದಲ್ಲಿ ಉತ್ಪಾದನೆ ಮಾಡುವವರು ಶೋಷಕರಾಗಿಯೂ ಉತ್ಪಾದನೆಗೆ ಕಾರಣವಾಗಿ ದುಡಿಯುವ ವರ್ಗ ಶೋಷಿತಕ್ಕೆ ಒಳಗಾಗುತ್ತಾರೆ. ಮನುಷ್ಯ-ಮನುಷ್ಯರ ನಡುವೆ ಸಮುದಾಯ ಸಮುದಾಯಗಳ ನಡುವೆ ಅಂತರ ಹೆಚ್ಚಿದಂತೆಲ್ಲಾ ಗುಲಾಮಗಿರಿತನ, ಒಡೆತನಗಳು ಸೃಷ್ಟಿಯಾದವು, ಇದರಿಂದಾಗಿ ಶ್ರಮಿಕರು ಒಡೆಯರ ಹಿಡತಕ್ಕೆ ಒಳಪಟ್ಟರು, ಆಗ ಉತ್ಪಾದನೆ ಬೇರೆ ಬೇರೆ ರೂಪ ಪಡೆಯುತ್ತಾ ಹೋಯಿತು. ಈ ಪರಿವರ್ತನೆಯಿಂದ ವರ್ಗ ಪ್ರತಿಷ್ಠೆಗಳು, ಲಿಂಗ ಅಸಮಾನತೆಗಳು, ಸಂಘರ್ಷಗಳು ಕಾಣಿಸಿಕೊಳ್ಳತೊಡಗಿದವು.

ಉತ್ಪಾದನೆಯ ಒಡೆತನ ಸಮುದಾಯಗಳನ್ನು ದಾಟಿ ಕುಟುಂಬಗಳನ್ನು ಪ್ರವೇಶಿಸಿತು. ಪುರುಷ ಪ್ರಧಾನ್ಯತೆಯನ್ನು ಹೊಂದಿದ ಕುಟುಂಬಗಳು ಕಾಲಕ್ರಮೇಣ ಉತ್ಪಾದನೆ ಹೆಚ್ಚಿದಂತೆ ಸ್ತ್ರೀಯರ ಒಡೆತನಕ್ಕೆ ಮೇಲ್ವರ್ಗದವರ ಒಡೆತನಕ್ಕೆ ಒಳಗಾಗುತ್ತ ಬಂದಿತು. ಒಡೆತನ ಎಂಬುದು ಕುಟುಂಬಕ್ಕೆ ಮೀಸಲಾಗಿರದೆ ಸಮುದಾಯಗಳ ಮೇಲಿನ ಪಾರಪತ್ಯಕ್ಕೆ ಸಂಘರ್ಷಗಳು ಉಂಟಾಗತೊಡಗಿದವು. ಇಂತಹ ಸಂದರ್ಭದಲ್ಲಿ ಅನೇಕ ನಾಯಕರ ಆಗಮನವಾಗಬೇಕಾಯಿತು. ಸಾಂಸ್ಕೃತಿಕ ನಾಯಕರು ಸಮುದಾಯಗಳ ಮೇಲಿನ ಒಡೆತನ ಪಡೆಯುವುದರ ಮೂಲಕ ತಮ್ಮ ಸಂಸ್ಕೃತಿಯ ವ್ಯಕ್ತಿತ್ವವನ್ನು ಗಟ್ಟಿಗೊಳಿಸುವುದನ್ನು ಕಾಣಬಹುದು.

"ಒಂದು ಸಮುದಾಯದ ಉತ್ಪಾದನಾ ವ್ಯವಸ್ಥೆಗೂ ಅದರ ಆರ್ಥಿಕ ಸ್ಥಿತಿಗತಿಗಳಿಗೂ ನಮ್ಮ ಸಾಂಸ್ಕೃತಿಕ ನಾಯಕರಿಗೂ ಸಂಬಂಧವಿದೆ. ನಮ್ಮ ಸಮುದಾಯದೊಳಗೆ ರಾಜಕೀಯಾರ್ಥಿಕ ಕಾರಣಗಳಿಂದ ಇವರ ಮಹತ್ವ ಇನ್ನು ಹೆಚ್ಚಿದೆ, ಇವರು ತಮ್ಮ ಜೀವನಾವಧಿಯ ಉದ್ದಕ್ಕೂ ನಮ್ಮ ಸಮುದಾಯಗಳ ರಾಜಕೀಯ ಮತ್ತು ಆರ್ಥಿಕ ಸ್ವಾವಲಂಬನೆಗೆ ಹೆಚ್ಚು ಶ್ರಮಿಸುತ್ತಾರೆ."[೧೯] ಸಾಂಸ್ಕೃತಿಕ ನಾಯಕರಾದ ಮಾದೇಶ್ವರ, ಜುಂಜಪ್ಪ, ಮಂಟೇಸ್ವಾಮಿ, ಮೈಲಾರ ಇವರೆಲ್ಲರೂ ತಮ್ಮ ಒಕ್ಕಲುಗಳ ನಿರ್ಮಾಣಕ್ಕಾಗಿ ಉತ್ಪಾದನೆಯ ಮೇಲೆ, ಹಾಗೂ ಆರ್ಥಿಕ ವೃತ್ತಿಗಳ ಮೇಲೆ ಹಿಡಿತ ಹೊಂದಿದ್ದ

ಸಮುದಾಯಗಳನ್ನು, ಕುಟುಂಬಗಳನ್ನು ನಾಶಮಾಡುವ ಹಾಗೂ ಹೊಸ ಸಮಾಜದ ನಿರ್ಮಾಣದ ಕೆಲಸವನ್ನು ಕೈಗೊಳ್ಳುತ್ತಾರೆ.

ಸಾಂಸ್ಕೃತಿಕ ನಾಯಕರು ಉತ್ಪಾದನೆಯ ಮೇಲಿನ ಒಡೆತನ ಮತ್ತು ಒಕ್ಕಲುಗಳ ನಿರ್ಮಾಣಕ್ಕಾಗಿ ತಮ್ಮದೇ ಸಮುದಾಯಗಳೊಂದಿಗೆ ಸಂಘರ್ಷ ಮಾಡುತ್ತಾರೆ ಹಾಗೂ ಶ್ರೀಮಂತ ಮೇಲ್ವರ್ಗದ ಒಡೆಯರೊಂದಿಗೆ ಮುಖಾಮುಖಿಯಾಗಿ ಆರ್ಥಿಕ ಪ್ರಗತಿಯನ್ನು ಸಮನಾಗಿಸುವ ಆಶಯವನ್ನು ಹೊಂದಿದ್ದಾರೆ.

ಮಾದೇಶ್ವರನ ಕಾವ್ಯದಲ್ಲಿ ಬೇವಿನಟ್ಟಿ ಕಾಳಮ್ಮ ಮನೆಯ ಅಧಿಪತ್ಯವನ್ನು ಹೊಂದುವುದರೊಂದಿಗೆ ಉತ್ಪಾದನೆಯ ಮೇಲಿನ ಒಡೆತನವನ್ನು ಸಾಧಿಸಿದ್ದಾಳೆ. ಅವಳಿಗೆ ೪ ಜನ ಗಂಡು ಮಕ್ಕಳು ಸೊಸೆಯಂದಿರು, ಮೊಮ್ಮಕ್ಕಳೊಂದಿಗೆ ದರ್ಪ, ಅಹಂಕಾರ, ಕೃಪಣತೆ, ಕುಟಿಲತೆಗಳನ್ನು ಹೊಂದಿರುವುದು ಕಂಡುಬರುತ್ತದೆ.

**ಕಾಳಮ್ಮನ ಉತ್ಪಾದನೆಯ ಒಡೆತನ ಹೇಗಿತ್ತೆಂದರೆ**

"ಬೇವುನಟ್ಟಿ ಒಳುಗೆ ಕಾಳಮ್ಮ
ಸಿರೀ ಸಂಪತ್ನಲ್ಲಿ ವಾಲಾಡ್ತ ಇದ್ದಾಳೆ
ಆರು ಸಾವ್ರಕೆ ಚುಜ್ಜುಲಟ್ಟಿ ಕಟ್ಸವ್ಳೆ
ಮೂರು ಸಾವ್ರಕೆ ಬೇವುನಟ್ಟಿ ಕಟ್ಸವ್ಳೆ
ಅವಳಟ್ಟಿ ಬಾಕ್ಲಲ್ಲಿ
ಕಾಲ್ತೊಳಿಯಾಕೆ ಪಚ್ಚೆಕಲ್ಲು
ರಾಗಿ.ಬೀಸೋ ಕಲ್ಲೆಲ್ಲ ಚಿನ್ನ ಬೆರಳಿ ಅಪ್ರಂಜಿಕಲ್ಲು
ನಲವತ್ತೆಂಟು ಏರ್ಕಟ್ಟಿ ಆರಂಬ ಮಾಡುಸ್ತಿರುವಳು
ನಲವತೆಂಟು ಜನ ಜೀತ್ಗಾರ್ರ ತಡುದವ್ಳೆ"
ಈವ್ರುಕೆ ಹಿಂಡ್ಡಸ ಬುಡುಸ್ಕೊತಾ ಇದ್ದಾವೆ
ಎಪ್ಪತ್ತೇಳು ಸಾವ್ರ ಕಂಡ್ಗ ಎಳ್ ಬೆಳ್ಕಂಡು ಕಾಳಮ್ಮ
ಬಾಣ್ಗಾರ ಕೆಬ್ಬೆ ಹೋಲುದಲ್ಲಿ
ಬುಗುರ್ ರಾಸ್ಯವನ್ನು ಹಾಕೊಂಡು
ಚಿನ್ನದ ಮೆರ್ಕಡ್ಡಿ ಬೆರಳಿ ಮೆರ್ಕಡಿಯನ್ನು
ಎಳ್ಳುನ ರಾಸ್ಯಕೆ ನೆಟ್ಟವಳೆ ನನಕಂದ"[೨೦]

ಇಷ್ಟೇಲ್ಲಾ ಶ್ರೀಮಂತಿಕೆಯನ್ನು ಹೊಂದಿ, ಉತ್ಪಾದನೆಯ ವ್ಯವಸ್ಥೆಯನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿದ್ದಳು. ಇಲ್ಲಿ ಗಂಡನಾದ ಕೆಂಪೇಗೌಡನು ಅವಳಿಗೆ ತಲೆಬಾಗಿ ನಡೆಯುತ್ತಿದ್ದನು. ಇವಳನ್ನು

ಮಾದೇಶ್ವರ ಒಕ್ಕಲು ಮಾಡಿಕೊಳ್ಳಲು ಬೇವಿನಟ್ಟಿಗೆ ಬರುತ್ತಾನೆ. ಆದರೆ ಕೃಷಿಯ ಕಾಯಕವನ್ನು ದೈವವೆಂದು ನಂಬಿದ್ದ ಸ್ವಾಭಿಮಾನಿ ಕಾಳಮ್ಮ ಸ್ತ್ರೀ ಪ್ರಧಾನ ವ್ಯವಸ್ಥೆಯ ಪ್ರತಿರೂಪದಂತೆ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವಂತೆ ಕಾಣುತ್ತಾಳೆ.

ಮಲೆ ಮಾದೇಶ್ವರ ಕಾವ್ಯದಲ್ಲಿ ಬೇವಿನಟ್ಟಿ ಕಾಳಮ್ಮನ ಸಾಲು ಮಾತೃಸಮಾನತೆಯ ಪ್ರತೀಕವಾಗಿದೆ. ಕಾಳಮ್ಮನ ಗಂಡನಾದ ಕೆಂಪೇಗೌಡ ಮಕ್ಕಳು ಇಲ್ಲಿ ಪ್ರಾಮುಖ್ಯತೆ ಪಡೆಯುವುದಿಲ್ಲ, ಕಾಳಮ್ಮನ ಸೊಸೆಯರದ್ದು ಪಾತ್ರ ಮುಖ್ಯವಾದುದ್ದು. ಹೆಂಗಸರದ್ದೇ ವಹಿವಾಟು, ಗಂಡಸರು ಬೇಟೆ, ಆಹಾರ ಸಂಗ್ರಹಕ್ಕಾಗಿ ಮತ್ತು ಪಶು ಸಂಗೋಪನೆಯಲ್ಲಿ ತೊಡಗಿರುತ್ತಾರೆ. ಹೆಣ್ಣು ಮಕ್ಕಳು, ಮರಿಗಳ ಪಾಲನೆ ಮಾಡಿಕೊಂಡು ತಮ್ಮ ಬಿಡುವಿನ ವೇಳೆಯಲ್ಲಿ ಬಿತ್ತಿ ಬೆಳೆಯುವ ಮೂಲಕ ಕೃಷಿಯಲ್ಲಿ ತೊಡಗಬೇಕಿತ್ತು, ಇದರ ಉಪಯುಕ್ತತೆಯನ್ನು ಅರಿತುಕೊಂಡು ಸ್ತ್ರೀ ತನ್ನ ಆರ್ಥಿಕ ಸಬಲತೆಯನ್ನು ಸಾಧಿಸಿ ಹೆಣ್ಣು ಕುಟುಂಬದ ಪಳೆಯುಳಿಕೆಗೆ ಅಡಿಗಲ್ಲು ಆಗಬಲ್ಲಳು ಎಂಬುದನ್ನು ಬೇವಿನಟ್ಟಿ ಕಾಳಮ್ಮನ ಮೂಲಕ ಹೇಳಬಹುದಾಗಿದೆ.

ಮಂಟೇಸ್ವಾಮಿ ಕಾವ್ಯದಲ್ಲಿ ಬರುವ ಕಬ್ಬಿಣದಿಂದ ವಸ್ತುಗಳನ್ನು ಸಿದ್ಧಪಡಿಸುತ್ತಿದ, ಪಾಂಚಾಳರು ಉತ್ಪಾದನೆಯ ಮೇಲೆ ಒಡೆತನವನ್ನು ಸಾಧಿಸಿದ್ದರು, ಇದರಿಂದಾಗಿಯೇ ಕೆಲ ಸಮುದಾಯಗಳ ಹಾಗೂ ಸಾಂಸ್ಕೃತಿಕ ವೀರರ ನಡುವೆ ಸಂಘರ್ಷಗಳುಂಟಾಗುತ್ತವೆ. ಮಾನವನ ವಿಕಾಸವಾದಂತೆಲ್ಲ ಅನೇಕ ಆಧುನಿಕ ಸಲಕರಣೆಗಳ ಬಳಕೆಯನ್ನು ಕಂಡುಕೊಂಡನು. ಕೃಷಿಯಲ್ಲಿ ಪಶುಪಾಲನೆಯ ಸಂದರ್ಭದಲ್ಲಿ ಅಗತ್ಯವಾದ ಕಬ್ಬಿಣದ ವಸ್ತುಗಳ ಬಳಕೆ ಮಾಡತೊಡಗಿದನು. ನೇಗಿಲು, ಕೊಡಲಿ, ಕುಡುಗೋಲುಗಳ ಉತ್ಪಾದನೆ ಹೆಚ್ಚಾದಂತೆ ಕಬ್ಬಿಣದ ಬಳಕೆಯ ಮೇಲಿನ ಒಡೆತನವೂ ಹೆಚ್ಚಾಯಿತು. ಅದಕ್ಕಾಗಿ ಅನೇಕ ಕುಲುಮೆಗಳು ಕಾರ್ಖಾನೆಗಳು ಹುಟ್ಟಿಕೊಂಡವು ಅವುಗಳ ಮೇಲಿನ ಒಡೆತನವನ್ನು ಕೆಂಪಾಚಾರಿ ಹಾಗೂ ಅವನ ತಾಯಿ ಮುದ್ದಮ್ಮ ಹೊಂದಿದ್ದಳು, ಅವಳ ಶ್ರೀಮತಿಕೆ ಹೇಗಿತ್ತೆಂದರೆ,

"ಹೆರಬಿ ಹೆಣವಾಗಿ
ಮೊರದ ಬಂಗಾರವಾಗಿ
ನೇತ್ರ ನೋಡೂನುಗುಟ
ಜಾಗೀರು ಜಮೀನುಗಂಟಾ
ಸಾಲಟ್ಟಿಧನಗಳೂ
ಸಾಲಟ್ಟಿ ಕುರಿಗಳೂ
ಸಾಲಟ್ಟಿ ಆಡುಗಳೂ
ಸಾಲಟ್ಟಿ ಸರಳೆಮ್ಮಗಳೊಂದಿಗೆ"[೨೧] ಲಕ್ಷ್ಮಿಕರಾಗಿ ಬಾಳಿ ಬದುಕ್ತಿದ್ದಳು. ಇವಳು ತನ್ನ ಇಡೀ ಮನೆಯ ಹಾಗೂ ಆಸ್ತಿಯ ಒಡೆತನವನ್ನು ಹೊಂದಿದ್ದಳು. ಇವಳ ಮಾತಿನಂತೆ ಮನೆ, ಗಂಡ, ಮಕ್ಕಳು

ನಡೆದುಕೊಳ್ಳುತ್ತಿದ್ದರು. ಇವಳ ಒಡೆತನ ಕಿತ್ತುಕೊಳ್ಳಲು ಮಂಟೇಸ್ವಾಮಿ ಕೆಂಪಾಚಾರಿಯನ್ನು ಭಿಕ್ಷೆ ಕೇಳಲು ಬರುತ್ತಾನೆ. ಆದರೆ ಮುದ್ದಮ್ಮ ಮತ್ತು ಬಸವಚಾರಿಗಳು ಶ್ರೀಮತಿಕೆಯಿಂದ ಮೆರೆಯುತ್ತ ದಾನಧರ್ಮವನ್ನು ಮರೆತ್ತಿದ್ದರು ಹಾಗಾಗಿ ಮಂಟೇಸ್ವಾಮಿಗೆ ಬಾಯಿಗೆ ಬಂದಂತೆ ಬಯ್ಯುತ್ತಾಳೆ. ಇವಳ ಮಾತಿನ ಮೂಲಕ ಉತ್ಪಾದನೆಯ ಒಡೆತನ ಹೊಂದಿದ ಮುದ್ದಮ್ಮ ಕೆಳವರ್ಗ ಅಂದರೆ ತನಗಿಂತ ಕೀಳಾದವರನ್ನು ಹೇಗೆ ನಡೆಸಿಕೊಳ್ಳುತ್ತಾಳೆ ಎಂಬುದನ್ನು ಕಾಣಬಹುದು.

ಮಂಟೇಸ್ವಾಮಿಯನ್ನು ಬಯ್ಯುವ ರೀತಿ

"ಲೋ ತಿರ್ಕಂಡು ತಿನ್ನವನೇ

ಬೂದು ಬಡಕ ಕೇಳೋ

ಈ ಭಿಕ್ಷೆ ಮಾಡೋ ಮುಂಡೆ ಮಕ್ಕಳಗೇ

ಹೊತ್ತು ಗೊತ್ತು ಒಂದೂ ಇಲ್ವ

ತಿರ್ಕ್ಕೊತ್ತಿನ್ನ ಪರದೇಶಿಸಿ

ಟೈಮು ಗಳಿಗೆ ಏನು ಇಲ್ಲವ

ಈ ತಿರ್ಕತ್ತಿನ್ನು ಮುಂಡೆ ಮಕ್ಕಳಿಗೆ

ಯಾರು ಬುದ್ದಿ ಕಲ್ಸಲಿಲ್ವ

ಈ ಭಿಕ್ಷೆ ಮಾಡುವ ಸನ್ಯಾಸಿಗೆ

ಇನ್ನೂ ಬುದ್ದಿ ಬರೂಲಿಲ್ಲವ"[೨೨]

ಎನ್ನುವಲ್ಲಿ ಮುದ್ದಮ್ಮ ಶ್ರೀಮತಿಕೆ ಮತ್ತು ಸಾಮಾಜಿಕ ಸ್ಥಾನಮಾನದ ಅಹಂನಿಂದ ತಾನು ಮೇಲ್ವರ್ಗಕ್ಕೆ ಸೇರಿದವಳು ಕೆಳಸಮುದಾಯದವರು ಶೋಷಣೆಗೆ ಒಳಗಾಗುತ್ತಾರೆ ಎಂಬುದನ್ನು ಮುದ್ದಮ್ಮನ ಮಾತಿನಲ್ಲಿ ಅರಿಯಬಹುದು. ಮುದ್ದಮ್ಮ ಸ್ತ್ರೀಯಾಗಿ ಸಹ ಮನೆಯಯಲ್ಲಿ ಆಡು, ಕುರಿ, ಎಮ್ಮೆ, ದನಗಳ ಹಾಲಿನ ಉತ್ಪಾದನೆಯಲ್ಲಿ ಒಡೆತನವನ್ನು ಸಾಧಿಸಿದ್ದಳು. ಇದರ ವಿರುದ್ದವಾಗಿ ಯಾರೊಬ್ಬರು ಮಾತನಾಡುವ ಧೈರ್ಯ ಹೊಂದಿರಲಿಲ್ಲ. ಇಂತಹ ಮುದ್ದಮ್ಮನ ಅಧಿಕಾರವನ್ನು ಕಿತ್ತುಕೊಳ್ಳುವುದರ ಮೂಲಕ ಸ್ತ್ರೀಯರ ಒಡೆತನವನ್ನು, ಅವರ ಪರಂಪರೆಯ ನಾಶಕವಾಗಿ ಮಂಟೇಸ್ವಾಮಿ ಕಂಡುಬರುತ್ತಾನೆ. ಇನ್ನೊಂದೆಡೆ ಕುಲುಮೆಯ ಕಾರ್ಖಾನೆಯ ಮೇಲೆ ಒಡೆತನವನ್ನು ಸಾಧಿಸಿದ್ದ ಮುದ್ದಮ್ಮನ ಮಗ ಕೆಂಪಾಚಾರಿಯನ್ನು ಶಿಶು ಮಗನನ್ನಾಗಿ ಪಡೆಯಲು ಮಂಟೇಸ್ವಾಮಿ ಕಾರ್ಖಾನೆಯ ಬಳಿ ಬರುತ್ತಾನೆ. ಆಗ ಅಹಂಕಾರ ದರ್ಪದಿಂದ ತಳವರ್ಗದವರನ್ನು ಕೀಳಾಗಿ ನಡೆಸಿಕೊಳ್ಳುವ ಕೆಂಪಾಚಾರಿಯ ಮಾತುಗಳು ತುಂಬಾ ಕಠಿಣವಾಗಿರುತ್ತವೆ.

"ಬರುವಂತ ಗುರ್ಗಳು ಮೊಕಾ

ನೋಡ್ಬುಟ್ಬು ಕೆಂಪಣ್ಣ

ಏನ್ರಲ್ಲ ಜೀತ್ತಾಳುಗಳೇ

ಆ ತಿರುಕಾವರ್ಕ ಬೂದ್ಬಡ್ಕ ಬಿಕ್ಸಕ
ನಮ್ ಕುಲುವೆ ಕಛೇರಿಗೆ
ಬತವ್ನೆ ಕಣ್ರೊ
ಆ ಬಿಕ್ಸಕ್ನ ಮಾತ್ರ
ಯಾರು ಕಣ್ಣೆತ್ತಿ ನೋಡಬ್ಯಾಡಿ
ಅವನ ಒಂದಿಗೆ ಯಾರೂ
ಮಾತಾಡಬ್ಯಾಡೀ ಕಣ್ರಲ
ಕಣ್ಣೆತ್ತಿ ನೋಡ್ತವರ
ಒಂದ್ಗೆ ಮಾತಾಡ್ಡವರಾ
ಕುಲುಮೆ ಕಛೇರಿ ಒಳಗೆ
ಖಂಡತ್ವಾಗೀ ಮಾಡ್ಗೋದಿಲ್ಲ
ನಿಮ್ಗೇ ತಿಂಗತಿಂಗಳ
ಸಂಬಳ ಕೂಡ ಕೊಡೋದಿಲ್ಲ
ತಲ್ಬಕ್ಕಂಡು ಕೆಲ್ಸ ಮಾಡ್ರಲ್ಲ
ಅಂತೇಳಿ ಕೆಂಪಣ್ಣ
ಆಳು ಕಾಳ್ಗೆಲ್ಲ ಬಾಳ ಬಾಳ
ಭಯ ಹುಟ್ಸುಬುಟ್ರಂತೇ”[೨೩]

ಈ ರೀತಿಯಾಗಿ ಕೆಂಪಾಚಾರಿ ಕೆಲಸ ಮಾಡುವ ಕೆಲಸಗಾರನ್ನೆಲ್ಲ ಕೀಳಾಗಿ ಕಾಳುತ್ತಾ, ಶ್ರಮ ಸಮುದಾಯಗಳ ಮೇಲೆ ದಬ್ಬಾಳಿಕೆ ನಡೆಸುತ್ತಾನೆ. ದುಡಿಮೆಯಲ್ಲಿ ಹೆಚ್ಚಾದಂತೆ ಮೇಲ್ವರ್ಗದವರ ಉತ್ಪಾದನೆಯ ಕ್ರಿಯೆಯು ಹೆಚ್ಚಾಗುತ್ತದೆ. ಕಬ್ಬಿಣ ಬಂಗಾರ, ಬೆಳ್ಳಿ ಇವುಗಳನ್ನು ಹದ ಮಾಡಿ ಕೈಕಡಗ ಕತ್ತಿಗೆ ಪದಕ, ಕೈಬಳೆ, ಉಂಗುರ, ಡಾಬು, ಅಲ್ಲದೆ ಮಾಂಗಲ್ಯಗಳನ್ನು ತಯಾರಿಸುವವ ನಾವುಗಳು ಮೇಲ್ವರ್ಗಕ್ಕೆ ಸೇರಿದ ಜನ ನಮ್ಮದೇ ಅಸ್ತಿತ್ವ ಈ ಜಗತ್ತಿನಲ್ಲಿ ಇರುವುದು, ನಮ್ಮಿಂದಲೇ ನಡೆಯುವ ಸಮಾಜವು ನಮಗೆ ತಲೆಬಾಗಲೇಬೇಕು ಎಂದು ಕೆಂಪಾಚಾರಿ ಕಬ್ಬಿಣದ ಉಪಯೋಗ ಹಾಗೂ ಜಾತಿಗಳ ಮೇಲು ಕೀಳಿನ ಪ್ರತಿಷ್ಠತೆಯನ್ನು ಕಾಣಬಹುದು, ಕಬ್ಬಿಣದ ಯುಗ ಪ್ರಾರಂಭವಾದ ತಕ್ಷಣ ಕೆಂಪಾಚಾರಿಯು ತಾಂತ್ರಿಕ ಬದಲಾವಣೆಗೆ ಕೃಷಿಯ ಮೂಲಕ ಆಧುನಿಕ ಯುಗಕ್ಕೆ ಮುನ್ನುಡಿಯಾಗುತ್ತಾನೆ. ಆದರೆ ಅದರ ಜೊತೆ ಉತ್ಪಾದನೆಯ ಒಡೆತನವನ್ನು ಆಚಾರ ಅಂದರೆ ಮೇಲ್ವರ್ಗಕ್ಕೆ ಸೇರಿದ್ದು ಎಂಬುದನ್ನು ತಿಳಿಸುತ್ತಾನೆ. ನಂತರ ಮಂಟೇಸ್ವಾಮಿಗಳು ಕೆಂಪಾಚಾರಿಯ ದರ್ಪವನ್ನು ನಾಶಮಾಡಿ, ಮಾಟ, ಮಾಯದ ಮೂಲಕ ಅವನನ್ನು ವಶಮಾಡಿಕೊಳ್ಳುತ್ತಾರೆ. ಕೆಂಪಾಚಾರಿಯನ್ನು ಶಿಶುಮಗನಾಗಿ

ಪಡೆಯುವುದರ ಮೂಲಕ ಮಂಟೇಸ್ವಾಮಿ ಮೇಲ್ವರ್ಗದವರಿಂದ ಆರ್ಥಿಕ ಪ್ರಾಬಲ್ಯವನ್ನು ಅಸಮಾನತೆಯನ್ನು ಹಾಗೂ ಪ್ರಭುತ್ವವನ್ನು ಸಮತಟ್ಟಾಗುವಂತೆ ಮಾಡುತ್ತಾರೆ.

ಕಬ್ಬಿಣದ ಕುಲುಮೆಯಲ್ಲಿ ಉತ್ಪಾದನಾ ಒಡೆತನ ಸಾಧಿಸಿದ ಪಾಂಚಾಳ ದೊರೆಗಳು ಸಹ ಉತ್ಪಾದನೆಯ ವ್ಯವಸ್ಥೆಯಲ್ಲಿ ಬಹುದೊಡ್ಡ ಒಡೆತನವನ್ನು ಹೊಂದಿದ್ದರು. ಇವರ ಒಡೆತನವನ್ನು ಮಟ್ಟಹಾಕಲು ಮಂಟೇಸ್ವಾಮಿ ಅವರ ಕುಲದವನಾದ ಕೆಂಪಾಚಾರಿಯನ್ನು ಸಿದ್ದಪ್ಪಾಜಿಯನ್ನಾಗಿಸಿ ಸಿದ್ದಾಪ್ಪಾಜಿಯ ಮೂಲಕವೇ ಸಂಘರ್ಷ ಮಾಡುವಂತೆ ಮಾಡುತ್ತಾನೆ. "ಪಾಂಚಾಳ ಜನ ವರ್ಗವನ್ನು ತನ್ನ ಪರಿಧಿಗೆ ಸೇರಿಸಿಕೊಳ್ಳುವ ಮೂಲಕ ಕಬ್ಬಿಣ ಉತ್ಪಾದಿಸುವ ವರ್ಗವೊಂದನ್ನು ಒಲಿಸಿಕೊಳ್ಳುವುದು ಮಂಟೇಸ್ವಾಮಿಯ ಅಪೇಕ್ಷೆ ಇದ್ದಂತೆ ಕಾಣತ್ತದೆ ಅವನು ಕೇಳುವ ಕಬ್ಬಿಣದ ಭಿಕ್ಷೆ ತೀರಾ ಸಾಂಕೇತಿಕವಾಗಿದೆ."[೨೩] ಕಬ್ಬಿಣವನ್ನು ಕೇಳಿಸುವ ಮೂಲಕ ಮಂಟೇಸ್ವಾಮಿಗಳು ಪಾಂಚಾಳರನ್ನು ತನ್ನ ಒಕ್ಕಲಿಗೆ ಒಳಪಡಿಸಿಕೊಳ್ಳುವುದೇ ಆಗಿದೆ. ಪಾಂಚಾಳರ ಕಬ್ಬಿಣದ ಉತ್ಪಾದನೆಯಲ್ಲಿ ಹಿಡಿತ ಸಾಧಿಸಿ ವರ್ತಕ ವರ್ಗದಲ್ಲೇ ಆರ್ಥಿಕ ಮತ್ತು ರಾಜಕೀಯ ಪ್ರಾಬಲ್ಯತೆ ಪಡೆದಿದ್ದಾರೆ. ಇಂತಹ ಆರ್ಥಿಕ ಮತ್ತು ರಾಜಕೀಯ ಪ್ರಾಬಲ್ಯತೆ ಹೊಂದಿದ ಮೇಲ್ವರ್ಗದವರನ್ನು ಅವರವರ ಒಳಗೆ ಅವರಿಂದಲೇ ತಿದ್ದುವ ಕಾರ್ಯ ಮಾಡುತ್ತಾರೆ.

ಮಂಟೇಸ್ವಾಮಿಯು ಶೋಷಿತ ವರ್ಗದ ಪರವಾಗಿ ಆರ್ಥಿಕ ಪ್ರಭುತ್ವ ಸಾಧಿಸಿದ ಸಮುದಾಯಗಳನ್ನು ಆಯಾ ಸಮುದಾಯ, ಆಯಾ ವ್ಯಕ್ತಿಗಳನ್ನು ಆಯ್ಕೆ ಮಾಡಿಕೊಂಡು ಅವರಿಂದಲೇ ತಮ್ಮ ಕುಲದ ಶುದ್ಧಿಯನ್ನು ಮಾಡಿಸುತ್ತಾರೆ. ಇಲ್ಲಿ ಪಾಂಚಾಳರ ಆರ್ಥಿಕ ಪ್ರಾಬಲ್ಯವನ್ನು ಸಂಪೂರ್ಣವಾಗಿ ನಾಶ ಮಾಡದೆ ಅವರು ಜನರೊಂದಿಗೆ ಮೇಲ್ವರ್ಗ ಎಂದು ಹೊಂದಿದ್ದ ಭಾವನೆಯನ್ನು ಮಾತ್ರ ಸಿದ್ದಾಪ್ಪಾಜಿಯ ಮೂಲಕ ತೊಡೆದು ಹಾಕುತ್ತಾರೆ, ಪಾಂಚಾಳರ ಆರ್ಥಿಕ ಪರಂಪರೆಯನ್ನು ಪ್ರಶ್ನಿಸುವುದರ ಮೂಲಕ ಎಲ್ಲರೂ ಸಮಾನತೆಯಿಂದ ಬಾಳಬೇಕೆಂಬ ತತ್ವವನ್ನು ಸ್ಥಾಪಿಸುತ್ತಾರೆ. ಕಬ್ಬಿಣದಿಂದ ಮಾಡುವ ಸಲಕರಣೆಗಳು ಪ್ರತಿಯೊಬ್ಬ ಕೃಷಿಕರಿಗು ಸಿಗಬೇಕು. ಈ ಕೆಲಸ ಮಾನವ ಮಾನವರ ನಡುವೆ ಅಸಮಾನತೆಯನ್ನು ಉಂಟು ಮಾಡುವಂತೆ ಆಗಬಾರದು ಎಂಬುದು ಮಂಟೇಸ್ವಾಮಿಯ ಆಶಯವಾಗಿದೆ. "ಜೀ.ಶಂ.ಪರವರು ಹೇಳಿರುವಂತೆ ಏಳು ಜನ ಪಾಂಚಾಳ ಧಣಿಗಳನ್ನು ಶಿಷ್ಯರನ್ನಾಗಿ ಮಾಡಿದ ಸಿದ್ದಾಪ್ಪಾಜಿ, ಮಾರಿಯರ ಕ್ರೂರ ದೃಷ್ಟಿಯಿಂದಾಗಿ ಮಡಿದಿದ್ದ ಏಳುನೂರಾ ಐವತ್ತು ಒಕ್ಕಲನ್ನು ಬದುಕಿಸಿದರು, ಆಗ ಮೈಸೂರಿನಲ್ಲಿ ಇರುವಂಥ ಸುಖಿ ಚಾಮರಾಜ ಒಡೆಯರ ಕೆಲಸ ಬಿಟ್ಟು ನೀಲಿ ಸಿದ್ದಯ್ಯನವರ ಉದ್ಯೋಗ ನೀವು ಹಿಡಿಯಿರಿ ಎಂದು ಏಳು ಜನ ಧಣಿಗಳು ತಮ್ಮ ಒಕ್ಕಲುಗಳಿಗೆ ತಿಳಿಸಿದರು."[೨೪] ಪಾಂಚಾಳರಿಂದ ಮಂಟೇಸ್ವಾಮಿ ಈ ನಿರ್ಧಾರವನ್ನು ಮಾಡಿಸುವುದರ ಮೂಲಕ ಆರ್ಥಿಕ ಶಕ್ತಿಗಳೊಡನೆ ಹೋರಾಡಿ ಸಮುದಾಯಗಳ ನಡುವೆ ಇದ್ದ ರಾಜಪ್ರಭುತ್ವ–ಗುಲಾಮಗಿರಿತನವೆಂಬ ಅಸಮಾನತೆಯನ್ನು ತೆಗೆದುಹಾಕಿ ಸಾಮಾಜಿಕ ಸಂಬಂಧವನ್ನು ನಿರ್ಮಿಸುತ್ತಾರೆ.

ಒಟ್ಟಿನಲ್ಲಿ ಮಂಟೇಸ್ವಾಮಿಯು ಮೇಲ್ವರ್ಗದ ಪ್ರಭುತ್ವಗಳೊಡನೆ ಮುಖಾಮುಖಿಯಾಗಿ ತನ್ನ ಒಕ್ಕಲನ್ನಾಗಿ ಪರಿವರ್ತಿಸಿಕೊಂಡು ಸಮ ಸಮಾಜದ ನಿರ್ಮಾಣವನ್ನು ಪ್ರತಿಪಾದಿಸುತ್ತಾರೆ ತಿರಸ್ಕಾರಕ್ಕೆ ಒಳಗಾದ

ಸಮುದಾಯಗಳನ್ನು ತನ್ನ ವಿಶೇಷ ಪೂಜೆ ಪುರಸ್ಕಾರಗಳಿಗಾಗಿ ನೇಮಕಮಾಡಿಕೊಳ್ಳುವುದರ ಮೂಲಕ ಉತ್ಪಾದನೆಯ ಮೇಲಿನ ಒಡೆತನವನ್ನು ಪಡೆದುಕೊಳ್ಳುತ್ತಾರೆ.

ಮೈಲಾರಲಿಂಗನ ಕಾವ್ಯದಲ್ಲಿ ಮೈಲಾರನು ತಳ ಸಮುದಾಯಕ್ಕೆ ಸೇರಿದವನಾದರೂ ಸಮುದಾಯದ ಅಸ್ತಿತ್ವಕ್ಕಾಗಿ ಆರ್ಥಿಕ ಚಟುವಟಿಕೆಯ ಮೇಲೆ ಒಡೆತನವನ್ನು ಸಾಧಿಸಲು ಪ್ರಯತ್ನಿಸುತ್ತಾನೆ. ಅದಕ್ಕಾಗಿ ಮೈಲಾರನು ವಿವಾಹವೆಂಬ ಅಸ್ತ್ರವನ್ನು ಬಳಸಿ ಸಮಾಜದಲ್ಲಿ ಮೇಲ್ವರ್ಗವನ್ನು ಗುರಿಯಾಗಿಸಿಕೊಂಡು ಅಲ್ಲಿನ ಹೆಣ್ಣುಮಕ್ಕಳನ್ನು ಪ್ರೀತಿಸಿ ಕಾಡಿಸಿ ವಿವಾಹವಾಗುತ್ತಾನೆ.

ಗಂಗಿಮಾಳಮ್ಮ ಉತ್ಪಾದಕ ಮತ್ತು ಸಂಸ್ಕೃತಿಯ ಒಡೆಯನ ಮಗಳಾಗಿರುತ್ತಾಳೆ. ಅವಳನ್ನು ವಿವಾಹವಾಗುವುದರೊಂದಿಗೆ ಮೊದಲಿಗೆ ಆರ್ಥಿಕ ಚಟುವಟಿಕೆಯಲ್ಲಿ ತನ್ನ ಒಡೆತನ ಪಡೆದುಕೊಳ್ಳಲು ಪ್ರಾರಂಭಿಸುತ್ತಾನೆ. ಪ್ರಬಲವಾಗಿ ಆರ್ಥಿಕತೆಯನ್ನು ಬಗ್ಗು ಬಡಿಯುವ ಆಶಯ ಮೈಲಾರಲಿಂಗನದ್ದಾಗಿದೆ. ಹಾಗಾಗಿಯೇ ಶ್ರೀಮಂತನಾದ ವರ್ತಕನ ಮಗಳಾದ ಗಂಗಿಮಾಳಮ್ಮನನ್ನು ವಿವಾಹವಾಗುತ್ತಾನೆ."ಗಂಗಿಮಾಳಮ್ಮನ ವಿವಾಹ ಮಿಗತೆ ಉತ್ಪಾದನೆಯುಳ್ಳ ಮತ್ತು ಮಿಗತೆ ಉತ್ಪಾದನೆ ಇರದ ಸಮುದಾಯಗಳ ನಡುವಣ ಸಂಘರ್ಷವಾಗಿದೆ ಎಂದು ಹೇಳಿದ್ದಾರೆ."[೨೫] ಗಂಗಿಮಾಳಮ್ಮನ ಮೂಲಕ ತನ್ನ ಸಮುದಾಯಗಳ ಆರ್ಥಿಕ ಸಫಲತೆಯನ್ನು ಕಾಪಾಡುವ ಉದ್ದೇಶ ಹೊಂದಿದ್ದಾನೆ. ಆರ್ಥಿಕ ಒಡೆತನ ಪಡೆಯಲು ಮೈಲಾರನು ಗಂಗಿಮಾಳಮ್ಮನಲ್ಲಿಗೆ ನಿಲ್ಲಿಸದೆ ಕುರುಬರ ಸಮುದಾಯವನ್ನು ತನ್ನ ಒಕ್ಕಲನ್ನಾಗಿ ಪಡೆದುಕೊಳ್ಳಲು ಕೋಮಾಲಿಯನ್ನು ವಿವಾಹವಾಗುತ್ತಾನೆ. ಕುರುಬರು, ಮಡಿವಾಳರು ಕೃಷಿ, ಪಶುಪಂಗೋಪನೆಯನ್ನು ಮಾಡುತ್ತ ಆರ್ಥಿಕವಾಗಿ ಉತ್ಪಾದನೆಯಲ್ಲಿ ಸಾಕಷ್ಟು ಒಡೆತನ ಸಾಧಿಸಿದ್ದರೂ ತನ್ನ ಸಮುದಾಯವನ್ನು ಆರ್ಥಿಕ ವರ್ಗಗಳಾಗಿ ನಿರ್ಮಿಸುವ ಸಲುವಾಗಿ ಕೋಮಾಲಿಯನ್ನು ವಿವಾಹವಾಗುತ್ತಾನೆ. ಕೋಮಾಲಿಯ ಕುಟುಂಬದೊಡನೆ ಸಂಘರ್ಷ ಮಾಡಿ ಉತ್ಪಾದನೆಯ ಒಡೆತನ ಪಡೆದುಕೊಳ್ಳುತ್ತಾನೆ.

ಜುಂಜಪ್ಪನ ಕಾವ್ಯದಲ್ಲಿ ಉತ್ಪಾದನೆಯ ಒಡೆತನ ಎಂದು ಹೇಳುವುದಕ್ಕಿಂತ ಪ್ರಭುತ್ವಗಳ ಅಧಿಕಾರ ಹೆಚ್ಚಾಗಿ ಕಂಡುಬರುತ್ತದೆ. ಪಶುಪಾಲಕ ವೃತ್ತಿಯನ್ನು ಜೀವಾಳವಾಗಿಸಿಕೊಂಡ ಗೊಲ್ಲ ಸಮುದಾಯದವರು, ವ್ಯಾಪಾರಿಗಳಾಗಿ ನೂರಾರು ಪಶು ಸಾಕಾಣಿಕೆ ಹಾಗೂ ನೂರಾರು ಎಕರೆ ಹುಲ್ಲುಗಾವಲನ್ನು ಹೊಂದಿ ರಾಜಪ್ರಭುತ್ವ ಸಾಧಿಸಿದ ಸಮುದಾಯ ಕಾಡು ಗೊಲ್ಲರನ್ನು ಹೀನಾಯವಾಗಿ ಕಾಣುತ್ತಿದ್ದ ಸಂದರ್ಭದಲ್ಲಿ ಜುಂಜಪ್ಪ ತನ್ನ ಸಮುದಾಯ ಪರವಾಗಿ ಆರ್ಥಿಕವಾಗಿ ಪ್ರಭಲರಾಗಿದ್ದ ಈ ಪ್ರಭುಗಳ ವಿರುದ್ಧ ಸಂಘರ್ಷ ಮಾಡಿ ಆರ್ಥಿಕವಾದ ಒಡೆತನ ಪಡೆದುಕೊಳ್ಳುತ್ತಾನೆ.

ಸೇಳುರು ದೊರೆಗಳು ಮುತ್ತು ರತ್ನಗಳ ವ್ಯಾಪಾರಿಗಳಾಗಿ ೧೬೮ ಎಕರೆ ಹುಲ್ಲುಗಾವಲು ನೂರಾರು ಜನ ಕುರಿಗಾರರು, ಪಶುಗಳನ್ನು ಹೊಂದಿದ್ದರು. ಒಮ್ಮೆ ಜುಂಜಪ್ಪನ ಹಸುಗಳಿಗೆ ಹುಲ್ಲು ನೀರಿನ ಬರಗಾಲ ಬಂದಾಗ ಸಹೋದರರೊಂದಿಗೆ ಹುಲ್ಲುಗಾವಲನ್ನು ಹುಡುಕುತ್ತಾ ಹೊರಡುತ್ತಾರೆ. ಆಗ

ಕಂಡದ್ದೆ ಸೇಳೂರು ದೊರೆಗಳ ಶ್ರೀಮಂತಿಕೆ, ವಿಸ್ತರವಾದ ಹುಲ್ಲುಗಾವಲು, ಆಗ ಜುಂಜಪ್ಪ ಅದೇ ಹುಲ್ಲುಗಾವಲಿನಲ್ಲಿ ತನ್ನ ಪಶುಗಳನ್ನು ಮೇಯಿಸುತ್ತಿರುವಾಗ ಕಾವಲುಗಾರರು, ಸೇಳೂರು ದೊರೆಗಳೊಂದಿಗೆ ಸಂಘರ್ಷ ನಡೆಸಿ ದೊರೆಗಳು ಶರಣಾಗುವಂತೆ ಮಾಡುತ್ತಾನೆ. ಅದರೆ ಕುತಂತ್ರದಿಂದ ಬಡಮೈಲ ಹಸುವನ್ನು ಕೊಲ್ಲಲು ಮುಂದಾದಾಗ ಜುಂಜಪ್ಪನು

"ನೋಡಯ್ಯ
ನೀನು ಅಟ್ಯೆಸ್ವರವಂತನಾಗಿರಬಹುದು
ವಜ್ರ ವೈಡೂರ್ಯ ಸಂಪಾದನೆ ಮಾಡಿರಬಹುದು
ಬಸುವನ ಪೂಜೆ ಮಾಡೋ ಯೋಗ್ಯತೆ ನಿನಗಿಲ್ಲ ಕಣಯ್ಯ"[೨೬]

ಎಂದು ದುಡಿಯುವ ಸಮುದಾಯಗಳು ಆಳುವವರ ವಶಕ್ಕೆ ಹೋಗಲಾರವು. ಸ್ವಾಭಿಮಾನ ಆತ್ಮವಿಶ್ವಾಸವನ್ನು ಶ್ರಮಿಕ ವರ್ಗದವರು ಬಿಟ್ಟುಕೊಡುವುದಿಲ್ಲ ಎಂದು ದೊರೆಗಳೊಂದಿಗೆ ಕವಡೆ ಆಟದಲ್ಲಿ ಗೆಲ್ಲುತ್ತಾನೆ. ಇದರಿಂದಾಗಿ ಸೇಳೂರು ರಾಜ್ಯ ಜುಂಜಪ್ಪನ ವಶವಾದಾಗ

"ಬಿಚ್ಚರೋ ನಿಮ್ಮ
ಜೋತ್ರ ಪಂಚೆಗಳು
ತಗ್ದು ಹಾಕಿರಲೇ
ಕೋಟು ರುಮಾಲುಗಳ
ಇಕ್ಕಳಿರೋ ಪುಟಗೋಸಿಗಳ
ತಗಳಿರೋ ಸಲಿಕೆ ಗುದ್ಲಿ
ನಡಿರಲೇ ಸೇಳೂರು ಕೆರೆ
ಕಟ್ಟನು ಎಂದನು ಜುಂಜಪ್ಪ ಶಿವ್ನಿಗೋ"[೨೭]

ಈ ಆದೇಶವನ್ನು ಜುಂಜಪ್ಪ ಉತ್ಪಾದನಾ ಒಡೆತನವನ್ನು ಪಡೆದು ಅರಸುಗಳ ವಿರುದ್ಧ ಶ್ರಮದಿಂದ ದುಡಿಯುವ ಸಮುದಾಯದ ಪರವಾಗಿ ಮಾಡುತ್ತಾನೆ. ಸೇಳೂರ ಅರಸರ ಅಧಿಕಾರವನ್ನು ಕಿತ್ತುಕೊಳ್ಳುವುದರ ಮೂಲಕ ರಾಜ ಪ್ರಭುತ್ವದ ನಾಶವನ್ನು ಮಾಡುತ್ತಾನೆ.

ಸೇಳೂರ ದೊರೆಗಳಂತೆ ಆರ್ಥಿಕ ಪ್ರಾಬಲ್ಯತೆ ಸಾಧಿಸಿದ ಶ್ರೀಮಂತ ಸಾಣಿಕೆರೆ ಪುಟ್ಟಣ್ಣ ಮುತ್ತು ರತ್ನ ವ್ಯಾಪಾರ ಮಾಡುತ್ತಿದ್ದನು. ಜೊತೆಗೆ ಮಾಟ, ಮಂತ್ರ ಮಾಡುತ್ತಿದ್ದನು. ಹಸುಗಳಿಗಾಗಿ ನೂರಾರು ಎಕರೆಗಳ ಹುಲ್ಲುಗಾವಲನ್ನು ಹೊಂದಿದ್ದನು. ಜುಂಜಪ್ಪನು ಪುಟ್ಟಣ್ಣನ ದುರಂಹಕಾರವನ್ನು ಕಳೆಯುತ್ತಾನೆ.

"ಸುತ್ತ ಹದಿನಾರಳ್ಳಿ ಒಳಗಿರ‍್ತಕ್ಕಂತ ಗಂಡುಸ್ರುನ್ನೆಲ್ಲ
ಮಾಟ ಶೂನ್ಯ ಮಾಡಿ ಸಾಯ್ಬುಡುದು
ಅವರೆಂಡ್ತಿರ‍್ನೆಲ್ಲ ತಂದು ಇಟ್ಕಂಡಿದೀಯ"[೨೮]

ಎಂದು ಪುಟ್ಟಣ್ಣನ ಅರಾಜಕತೆಯನ್ನು ಮಟ್ಟಹಾಕುತ್ತಾನೆ. ಇಲ್ಲಿ ತನ್ನ ಪಶುಪಾಲನೆಗೆ ಅಡ್ಡವಾಗಿದ್ದ ಇಬ್ಬರು ಆರ್ಥಿಕ ಪ್ರಭುತ್ವ ಹೊಂದಿದ ಶ್ರೀಮಂತರನ್ನು ಅಡಗಿಸಿ ತಮ್ಮ ಸಮುದಾಯದ ಅಸ್ತಿತ್ವವನ್ನು ಉಳಿಸುತ್ತಾನೆ.

ಒಟ್ಟಿನಲ್ಲಿ ಜುಂಜಪ್ಪ ತನ್ನ ಸಮುದಾಯದ ಪರವಾಗಿ ಅನೇಕ ಪಾಳೆಗಾರನ್ನು ಸೋಲಿಸಿ ಆರ್ಥಿಕತೆಯ ಅಸ್ತಿತ್ವ ಸಾಧಿಸುತ್ತಾನೆ. ಇವರನ್ನೆಲ್ಲ ಸೋಲಿಸುವುದೇ ಜುಂಜಪ್ಪ ಒಕ್ಕಲು ಮಾಡಿಕೊಂಡತೆ. ಜುಂಜಪ್ಪನು ಅನೇಕ ಶ್ರೀಮಂತರ ಜೊತೆ ಹೋರಾಡುವುದರೊಂದಿಗೆ ಆರ್ಥಿಕ ಪ್ರಾಬಲ್ಯಕ್ಕಾಗಿ ಸಾವಿನ ಜೊತೆ ಸಂಘರ್ಷ ಮಾಡುತ್ತಾನೆ. ಇವತ್ತಿಗೂ ಸಹ ಅವರೆಲ್ಲರ ಜೊತೆ ಗೆದ್ದಿದ್ದರೂ ಸಹ ಕಾಡುಗೊಲ್ಲರು ಪಶುಪಾಲನ ವೃತ್ತಿಯನ್ನು ಮುಂದುವರೆಸಿರುವುದನ್ನು ಕಾಣಬಹುದು.

ಜುಂಜಪ್ಪನ ಕಾವ್ಯದಲ್ಲಿ ಬರುವ ದೊಡ್ಡಕ್ಕಜ್ಜಿ, ಜುಂಜಪ್ಪನ ದೊಡ್ಡಜ್ಜಿ ಅವರೆ ಕಾಯಿಯನ್ನು ಬೆಳೆಯುತ್ತಿರುವ ಇವಳು ಇಲ್ಲಿ ಕೃಷಿ ಪರಂಪರೆಗೆ ಸೇರಿದವಳಾಗಿದ್ದಾಳೆ. ತನ್ನ ಕುಟುಂಬದ ನಿರ್ವಹಣೆ ಮತ್ತು ಉತ್ಪಾದನಾ ಮಾರ್ಗವಾಗಿ ದೊಡ್ಡಕ್ಕಜ್ಜಿಯು ಅವರೆ ಕಾಯಿಯನ್ನು ಬೆಳೆಯುವ ಕಸುಬು ಹೊಂದಿರುತ್ತಾಳೆ. ಇಡೀ ದೊಡ್ಡಕ್ಕಜ್ಜಿಯ ಸಾಲಿನಲ್ಲಿ ದೊಡ್ಡಕ್ಕಜ್ಜಿ ತನ್ನ ಉತ್ಪಾದನಾ ಕಸುಬಾದ ಅವರೆಕಾಳನ್ನು ಜುಂಜಪ್ಪನಿಗೆ ನೀಡದೆ ಕೊನೆಯವರೆಗೂ ಪ್ರತಿಭಟಿಸಿಯೇ ಸಾಯುತ್ತಾಳೆ.

ಜುಂಜಪ್ಪನಿಗೆ ಅವರೆ ನೀಡುವುದನ್ನು ದೊಡ್ಡಜ್ಜಿ ನಿರಾಕರಿಸುವ ಸಂದರ್ಭವು ಅದೂ ಸಮುದಾಯಗಳಿಗೆ ಆಯಾ ದೇವರು ನೀಡಿದ ಉತ್ಪದನಾ ಕಾರ್ಯವಾಗಿದ್ದು, ಅದನ್ನು ಯಾರು ಕೇಳಿದರೂ ಕೊಡುವುದಿಲ್ಲವೆಂಬ ದೊಡ್ಡಕ್ಕಜ್ಜಿಯ ನಿಲುವು ಹಠಮಾರಿ ಮತ್ತು ದರ್ಪದಿಂದ ಕೂಡಿದೆ. ಉತ್ಪಾದನೆಯ ಮೇಲಿನ ಒಡೆತನ ಅವಳಲ್ಲಿರುವುದು ಕಂಡುಬರುತ್ತದೆ. ಮೌಖಿಕ ಕಾವ್ಯಗಳಲ್ಲಿ ಹೆಣ್ಣು ದಿಟ್ಟೆಯಾಗಿದ್ದು ಯಾವುದಕ್ಕೂ ಜಗ್ಗುವುದಿಲ್ಲ. ತನ್ನ ಒಡೆತನ ಬಿಟ್ಟುಕೊಡುವುದಿಲ್ಲ ಎಂಬುದಕ್ಕೆ ಕಾಳಮ್ಮನಂತೆ ದೊಡ್ಡಕ್ಕಜ್ಜಿಯು ಸಾಕ್ಷಿಯಾಗಿದ್ದಾಳೆ.

"ಜಾನುಕಲ್ಲೋರು ದೊಡ್ಡಕ್ಕಜ್ಜಿ
ಏಳಾಳುದ್ದ ಮಂಚಿಗೆ ಹಾಕ್ಯಂಡು
ನಿಲುವುಗನ್ನಡಿ ನೋಡಿಕೊಂಡು
ಉತ್ರಾಣಿ ಕಡ್ಡಿನಾ ಹಲ್ಲಾಗು ಚುಚ್ಚಿಕೊಂಡು
ಅವುರೆ ಹೊಲವನ್ನು
ಕಾಯದಿಕೆ ನಿಂತವುಳೊ"[೨೯]

ಉತ್ಪಾದನೆಯ ಮೇಲಿನ ಒಡೆತನ ಕಾವ್ಯದಲ್ಲಿ ದೊಡ್ಡಕ್ಕಜ್ಜಿಯ ಮೂಲಕ ಕಟ್ಟಿಕೊಡಲಾಗಿದೆ. ಅವರೆಕಾಳು ಕೇಳಲು ಬರುವ ಜುಂಜಪ್ಪನಿಗೆ ದೊಡ್ಡಕ್ಕಜ್ಜಿ ಬೆತ್ತದ ಏಟು ಕೊಟ್ಟು ನಿರಾಕರಿಸುವ ರೀತಿ ಅವಳ

ದಿಟ್ಟತನವನ್ನು ಮತ್ತು ಉತ್ಪಾದನೆಯ ಮೇಲಿನ ಒಡೆತನವನ್ನು ಬಿಟ್ಟುಕೊಡಲೊಪ್ಪದೆ ತನ್ನ ಅಂತ್ಯ ಕಾಣುವುದನ್ನು ಈ ಕಾವ್ಯದಲ್ಲಿ ಕಾಣಬಹುದು.

ಮೌಖಿಕ ಕಾವ್ಯಗಳು ವಿವಿಧ ರೀತಿಯ ಉತ್ಪನ್ನಗಳನ್ನು ಒಳಗೊಂಡ ಸಮುದಾಯಗಳನ್ನು ಬೆಳಕಿಗೆ ತರಲು ಅವಕಾಶವಾಯಿತು. ಹಾಗೂ ಒಂದು ವ್ಯವಸ್ಥೆ ಹೀಗೂ ನಡೆದಿರಬಹುದು, ಅಧಿಕಾರದ ವ್ಯಾಮೋಹ, ಸ್ತ್ರೀ–ಪುರುಷ ಇಬ್ಬರಲ್ಲೂ ಇರುತ್ತದೆ. ಆ ವ್ಯವಸ್ಥೆಯನ್ನು ಮೀರಿ ಬದುಕಬೇಕೆಂಬ ಆಶಯವನ್ನು ಕಾವ್ಯಗಳಲ್ಲಿನ ಪಾತ್ರಗಳು ಹೊಂದಿರುತ್ತವೆ. ಅಂತಹುಗಳನ್ನು ನಾಯಕರು ರಾಜಕೀಯ ಮತ್ತು ಆರ್ಥಿಕ ಪರಿವರ್ತನೆಯನ್ನು ಮಾಡುವುದರ ಜೊತೆಗೆ ಸಮಾಜಕ್ಕೆ ಹೊಂದಿಕೊಂಡು ಬದುಕಬೇಕೆಂಬುದನ್ನು ತಿಳಿಸುತ್ತಾರೆ. ಅದನ್ನು ತಿಳಿಸುವ ರೀತಿ ಮಾತ್ರ ಬೇರೆ ಬೇರೆ ರೂಪದಲ್ಲಿ ಅಭಿವ್ಯಕ್ತವಾಗಿರುವುದನ್ನು ಕಾಣಬಹುದು.

**೪.೩ ಸಾಮುದಾಯಿಕ ಉತ್ಪಾದನೆ ಮತ್ತು ಮಹಿಳಾ ಪ್ರತಿನಿಧಿಕರಣ**

ಒಂದು ಕಾಲದಲ್ಲಿ ಆಹಾರ ಅರೆಸುತ್ತಾ ಅಲೆಯುತ್ತಿದ್ದ ಮನುಷ್ಯ ಆಹಾರ ಸಂಗ್ರಹಣೆಗಾಗಿ ಒಂದು ಗುಂಪಾಗಿ ಗಂಡು ಹೆಣ್ಣುಗಳು ಒಟ್ಟಿಗೆ ವಾಸಿಸುವ ಮೂಲಕ ಅಸ್ತಿತ್ವವನ್ನು ಕಂಡುಕೊಳ್ಳ ತೊಡಗಿದರು. ಆಗ ಅವರಲ್ಲಿ ಗಂಡು ಮೇಲು, ಹೆಂಡತಿ ಕೀಳು ಎಂಬ ಕಲ್ಪನೆ ಇರದೆ, ಎಲ್ಲರೂ ಸಮಾನವಾಗಿ ಜೀವನ ನಡೆಸುತ್ತಿದ್ದರು. ಮಕ್ಕಳನ್ನು ಹಡೆಯಬಲ್ಲ ಶಕ್ತಿ ತಾಯಿಗೆ ಇದ್ದುದರಿಂದ ಇಲ್ಲಿ ತಾಯಿ ಮುಖ್ಯವಾಗುತ್ತಾಳೆ, ತಾಯಿ ಸತ್ಯವಾಗುತ್ತಾಳೆ. ಹಾಗಾಗಿಯೇ ಸ್ತ್ರೀಗೆ ಮಾತೃಪ್ರಧಾನ ಕುಟುಂಬದಲ್ಲಿ ಗೌರವ ಸ್ಥಾನಗಳು ಲಭಿಸಿದೆ. ಸ್ತ್ರೀಯು ಆಹಾರ ಸಂರಕ್ಷಿಸುವುದು, ಹೆತ್ತಮಕ್ಕಳನ್ನು ಪೋಷಿಸುವುದು ಮುಂತಾದ ಸಮೂಹ ಜವಾಬ್ದಾರಿಗಳನ್ನು ನಿರ್ವಹಿಸುತ್ತಿದ್ದಳು. ಉತ್ಪಾದನ ಕಾರ್ಯವಾಗಿ ಪಶು ಸಂಗೋಪನೆಯನ್ನು ಕೈಗೊಂಡಾಗ ಪುರುಷ ಪ್ರಧಾನ್ಯತೆ ಹೆಚ್ಚಾಯಿತು. ಇದರಿಂದ ಕೆಲ ಪುರುಷ ದೈವಗಳ ಸೃಷ್ಟಿಯು ಆಯಿತು. ಪುರುಷ ಹೊರಗೆ ಹೋದಾಗ ಮಕ್ಕಳ ಲಾಲನೆ, ಪಾಲನೆ, ಪೋಷಣೆ ಮಾಡುತ್ತಾ ಕೃಷಿ ಅನ್ವೇಷಣೆಯಲ್ಲಿ ಸ್ತ್ರಿ ತೊಡಗಿಕೊಂಡಳು, ಕೃಷಿಯು ಅವಳ ಮೂಲಕ ಮುಂದುವರೆದು ಮಾತೃ ಪ್ರಧಾನವಾದ ಸಮೂಹ ಸಮಾಜ ಬೆಳೆಯಿತು.

"ಮಹಿಳೆ ಕುಟುಂಬದ ಯಜಮಾನಿಯಾಗಿ, ಸಂಸಾರದ ನಿರ್ವಹಣೆಯನ್ನು ಸುಗಮವಾಗಿ ನಡೆಸಿಕೊಂಡು ಹೋಗುತ್ತಿದ್ದಳು. ಇಂದು ಅನೇಕ ಬುಡುಕಟ್ಟು ಸಮಾಜಗಳಲ್ಲಿ ಮಾತೃ ಪ್ರಧಾನ ವ್ಯವಸ್ಥೆಯು ಸ್ತ್ರಿ ಯಜಮಾನಿಕೆಯ ವಾಸನೆ ಇರುವುದು ಕಂಡು ಬರುತ್ತದೆ"[೩೦] ಭಾರತೀಯ ಸಮಾಜವು ವಿಭಜನೆಗೊಂಡು ಮಾತೃಪ್ರಧಾನವಾದ ಮೌಲ್ಯಗಳು ಆಚರಣೆಗಳು ನಶಿಸುವ ಸಂದರ್ಭದಲ್ಲಿ ಲಿಂಗ ಸಂಬಂಧ ಅಸಮಾನತೆಗಳು ಹೊಸ ಹೊಸ ರೂಪ ತಾಳಿದವು. ಉತ್ಪಾದನೆಗೆ ಸಂಬಂಧಿಸಿದಂತೆ ಕುಟುಂಬದ ಒಳಗೆ ಮತ್ತು ಕುಟುಂಬದ ಹೊರಗೆ ಮಹಿಳೆಯ ಸ್ಥಾನ ಕ್ಷಿಣಿಸುತ್ತಾ ಹೋಯಿತು. ಕೃಷಿಯನ್ನು ಪ್ರಾರಂಭಿಸಿದ ಮಹಿಳೆಯನ್ನು ಪುರುಷ ಪ್ರಧಾನ ಸಮಾಜ ಅವಳನ್ನು ಗೃಹಬಂಧಿಮಾಡಿ ಕೇವಲ ಮಕ್ಕಳನ್ನು ಹೇರುವ ಯಂತ್ರವಾಗಿ ಪರಿವರ್ತಿಸಿತು.

ಮೌಖಿಕ ಕಾವ್ಯಗಳಲ್ಲಿ ಉತ್ಪಾದನೆ ಎಂಬುದು ಅಲ್ಲಿನ ನಾಯಕ-ನಾಯಕಿಯರ ಮತ್ತೊಂದು ಅವಿಭಾಜ್ಯ ಅಂಗವಾಗಿದೆ, ಆದಿಮಾನವ ಕಾಲದಿಂದಲೂ ಪಶುಸಂಗೋಪನೆ ಬೆಳೆಯುತ್ತಲೆ ಬಂದಿದೆ, ಅದನ್ನು ಅವಲಂಬಿಸಿರುವವರ ಸಂಖ್ಯೆಯೂ ಅಧಿಕವಾಗಿದೆ. ಪಶುಸಂಗೋಪನೆಯು ಒಂದು ರೀತಿಯ ಕೃಷಿ ಆಧಾರಿತ ದುಡಿಮೆಯಾಗಿದೆ. ಹಳ್ಳಿ ಜನರು ತಮ್ಮ ದನ, ಕುರಿಗಳನ್ನು ಮೇಯಿಸುತ್ತಾ ಗುಡ್ಡಗಾಡು ಪ್ರದೇಶಗಳಲ್ಲಿ ಹುಲ್ಲುಗಾವಲನ್ನು ಹುಡುಕುತ್ತಾ ಅವುಗಳನ್ನು ಬೆಳೆಸಿ ಅದರಿಂದ ಬಂದ ಉತ್ಪನ್ನಗಳನ್ನು ಮಾರಾಟ ಮಾಡುವುದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿರುತ್ತಾರೆ.

ಎಲ್ಲಿ ಹುಲ್ಲು ನೀರು ಐತೋ ಅದೇ ನಮ್ಮ ಮನೆ ಊರು ಎಂಬ ತೀ.ನಂ. ಶಂಕರ ನಾರಾಯಣರವರ ಮಾತು ಗೊಲ್ಲ ಸಮುದಾಯದ ಜನವರ್ಗಗಳು ಪಶುಸಂಗೋಪನೆಯನ್ನು ಅವಲಂಬಿಸಿರುವುದನ್ನು ಕಾಣಬಹುದಾಗಿದೆ. ಆದ್ದರಿಂದಲೇ ಎಲ್ಲ ಕಾವ್ಯಗಳಲ್ಲೂ ಪಶುಸಂಗೋಪನೆ, ಮತ್ತು ಕೃಷಿಯನ್ನು ಅವಲಂಬಿಸಿರುವ ಜನರ ಸ್ಥಿತಿಗತಿಗಳಿವೆ. ಒಂದೊಂದು ಕಾವ್ಯವೂ ಒಂದೊಂದು ಸಾಕುಪ್ರಾಣಿಗಳನ್ನು ಅವಲಂಬಿಸಿರುವ ಕತೆಯ ನಿರೂಪಣೆ ಒಳಗೊಂಡಿದೆ.

ಮಲೆಮಹದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಮಾಳಿಂಗರಾಯನ ಕಾವ್ಯಗಳಲ್ಲಿ ಜನಸಾಮಾನ್ಯರ ಉತ್ಪದನಾ ಕಾರ್ಯವಾಗಿ ದನ, ಕುರಿ ಸಾಕಾಣಿಕೆ, ಪಶುಸಂಗೋಪನೆ ಇವರಲ್ಲಿ ಜೀವಂತವಾಗಿ ಅಂತರ್ಗತವಾಗಿರುವುದನ್ನು ಕಾಣಬಹುದಾಗಿದೆ. "ಈ ಕಾವ್ಯಗಳಲ್ಲಿ ದನ, ಕುರಿಗಳ ಸಾಕಾಣಿಕೆ, ಪಶುಸಂಗೋಪನೆ ಬೆಳೆವಣಿಗೆ ಅವುಗಳ ನಾಶ, ಹುಲ್ಲುಗಾವಲುಗಳ ಹುಡುಕಾಟ, ನೀರಿನ ಹುಡುಕಾಟ, ದನಕುರಿಗಳ ಮುಖಾಂತರ ದುಷ್ಟರನ್ನು ನಾಶಮಾಡುವುದು, ದನಕುರಿ ಪ್ರಾಣಿಗಳನ್ನು ಮತ್ತೆ ಬದುಕಿಸುವುದು ಮೊದಲಾದ ಅಂಶಗಳು ಪ್ರಧಾನವಾಗಿ ಕಂಡುಬದಿದೆ."[೩೧] ಈ ಮೂಲಕ ತಮ್ಮ ತಮ್ಮ ಸಮುದಾಯಗಳ ಉತ್ಪದನೆ ಹೆಚ್ಚಿಸುವಲ್ಲಿ ನಾಯಕರ ಪಾತ್ರ ಪ್ರಮುಖವಾಗಿದೆ. ಇಲ್ಲಿ ಕೆಲವು ಮಹಿಳೆಯರು ಸಹ ಸಮುದಾಯಗಳ ಉತ್ಪಾದನೆಯಲ್ಲಿ ತೊಡಗಿ ನಾಯಕರಿಗೆ ಸಹಾಯಕರಾಗಿದ್ದನ್ನು ಕಾಣಬಹುದಾಗಿದೆ. ಸಮುದಾಯಗಳ ಬೆಳವಣಿಗೆಯಲ್ಲಿ ಪ್ರತಿಯೊಬ್ಬರು ಶ್ರಮಿಸುತ್ತಾ ಬಂದಿರುವುದನ್ನು ಕಾಣುತ್ತೇವೆ.

ಮಲೆ ಮಾದೇಶ್ವರ ಕಾವ್ಯದಲ್ಲಿ ಕುಲದ ಪದ್ಧತಿಯಂತೆ ಒಂಬತ್ತು ತಿಂಗಳುಗಳ ಕಾಲ ಆಹಾರ ಸಂಗ್ರಹಣೆಗಾಗಿ ಕಾಡಿಗೆ ಹೋಗುತ್ತಾರೆ. ಇದು ಅವರ ಸಮುದಾಯಿಕವಾಗಿ ಎಲ್ಲರೂ ಉತ್ಪಾದನೆಯಲ್ಲಿ ತೊಡಗುವುದನ್ನು ಕಾಣಬಹುದು.

"ಕುಲದಲ್ಲಿ ಹರಹರಾ ಕುಲುಭಕ್ತರೆಲ್ಲ ಸೇರ್‍ಕೊಂಡು
ತಮ್ಮ ಜಾತಿ ಕುಸುಬನ ರೀತೀಲಿ
ವರ್ಷಕ್ಕೊಂದಾವರ್ತಿ ಬ್ಯಾಟೆನ್ನಾಡಕ್ಕೋಗ್ಬೇಕು
ನಮ್ಮ ಜಾತ್ರೆ ಬಂದ್ಬುಡ್ತಲ್ರಪ್ಪ

ನಮ್ಮ ಜಾತ್ರೆಗೆ ಬಿದರಕ್ಕಿ ಆಗ್ಬೇಕು ಬೆಲ್ಲೆಣ್ಣಾಗ್ಬೇಕು
ಕಜ್ಜೂರದಣ್ಣು ಕಟ್ಟೇನೀರು ಮದರಂಗನ ಬಾಳಣ್ಣಾಗ್ಬೇಕು
ಹೆಜ್ಜೇನು ತುಪ್ಪ ಕಾಡುಜೇನು ತುಪ್ಪ ಇಷ್ಟೆಲ್ಲ ಆಗ್ಬೇಕು"[೩೧]

ಹೀಗೆ ಇಡೀ ಸಮುದಾಯ ಒಟ್ಟಿಗೆ ಕಾಡಿಗೆ ಹೋಗುವುದರೊಂದಿಗೆ ತಿಂಗಳಿಗೆ ಬೇಕಾಗುವಷ್ಟು ಆಹಾರ ಸಂಗ್ರಹಣೆ ಮಾಡುತ್ತಾರೆ. ಹಾಗೂ ಎಲ್ಲರೂ ಒಟ್ಟಿಗೆ ಹೋಗುವುದರೊಂದಿಗೆ ಜೀವದ ರಕ್ಷಣೆಯು ಮಾಡಲು ಸಹಾಯವಾಗಿದೆ. ಬೇಟೆ ಮತ್ತು ಆಹಾರ ಸಂಗ್ರಹಣೆ ಬಗ್ಗೆ ಮುಂದಿನ ತಲಮಾರಿಗೆ ಕಲಿಸಿಕೊಡುವುದು ಆಗಿದೆ.

ಜುಂಜಪ್ಪನ ಕಾವ್ಯದಲ್ಲಿ ಪಶುಪಾಲನೆ ಮೂರು ತಲೆಮಾರುಗಳವರೆಗೆ ಪಶುಸಂಗೋಪನೆಯನ್ನು ಅನುಸರಿಸಿಕೊಂಡು ಬಂದಿದೆ. ದೇವರ ದಯಾಮಾರ, ಕೆಂಗುರು ಮಲ್ಲೇಗೌಡ, ಮತ್ತು ಜುಂಜಪ್ಪ ಎಂಬ ೩ ತಲೆ ಮಾರಿನವರು ಪಶುಗಳನ್ನು ಸಾಕಾಣೆ ಮಾಡುತ್ತಾರೆ. ತಾವರೆಕೆರೆ ಹತ್ತಿರವಿರುವ ಕಳುವರಳ್ಳಿಯ ಹೊನ್ನಾಟಾಲೆಗೌಡರು ಸಾಕು ಮಗನಾದ ಕೆಂಗರು ಮಲ್ಲೇಗೌಡನು ತನ್ನ ತಂದೆಯಂತೆ ದನಗಳನ್ನು ಬೆಳೆಸುತ್ತಿರುತ್ತಾನೆ. ಸಾಕು ತಂದೆಯ ಸಾಲವನ್ನು ತೀರಿಸಲು ಕಲ್ಯಾಣಿಯಲ್ಲಿದ್ದ ಹಸುಗಳನ್ನು ಹೀಗೆ ಪಿಳಂಗೋವಿಯಿಂದ ಕರೆಯುತ್ತಾರೆ.

"ಪಿಳ್ಳೆಗೋವಿ ಹಿಡಿತಾನಣ್ಣ ಗಳಿಗಾಗೋ
ಜುಂಜಪ್ನೋನು ಆಗಲೆ
ಗುಡ್ಡ ಹಾಲರತಿ ಕಟ್ಟಿಮೇಲೆ
ಕುಂತ್ತು ಗಂಡು ಶಂಕರನೆ
ಕಳುವರಳ್ಳಿ ಹತ್ರ
ಆಲರತಿ ಕಟ್ಟೆ ಏರಿ ಮೇಲೆ ಕುಂತಗಂಡು
ಪಿಳ್‌ಗೋಣ್ ಹಿಡಿತ್ತಾನೇ
ಕೆಂಗರು ಮಲ್ಲೇಗೌಡ
ಗಂಗೇ ಗೌರಿ
ತುಂಗೆ, ಭದ್ರಿ
ಅಮ್ಮಾಗೊಲ್ಲ ಕರೆದ
ದನಿಯನ್ನೂ ಕೇಳಿ
ಎಲ್ಲಾ ಗೋವುಗಳೇ
ಬನ್ನಿರಮ್ಮ

ಅಂದಾನು

ಜುಂಜಪ್ಪನಪ್ಪ ಗಳಿಗಾಗೋ"[೩೨]

ಎಂದು ಕರೆದ ತಕ್ಷಣ ಗೋವುಗಳೆಲ್ಲ ಬರುತ್ತವೆ. ಕೆಂಗರು ಮಲ್ಲೇಗೌಡ ಅವುಗಳನ್ನು ಸಾಕಲು ಕಳುವರಳ್ಳಿ ದಿನ್ನೆಯೊಳಗೆ ಕಾರೆಮುಳ್ಳು ಕಳ್ಳಿ ಮುಳ್ಳಿ, ಜಾಲಿಮುಳ್ಳುಗಳಿಂದ ಬೇಲಿ ಹಾಕಿಕೊಂಡು ಅಲ್ಲಿಯೇ ಇರುತ್ತಾನೆ. ಇಲ್ಲಿ ಪಶು ಉತ್ಪಾದನಾ ಕಾರ್ಯವು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿರುವುದನ್ನು ಕಾಣಬಹುದು ಹಾಗೂ ಒಂದು ಸಮುದಾಯಕ್ಕೂ ಪಶು ಉತ್ಪಾದನಾ ಕಾರ್ಯವು ಸೀಮಿತವಾಗದೇ ತಂದೆ, ತಾಯಿ, ತಂಗಿ, ಇಡೀ ಗೊಲ್ಲ ಸಮುದಾಯವೇ ಪಶುಸಂಗೋಪನೆಗಾಗಿ ದಿನ್ನೆಯೊಳಗೆ ಕಾರೆಮುಳ್ಳು, ಕವಳಿ ಮುಳ್ಳು, ಜಾಲಿಮುಳ್ಳುಗಳಿಂದ ಬೇಲಿ ಹಾಕಿಕೊಂಡಿರುತ್ತಾರೆ.

ಕೆಂಗರು ಮಲ್ಲೇಗೌಡನಂತೆ ಜುಂಜಪ್ಪನು ಕೂಡ ಪಶುಸಂಗೋಪನಾ ಕೆಲಸದಲ್ಲಿ ತೊಡಗಿರುತ್ತಾನೆ. ಜುಂಜಪ್ಪನ ತಾಯಿ ಸಿನ್ನಮ್ಮನೂ ಸಹ ಈ ಉತ್ಪಾದನೆಯಲ್ಲಿ ತೊಡಗಿರುತ್ತಾಳೆ, ಜುಂಜಪ್ಪ ಒಬ್ಬ ಸಾಂಸ್ಕೃತಿಕ ವೀರನಾದರೂ ಪಶುಗಳ ಮೇಲೆ ಇಟ್ಟಿರುವ ಪ್ರೀತಿ ತನ್ನ ಸಮುದಾಯ ಉತ್ಪಾದನೆ ಹೆಚ್ಚಿಸಲು, ೭ ಹಸುವಿನ ಕರುಗಳನ್ನು ಏಳು ಲಕ್ಷದ ದನಗಳನ್ನಾಗಿ ಮಾಡುವುದು ಗಮನಾರ್ಹವಾಗಿದೆ.

"ಜೂಜುನಾಡಿ ಮೇಯಿಸೋನು

ಹೊತ್ತಾಡಿ ಕಾವುಲನ

ಹೊತ್ತಾಡಿ ಮೇಯಿಸೋಣ

ಚುಂಚನಗಿರಿ ಕಾವುಲನ

ಚುಂಚನಾಡಿ ಮೇಯಿಸೋನಯ್ಯ

ಸಿತ್ತುನೂಗಿರಿ ಕಾವುಲನ

ಸುತ್ತುನಾಡಿ ಮೇಯಿಸೋಣ

"ಮುಡುಗಾದ ಕಾವುಲನ

ಮನಿಕಂಡೇ ಮೇಸೋನು

ಬಾಣಗೇರೆ ಕಾವುಲುನ

ಬಾರಡಿ ಮೇಸೋನಮ್ಮ"[೩೩]

ಎನ್ನುವಲ್ಲಿ ಜುಂಜಪ್ಪ ಪಶುಸಂಗೋಪನೆಯ ಮೇಲೆ ಇಟ್ಟಿರುವ ಪ್ರೀತಿಯನ್ನು ಅವುಗಳನ್ನು ಬೆಳೆಸಿ ಕಾಪಾಡುವ ರೀತಿಯನ್ನು ನೋಡಬಹುದಾಗಿದೆ.

ಮೈಲಾರಲಿಂಗನ ಕಾವ್ಯದಲ್ಲಿ ಮೈಲಾರನು ಕೋಮಾಲೆಯನ್ನು ಪ್ರೀತಿಸಿ ಅವಳನ್ನು ಪಡೆಯಬೇಕೆಂಬ ಹಠದಿಂದ ಕೋಮಾಲೆ ಮತ್ತು ಅವಳ ಅಣ್ಣಂದಿರು ಕುರುಬರಾಗಿರುವುದರಿಂದ ಅವರ ಮನೆಗೆ

ಕುರಿಕಾಯುವವನಂತೆ ಹೋಗಿ ಕುರಿ ಸಾಕಾಣಿಕೆ ಮಾಡುವುದನ್ನು ಕಾಣಬಹುದು, ಆದರೆ ಇಲ್ಲಿ ಮೈಲಾರನ ಯಾವುದೇ ರೀತಿಯ ಆರ್ಥಿಕ ಉತ್ಪನ್ನವಾಗಲೀ ಕುರಿಗಳ ಮೇಲಿನ ಪ್ರೀತಿಯಾಗಲೀ ಕಾಣವುದಿಲ್ಲ. ಮೈಲಾರಲಿಂಗ ಕುರಿಗಳನ್ನು ಈ ರೀತಿಯಲ್ಲಿ ಮೇಯಿಸುತ್ತಾನೆ.

"ಈ ಮಾಯಿಕಾರ
ಹೊಳಿಗೆ ಕುರಿಯ ಹೊಡೆಯುತ್ತಾನೆ
ದೇವಾರು ದೇವ,
ಈ ಮಾಯಿಕಾರ
ಟುರ್ರ ಎಂದು ತಾನೆ ಕರೆಯುತ್ತಾನ
ದೇವರು ದೇವ"[೩೪]

ಮೈಲಾರನೇ ಹೊಳೆಯಲ್ಲಿ ಇಳಿದು ಕುರಿಗಳಿಗೆ ಸ್ನಾನ ಮಾಡಿಸಿ ನೀರು ಕುಡಿಸಿ ಬೆಳೆಸುತ್ತಾನೆ. ಮೈಲಾರನು ಕೋಮಾಲಿಗಾಗಿ ಕುರಿಸಾಕಾಣಿಕೆಯ ಉತ್ಪಾದನೆ ಹೆಚ್ಚು ಮಾಡುವ ಉದ್ದೇಶ ಮಾತ್ರ ಹೊಂದಿರುತ್ತಾನೆ.

ಅದೇ ರೀತಿಯಾಗಿ ಮಂಟೇಸ್ವಾಮಿ ಕಾವ್ಯದಲ್ಲಿಯೂ ಸಾಮುದಾಯಿಕ ಉತ್ಪಾದನೆಯನ್ನು ಕಾಣಬಹುದು. ಬೊಪ್ಪೆಗೌಡನು ಕುರಿ ಸಾಕಾಣಿಕೆಯನ್ನು ಮಾಡುತ್ತಿರುತ್ತಾನೆ. ಮುಟೇಸ್ವಾಮಿಯು ತನಗೆ ಮಲಗಲು ಸ್ವಲ್ಪ ಜಾಗ ಬೇಕೆಂದು ಮತ್ತು ಬೆಳಿಗ್ಗೆ ಎದ್ದು ಹೋಗುವುದಾಗಿ ಕೇಳಿಕೊಳ್ಳುತ್ತಾನೆ. ಮಂಟೇಸ್ವಾಮಿಗೆ ಮಲಗಲು ಸ್ಥಳ ನೀಡಿ ಮಂಟೇಸ್ವಾಮಿಗೆ ಒಕ್ಕಲು ಆಗುತ್ತಾನೆ. ಇದರಿಂದ ಬೊಪ್ಪೆಗೌಡನಿಗೆ ಕುರಿ ಸಾಕಾಣೆ ಮಾಡಿ ಕುರಿಗಳ ಸಂತಾನ ಹೆಚ್ಚಾಗಲೀ ಎಂದು ಆಶೀರ್ವಾದಿಸುತ್ತಾ ಈ ರೀತಿಯಾಗಿ

"ನಿನ್ನ ಒಂದು ಕುರಿ ಹಿಡಿದರೆ
ಒಂಬತ್ತು ಕುರಿ ಹೆಚ್ಚಾಗಲಪ್ಪ"[೩೫] ಎನ್ನುತ್ತಾನೆ.

ಮಾಳಿಂಗರಾಯನ ಕಾವ್ಯದಲ್ಲಿ ಮಾತೃಪ್ರಧಾನ ವ್ಯವಸ್ಥೆ ಬಗೆಗೆ ಉಲ್ಲೇಖವಿದ್ದರೂ ಅದು ಒಂದು ಕಾಲಘಟ್ಟದವರೆಗೆ ಮಾತ್ರ. ಪಶುಪಾಲನೆ ಆರಂಭಗೊಂಡು ಪಶುಸಂಪತ್ತು ಉತ್ಪಾದನೆಯು ಪುರುಷರ ಕೈಗೆ ಸೇರಿದ ತಕ್ಷಣ ಪಿತೃಸೌಮ್ಯ ಸಮಾಜ ಹುಟ್ಟಿಕೊಂಡಿತ್ತು. ಬಾರಮತಿ ತೇರಾಮತಿ ಪಟ್ಟಣದ ಅರಸರಾದ ತುಕ್ಕಪ್ಪರಾಯ ಮತ್ತು ಸೋಮರಾಯರು ಬರಗಾಲದಲ್ಲಿ ಪಶುಗಳ ರಕ್ಷಣೆಗಾಗಿ ಕಾಡಿಗೆ ಹೋಗುತ್ತಾರೆ. ಅರಸರಾದ ತುಕ್ಕಪ್ಪರಾಯ ಮತ್ತು ಸೋಮರಾಯ ಅಣ್ಣಾ–ತಮ್ಮಂದಿರು ತಮ್ಮ ಸಮುದಾಯದ ಏಳಿಗೆಗಾಗಿ ಪಶುಸಂಗೋಪನೆಯನ್ನು ಮುಂದುವರೆಸಿಕೊಂಡು ಬರುವುದನ್ನು ಕಾಣಬಹುದು.ಮುಂದೆ ತುಕ್ಕಪ್ಪರಾಯನ ಮಕ್ಕಳಾದ ಮಾಳಪ್ಪ, ಜಕ್ಕಪ್ಪರೆ ಪಶು ಸಂಗೋಪನೆಯಲ್ಲಿ ತೋಡಗುತ್ತಾರೆ.

"ಬನ್ನಿಗಿ ಸಾವಿರ

ಕುರಿಗಳ ಮಾಳಣ್ಣಾ

ತಾವೆ ಕಾದವರಾ

ಬೀಜಗುಂತಿ ಮ್ಯಾಲ ದಡ್ಡಿ

ತಾವೇ ಹಾಕಿದವರಾ

ಬೈಲಾಗ ಮರಿಗಳ

ಹಟ್ಟಿನ ಹಾಕಿದರಾ

ಹಟ್ಟಿಗೆ ಬಂದವರಾ

ಜಗವೆಲ್ಲಾ ಪವಾಡ ಮಾಡಿದರಾ

ಎರಡು ಹುಲಿ ಮರಿ

ಮಾಳಿಂಗರಾಯ

ತಾವೇ ಸಾಕಿದವರಾ

ಕುರಿ ಕಾಯ್ಲಾಕ

ಹುಲಿಗೆ ಹಚ್ಚಿ

ಸಾಗಿ ನಡೆದವರಾ"[೩೬]

ಮಾಳಿಂಗರಾಯ ತನ್ನ ತಂದೆಯಿಂದ ಕುರಿಗಳ ಸಾಕಾಣಿಕೆಯ ಬಗೆಗೆ ತಿಳಿದುಕೊಂಡು ಅವುಗಳನ್ನು ನೋಡಿಕೊಳ್ಳುತ್ತಿರುತ್ತಾನೆ. ಅವುಗಳ ರಕ್ಷಣೆಗೆ ಹುಲಿಯನ್ನೇ ಕಾವಲಿಗೆ ಇಡುವುದರೊಂದಿಗೆ ಪಶುಗಳ ಮೇಲಿನ ಪ್ರೀತಿಯನ್ನು ಅಭಿವ್ಯಕ್ತಪಡಿಸುತ್ತಾನೆ.

ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡಿರುವ ಈ ಸಮುದಾಯ ಉತ್ಪಾದನೆಯಲ್ಲಿ ಪಶುಸಂಗೋಪನೆ ಕುರಿ ಸಾಕಾಣಿಕೆ ಎಷ್ಟು ಪ್ರಾಮುಖ್ಯತೆ ಪಡೆದಿದೆಯೋ ಹುಲ್ಲುಗಾವಲು ನೀರಿನ ಹುಡುಕಾಟವು ಅಷ್ಟೇ ಪ್ರಾಮುಖ್ಯತೆಯನ್ನು ಪಡೆದಿದೆ. ಮಲೆಮಾದೇಶ್ವರ, ಮಾಟೇಸ್ವಾಮಿ, ಜುಂಜಪ್ಪ ಮೈಲಾರಲಿಂಗನ ಕಾವ್ಯ, ಮಾಳಿಂಗರಾಯನ ಕಾವ್ಯಗಳಲ್ಲಿ ಹುಲ್ಲು ನೀರಿಗೋಸ್ಕರ ತಮ್ಮ ತಮ್ಮ ಮನೆ ಮಠಗಳನ್ನು ತೊರೆದ ಉಲ್ಲೇಖ ಕಾವ್ಯಗಳಲ್ಲಿ ಇದೆ. ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪನು ಸೋದರ ಮಾವಂದಿರು ನೀಡಿದ ೭ ಕರುಗಳನ್ನು ೭ ಲಕ್ಷದ ದನಗಳನ್ನಾಗಿ ಬೆಳೆಸುತ್ತಾನೆ, ಹಸು ಕರುಗಳಿಗೆ ನೀರಿನ ಅಗತ್ಯವಿರುವುದರಿಂದ ಎಲ್ಲಿ ಹುಲ್ಲುಗಾವಲು, ನೀರು ಇದೆಯೋ ಅಲ್ಲೆಲ್ಲ ಹುಡುಕಿಕೊಂಡು ಹೋಗಿ ದನಗಳನ್ನು ಮೇಯಿಸುತ್ತಾನೆ, ಜುಂಜಪ್ಪ ದನಗಳನ್ನು ಮೇಯಿಸಲೆಂದು ಪುರಸಕ್ಕನ ಕೆರೆ, ಮುಡಿಗುಡ್ಡರ ಹೆಡ್ಡಗೆಗಳನ್ನು ಆಯ್ಕೆ ಮಾಡಿ ತನ್ನ ಸಮುದಾಯದವರಿಗಿಂತ ಹೆಚ್ಚಿನ ಉತ್ಪಾದನೆಯಲ್ಲಿ ತೊಡಗುವುದನ್ನು ಕಾಣಬಹುದಾಗಿದೆ.

ತಮ್ಮ ಪಶುಸಂಗೋಪನೆಯ ಮುಲಕ ಉತ್ಪಾದನೆಗಾಗಿ ಈ ಸಾಂಸ್ಕೃತಿಕ ವೀರರು ಅನೇಕ ದುಷ್ಪರನ್ನು ಸದೆ ಬಡೆಯುತ್ತಾರೆ. ದಾರಿಯುದ್ದಕ್ಕೂ ಪವಾಡ ಮಾಡುತ್ತ ಒಕ್ಕಲುಗಳನ್ನು ಮಾಡಿಕೊಳ್ಳುವ ಘಟನೆಗಳೇ ಬರುತ್ತವೆ. ಈ ಮೂಲಕ ಸಾಂಸ್ಕೃತಿಕ ವೀರರು ತಮ್ಮ ಸಮುದಾಯದ ಒಕ್ಕಲು ನಿರ್ಮಾಣದ ಉದ್ದೇಶವನ್ನು ಹೊಂದಿದ್ದಾರೆ ಎಂಬುದನ್ನು ಕಂಡುಕೊಳ್ಳಬಹುದು.

ಜುಂಜಪ್ಪನ ಕಾವ್ಯದಲ್ಲಿ ಕ್ಷಾಮ ಉಂಟಾದಾಗ ನೀರಿರುವ ಸ್ಥಳವನ್ನು ಜುಂಜಪ್ಪ ಹುಲ್ಲೆಯ ಮೂಲಕ ತಿಳಿದುಕೊಳ್ಳುತ್ತಾನೆ. ಸಾಣೆಕೆರೆ ಪುಟ್ಟಣ್ಣನ ಕಾವಲೊಳಗೆ ಬಡಮೈಲ ಬಸವನು ದನಗಳನ್ನು ನುಗ್ಗಿಸಿ ಹುಲ್ಲು ಮೇಯುವಂತೆ ಮಾಡುತ್ತಾನೆ. ಇದರಿಂದ ಕೊಪಗೊಂಡ ಪುಟ್ಟಣ್ಣ

"ಎಲಾ ಕಾಡುಗೊಲ್ಲ
ಅವನೊ ಇನ್ನೆಷ್ಟು
ಸೊಕ್ಕಿರಬೇಕು
ನನ್ನಾಜ್ಞೆ ಇಲ್ದೆ
ನನ್ನ ಕಾವುಲಿಗೂ
ದನ ಕರಿಬೇಕಾಗಿದ್ರೆ,
ಆ ದಗಡೇ ಮಗನ
ತಕ್ಕ ಶಿಕ್ಷ
ನೀಡಬೇಕೆಂದು"[೩೭]

ಅಬ್ಬರಿಸುತ್ತಾನೆ, ಪುಟ್ಟಣ್ಣನೇ ಬೇತಾಳಗಳನ್ನು ಸೃಷ್ಟಿಸಿ ಜುಂಜಪ್ಪನನ್ನು ಸರ್ವನಾಶ ಮಾಡಬೇಕೆಂದು ಹೇಳಿದಾಗ ಜುಂಜಪ್ಪನೇ ಅವುಗಳನ್ನು ನಾಶ ಮಾಡುತ್ತಾನೆ. ಹುಲ್ಲು ನೀರಿನ ಸಂಬಂಧವಾಗಿ ಜುಂಜಪ್ಪ ಸೋದರ ಮಾವಂದಿರ ನಡುವೆ ವೈರುತ್ವ ಉಂಟಾಗಿ ಜುಂಜಪ್ಪ ಸಾವನ್ನಪ್ಪುತ್ತಾನೆ. ಕುಂಬಾರ ಗೊಲ್ಲರು ವಿಷದ ಕಜ್ಜಾಯಗಳ ಮುಖಾಂತರ ಜುಂಜಪ್ಪನನ್ನು ಸಾಯಿಸುತ್ತಾರೆ, ಜುಂಜಪ್ಪನ ಕಾವ್ಯವು ಹುಲ್ಲು ನೀರಿನ ಹೋರಾಟ, ಬವಣೆ, ಅದಕ್ಕೆ ಉಂಟಾದ ಎರಡು ತೊಡರುಗಳನ್ನು ಇಲ್ಲಿ ವ್ಯಕ್ತಿಪಡಿಸಲಾಗಿದೆ. "ಹುಲ್ಲು ನೀರಿಗೋಸ್ಕರ ಬವಣೆ ಪುಡತ್ತಾ ಕಾವಲಿನಿಂದ ಕಾವಲಿಗೆ ಅಲೆಯುತ್ತಾ ದ್ವೇಷ ಅಸೂಯೆಗಳ ಜಂಜಾಟದಲ್ಲಿ ತೊಳಲುತ್ತಾ, ವಿರೋಧಿಗಳ ಹುಟ್ಟಡಗಿಸುತ್ತಾ ಎಲ್ಲಿ ಹುಲ್ಲು ನೀರು ಐತೇ ಅದೇ ನಮ್ಮ ಮನಿ, ಮಾರು"[೩೮] ಎನ್ನುವ ತೀ.ನಂ.ಶಂಕರ ನಾರಾಯಣರವರ ಅಭಿಪ್ರಾಯ ಇಲ್ಲಿ ಅರ್ಥಪೂರ್ಣವಾಗಿದೆ ಎಂದೇ ಹೇಳಬಹುದು, ಈ ಹುಲ್ಲುಗಾವಲು, ನೀರಿನ ಸಮಸ್ಯೆಗಳು ಕೇವಲ ಜುಂಜಪ್ಪನಿಗೆ ಸೀಮಿತವಾಗಿಲ್ಲ, ಯಾವ ಯಾವ ನಾಯಕರುಗಳು ತಮ್ಮ ಸಮುದಾಯಗಳ ಉತ್ಪಾದನೆಗೊಸ್ಕರ ದನ, ಕರು, ಹಸು, ಕುರಿಗಳನ್ನು ಅವಲಂಬಿಸಿರುವರೋ ಅವರ ಬವಣೆ ಮತ್ತು ಸಂಘರ್ಷವೂ ಇದೇ ರೀತಿಯಾಗಿರುವುದು ಕಂಡು ಬರುತ್ತದೆ.

ಜುಂಜಪ್ಪನ ಕಾವ್ಯದಲ್ಲಿ ಸದಾ ದನಗಳನ್ನು ಸಾಕಿ ಬೆಳೆಸಿ ತನ್ನ ಸಮುದಾಯದ ಉತ್ಪಾದನೆಯನ್ನು ಹೆಚ್ಚಿಸುವುದಾದರೆ, ಮಲೆಮಹದೇಶ್ವರ ಹಾಗೂ ಮಂಟೇಸ್ವಾಮಿಗಳಿಗೆ ತಮ್ಮ ಒಕ್ಕಲುತನ ಸೇವೆಯನ್ನು ಹೆಚ್ಚಿಸಿಕೊಂಡು ಒಂದೆಡೆ ನೆಲೆಗೊಳ್ಳಬೇಕೆಂಬ ತವಕ ಕಂಡು ಬರುತ್ತದೆ. ಆದರೆ ಮೈಲಾರಲಿಂಗನಿಗೆ ಕೋಮಾಲೆಯನ್ನು ಪಡೆಯಲೇಬೇಕೆಂಬ ಹಂಬಲವಿದೆ. ಮೈಲಾರಲಿಂಗ, ಮಾದೇಶ್ವರ ಜುಂಜಪ್ಪ ಹಲವು ಸಮುದಾಯಗಳಿಂದ ಪೂಜಿತಗೊಳ್ಳತ್ತಾರೆ, ಆದರೂ ತಮ್ಮ ಸಮುದಾಯದ ಆರ್ಥಿಕತೆ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ.

"ಮೈಲಾರನು ನೀರಿರುವ ಸ್ಥಳಗಳಿಗೆ ಕುರಿ ಹಿಂಡೂ ಕೊಂಡೊಯ್ದು ನೀರು ಕುಡಿಸುವ, ಕುರಿಗಳನ್ನು ತೊಳೆಯುವ ಕೆಲಸವನ್ನು ಮಾಡುತ್ತಾನೆ, ಕುರಿಗಳನ್ನು ಮೇಯಿಸಿದರೆ ತನಗೆ ಕೋಮಾಲೆ ದೊರೆಯುತ್ತಾಳೆಂದು ಈ ರೀತಿ ಪ್ರಣಯದ ಹುಡುಕಾಟದಲ್ಲಿ ತಲ್ಲೀನನಾಗಿರುತ್ತಾನೆ."[೩೯]

"ಈ ಮಾಯಕಾರ

ಹೊಳಿಗೆ ಕುರಿಯು ಹೊಡೆಯುತ್ತಾನ

ದೇವಾರು ದೇವ"[೪೦]

ಎಂಬಂತೆ ಕುರಿಗಳನ್ನು ಹೊಳೆಗೆ ಹೊಡೆಯುವಾಗ ಯಾವುದೇ ಹುಲ್ಲುಗಾವಲು ನೀರಿನ ಸಮಸ್ಯೆ ಉಂಟಾಗುವಾಗುವುದಿಲ್ಲ. ಜುಂಜಪ್ಪ ದನಗಳನ್ನು ಇಟ್ಟುಕೊಂಡು ಆಲಂಬಾಟೆಯಲ್ಲೆ ಜೀವನ ಮಾಡುತ್ತಿರುತ್ತಾನೆ. ಜುಂಜಪ್ಪನ ದನಗಳ ಜೊತೆಗೆ ಬಸಣ್ಣನನ್ನು ಕರೆದುಕೊಂಡು ಕಾಡಿನಲ್ಲಿ ಜೀತಗಾರರೊಂದಿಗೆ ಮೇಯಿಸಿಕೊಂಡು ಹೊಗುತ್ತಿರುವಾಗ ಬಸಣ್ಣ ಏಳು ಮನೆಯಲ್ಲಿ ತಪಸ್ಸು ಮಾಡುತ್ತಾ ಕುಳಿತ ಮಾದೇಶ್ವರನಿಗೆ ಆರು ಸೇರಿನ ಹಾಲಿನ ಮಜ್ಜನ ಮಾಡಿ ಏಳುಂಟೆ ದನಗಳ ಗುಂಪನ್ನ ಸೇರಿಸಿಕೊಳ್ಳುತ್ತದೆ. ಆದ್ದರಿಂದ ಇಲ್ಲಿ ಉತ್ಪಾದನಾ ಆಚಾರಕ್ಕೆ ಸಂಬಧಿಸಿದದ್ದು, ಯಾವುದೇ ಘರ್ಷಣೆಗಳು ಕಂಡುಬರುವುದಿಲ್ಲ.

ಮಂಟೇಸ್ವಾಮಿ ಕಾವ್ಯದಲ್ಲಿಯೇ ಒಕ್ಕಲುತನಕ್ಕೆ ಹೆಚ್ಚು ಪ್ರಾಶಸ್ತ್ಯವಿರುವುದರಿಂದ ದನಗಳ ಅವಲಂಬನೆ ಅಧಿಕ ಪ್ರಮಾಣದಲ್ಲಿರದೆ ಕೆಲವೆಡೆ ಮಾತ್ರ ಕಂಡು ಬರುತ್ತದೆ.

ಕೆಂಪಾಚಾರಿಯ ಸಾಲಿನಲ್ಲಿ ಬಸವಾಚಾರಿ ಮುದ್ದಮ್ಮರು ಕಡು ಬಡವರಾಗಿರುವುದರಿಂದ ತಮ್ಮ ಮಕ್ಕಳನ್ನು ಸಾಕಲು ಮಠಗಳಲ್ಲಿ ಕೆಲಸ ಮಾಡುತ್ತಾ ದನಗಳನ್ನು ಕಾಯ್ಕೊಂಡು ಇರುವುದು ಕಂಡುರುಬತ್ತದೆ.

ಒಟ್ಟಿನಲ್ಲಿ ಸಾಂಸ್ಕೃತಿಕ ನಾಯಕರು ತಮ್ಮ ಒಕ್ಕಲುಗಳ ಮೂಲಕವೇ ಸಮುದಾಯಗಳ ಉತ್ಪಾದನೆಯಲ್ಲಿ ತೊಡಗುವಂತೆ ಮಾಡುತ್ತಾರೆ. ಸಾಂಸ್ಕೃತಿಕ ವೀರರು ಸಮುದಾಯಗಳಲ್ಲಿ ಆರ್ಥಿಕತೆಯನ್ನು ಹೆಚ್ಚಿಸುವುದರ ಮೂಲಕ ಸಾಂಸ್ಕೃತಿಕ, ಧಾರ್ಮಿಕ ವಿಚಾರಗಳಲ್ಲಿ ಹೇಗೆ ಒಂದು ಸಮುದಾಯ ಸಾಮೂಹಿಕವಾಗಿ ಅಭಿವೃದ್ಧಿ ಹೊಂದಬಹುದು ಎಂಬುದನ್ನು ತೋರಿಸಿದ್ದಾರೆ. ಇಂದಿಗೂ ಸಹ ಕೆಲವು ಸಮುದಾಯಗಳು ತಮ್ಮ ಪಶು. ಕುರಿಗಳನ್ನು ಹುಲ್ಲು, ನೀರಿಗಾಗಿ ಕಾಡು, ತೋಪುಗಳ ಕಡೆ ಹೊಡೆದುಕೊಂಡು ಹೋಗಿ

ಸಾಕುತ್ತಾರೆ. ಮತ್ತೆ ಕೆಲವರು ಹುಲ್ಲನ್ನು ಸಂಗ್ರಹಿಸುವ ಹಾಗೂ ಮಾರಾಟ ಮಾಡುವ ವೃತ್ತಿಯನ್ನು ಬೆಳೆಸಿಕೊಂಡಿದ್ದಾರೆ. ಸಮುದಾಯಗಳು ಆರ್ಥಿಕವಾಗಿ ಎಷ್ಟೇ ಪ್ರಬಲರಾದರೂ ತಮ್ಮ ಸಮುದಾಯಗಳಲ್ಲಿ ನಡೆದುಕೊಂಡು ಬಂದ ಸಂಸ್ಕೃತಿಯನ್ನು ಬಿಟ್ಟಿಲ್ಲ. ಸಮುದಾಯಿಕವಾಗಿ ಉತ್ಪಾದನೆಯನ್ನು ಮಾಡುವುದನ್ನೂ ಬಿಟ್ಟಿಲ್ಲ. ಆದರೆ ಆಧುನಿಕತೆಯಿಂದ ಸ್ವಲ್ಪ ಬದಲಾವಣೆಗೆ ಒಳಪಟ್ಟಿದೆ ಎಂದು ಹೇಳಬಹುದು.

### ೪.೪ ಸಮುದಾಯದ ಒಳಾಡಳಿತ ಮತ್ತು ಲಿಂಗಬೇಧಗಳು

ಮೌಖಿಕ ಕಾವ್ಯಗಳು ನಾಯಕರು ೧೨ನೇ ಶತಮಾನದಿಂದೀಚೆಗೆ ಸಮಾಜಕ್ಕೆ ಬಂದವರು. ಇವರು ನಡೆಸಿದ ಅನೇಕ ಸಂಘರ್ಷಗಳು ಚರಿತ್ರೆಯನ್ನೆ ಸೃಷ್ಟಿ ಮಾಡಿದವು. ಇವರ ಹುಟ್ಟಿನೊಂದಿಗೆ ಅಲಕ್ಷ್ಯಕ್ಕೆ ಒಳಗಾಗಿದ್ದ ಎಷ್ಟೋ ಸಮುದಾಯಗಳು, ಕುಲಗಳು ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಪ್ರಾರಂಭಿಸಿದವು. ವೈದಿಕತೆ, ವೈಷ್ಣವ ಸಮುದಾಯಗಳು, ವೀರಶೈವ ಸಮುದಾಯಗಳು ಒಂದಕ್ಕೊಂದು ತಮ್ಮದೇ ಆದ ಆಡಳಿತ ರೂಪಿಸಿಕೊಂಡವು. ಮೌಖಿಕ ಕಾವ್ಯಗಳಲ್ಲಿಯ ನಾಯಕರು ಆಡಳಿತದ ನಡುವೆಯೇ ತಮ್ಮ ಅಭಿವ್ಯಕ್ತಿಯ ಧ್ವನಿಯನ್ನು ಎತ್ತಿದರು. ಇದು ಕೆಲ ಕುಲಗಳು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕವಾದ ಕಲ್ಯಾಣದ ಕಡೆ ಸಾಗಲು ಸಹಾಯಕವಾಯಿತು.

ವೀರಶೈವರು ಮತ್ತು ಪೌರೋಹಿತಶಾಹಿ ವರ್ಗಗಳು ತಮ್ಮ ಅಸ್ತಿತ್ವಕ್ಕಾಗಿ ಮೇಲುಕೀಳು ಎಂಬ ಸಂಘರ್ಷಗಳಲ್ಲಿ ಒದ್ದಾಡುತ್ತಿದ್ದಾಗ ಬಂದಂತಹ ಸಾಂಸ್ಕೃತಿಕ ನಾಯಕರು ಒಂದು ರೀತಿಯ ಚಾರಿತ್ರಿಕ ಮತ್ತು ರಾಜಕೀಯ ಬೆಳವಣಿಗೆಯನ್ನು ತರಲು ಹಾತೋರಿಯುತ್ತಿದ್ದರು. ಅದರಂತೆ ಅನೇಕ ಸಮುದಾಯಗಳನ್ನು ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕವಾಗಿ ಅದರ ಅಸ್ತಿತ್ವನ್ನು ಗಟ್ಟಿಗೊಳಿಸಿದರು. ನಂತರ ಈ ನಾಯಕರ ಪ್ರಭಾವ ಈಗಾಗಲೇ ಅಸ್ತಿತ್ವದಲ್ಲಿದ್ದ ಕೆಲ ಧರ್ಮಗಳ ಮೇಲೆ ಬಿದ್ದಿತು. ಇದರಿಂದಾಗಿ ಜಾಗತಿಕ, ಬಂಡವಾಳ ಸಂಸ್ಕೃತಿಗಳು ಪಲ್ಲಟವಾಗತೊಡಗಿದವು.

ಸಮುದಾಯಗಳ ಆಡಳಿತವು ಒಬ್ಬ ವ್ಯಕ್ತಿಗೆ ಸೀಮಿತವಾಗಿದ್ದ ಕಾಲವನ್ನು ನಾಯಕರು ಜನಾಧಿಪತ್ಯವಾಗುವುದಕ್ಕೆ ಶ್ರಮಿಸಿದರು. ಅದಕ್ಕಾಗಿ ಮೇಲ್ವರ್ಗಗಳಿಂದ ಬಿಡಿಸಿಕೊಳ್ಳಲು ಕಲಹಗಳು, ಸಂಘರ್ಷಗಳು ಪವಾಡಗಳನ್ನು ಮಾಡಬೇಕಾಯಿತು. ಉತ್ಪಾದನಾ ಒಡೆತನವನ್ನು ಹೊಂದಿದ್ದ ಮೇಲ್ವರ್ಗವನ್ನು ತಮ್ಮ ಮಾಂತ್ರಿಕ ಶಕ್ತಿಯಿಂದ ಗೆಲ್ಲುತ್ತಾರೆ, ಪಶುಪಾಲನೆ, ಕೃಷಿಗೆ ಸಂಬಂಧಿಸಿದ ಚಟುವಟಿಕೆಯಲ್ಲಿ ತೊಡಗಿದ ಸಮುದಾಯವನ್ನು ನಾಯಕರು ಹುಡಿಕಿ ತಮ್ಮ ಒಕ್ಕಲನ್ನಾಗಿ ಮಾಡಿಕೊಳ್ಳುತ್ತಾರೆ. ತಳಸಮುದಾಯಗಳಿಗೆ ಒಳಾಡಳಿತದ ಬಗ್ಗೆ ಇದ್ದ ಅಸಮಾನತೆಯ ಪರಿಣಾಮ ಹೊಸ ಸಂಸ್ಕೃತಿ, ಅಧಿಕಾರದ ನಿರ್ಮಾಣಕ್ಕೆ ಕಾರಣವಾಯಿತು.

ಸಮುದಾಯಗಳು ಆಡಳಿತವನ್ನು ತಮ್ಮ ತಮ್ಮ ತೆಕ್ಕೆಗೆ ಪಡೆದುಕೊಳ್ಳಬೇಕೆಂಬ ಆಶಯಗಳು ಈ ನಾಯಕರ ಸಂಸ್ಕೃತಿಯ ಸುತ್ತಾ ಸುತ್ತಾಲಾರಂಭಿಸಿದವು. ಇದರಿಂದ ಒಳಗೊಳಗೆ ಅಂತ:ಕಲಹಗಳು ಉಂಟಾಗತೊಡಗಿದವು. ಮಾದೇಶ್ವರ ಮಂಟೇಸ್ವಾಮಿಯವರು ಕುಲ, ಜಾತಿಗಳಲ್ಲಿ ಏರ್ಪಡುವ

ಸಂಘರ್ಷ ಕಂಡರೆ ಜುಂಜಪ್ಪ ಮೈಲಾರರು ತಮ್ಮ ಕಸುಬು, ಪಶುಪಾಲನೆಗಾಗಿ ಸಂಬಂಧಗಳಲ್ಲಿಯೆ ಒಳಾಡಳಿತ ಒಪ್ಪಂದಗಳು ಹುಟ್ಟಿಕೊಳ್ಳುತ್ತವೆ.

ಮಾದೇಶ್ವರನು ಶಿವನ ಅವತಾರವಾಗಿ ಹುಟ್ಟಿ ಲೋಕಕಲ್ಯಾಣ ಮಾಡಬೇಕು ಎನ್ನುವ ಆಶಯದೊಂದಿಗೆ ಭೂಮಿಗೆ ಬರುತ್ತಾನೆ. ಆದರೆ ಅನೇಕ ಅಪಮಾನ ಅವಮಾನಗಳನ್ನು ಸಹಿಸಿಕೊಂಡು ಅನಾಥ ಪ್ರಜ್ಞೆ ಅನುಭವಿಸುತ್ತಾನೆ. ಅನೇಕ ಮತಗಳ ಪುನ:ನಿರ್ಮಾಣ ಮಾಡಲು ಹೆಣಗಾಡಿದರೂ ಸಹ ಒಕ್ಕಲು ನಿರ್ಮಾಣಕ್ಕಾಗಿ ಸಾಂಸ್ಕೃತಿಕ ಎಲ್ಲೆಯನ್ನು ವಿಸ್ತರಿಸುತ್ತಾನೆ. ಹಲಗಯ್ಯ, ಮುದ್ದಮ್ಮರ ಮೂಲಕ ಪ್ರಾರಂಭಿಸಿದ ಮಾದೇಶ್ವರ ಶೈವ, ವೈಷ್ಣವಗಳ ಧರ್ಮಗಳ ಊಳಿಗತನವನ್ನು ಪ್ರಶ್ನಿಸುತ್ತಾನೆ. ತನ್ನ ಪವಾಡಗಳಿಂದ ಕುಲ ಜಾತಿಗಳಿಂದ ತಳವರ್ಗವನ್ನು ಹೀಯಾಳಿಸುತ್ತಿದ್ದ ಮೇಲ್ವರ್ಗವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವುದಕ್ಕೆ ನೋಡುತ್ತಾನೆ. ಜುಂಜೇಗೌಡ, ನೀಲಯ್ಯ, ಬೇವಿನಹಟ್ಟಿ ಕಾಳಮ್ಮ, ಸರಗೂರಯ್ಯ ಮೊದಲಾದವರನ್ನು ಮತೀಯವಾದಿಗಳನ್ನು ನಾನಾ ವಿಧವಾಗಿ ಪರೀಕ್ಷಿಸಿ ಲೋಕಕಲ್ಯಾಣದ ಕಡೆ ಸಾಗಿಸುತ್ತಾನೆ. ಮೇಲ್ವರ್ಗದವರು ತಮ್ಮದೇ ದೈವ ಒಡೆತನ ಸಂಸ್ಕೃತಿಯನ್ನು ಪಾಲಿಸುವ ಸಮುದಾಯಗಳನ್ನು ಸಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಸಾಂಸ್ಕೃತಿಕವಾಗಿ ಒತ್ತಡ ಹೇರುವುದರೊಂದಿಗೆ ಸಮಾನತೆಯ ಪರಂಪರೆಯನ್ನು ಹುಟ್ಟುಹಾಕುತ್ತಾನೆ. ಸ್ತ್ರೀ, ಪುರುಷ ಸಮಾನತೆಯನ್ನು ಕಾಯ್ದುಕೊಳ್ಳುವಂತೆ ಮಾಡುತ್ತಾನೆ. ಮಾದೇಶ್ವರನು ತಳಸಮುದಾಯಗಳ ಪರವಾಗಿ ಹೋರಾಡಲು ಜನ್ಮ ತಾಳಿದರೂ ಸಹ ಕೆಲ ಕುಲಮತಗಳ ಒಳಾಡಳಿತಕ್ಕ ಸಿಕ್ಕು ಸ್ವತಃ ಮಾದೇಶ್ವರನೇ ಇಂದು ಪೌರೋಹಿತದ ತೆಕ್ಕೆಗೆ ಒಳಗಾಗಿದ್ದಾನೆ. ವೀರಶೈವರು, ವೈಷ್ಣವರು ಇಂದು ಮಾದೇಶ್ವರನ ಬೆಟ್ಟವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ಆಚರಣೆ, ಸಂಸ್ಕೃತಿ, ಜಾತ್ರೆಗಳಲ್ಲಿ ತಮ್ಮ ಆಡಳಿತವನ್ನು ನಡೆಸುವುದನ್ನು ಪ್ರಸ್ತುತ ಸಂದರ್ಭದಲ್ಲಿ ಕಾಣಬಹುದಾಗಿದೆ.

ಮಂಟೇಸ್ವಾಮಿಗಳು ಸಹ ಮಾದೇಶ್ವರನಂತೆ ಕೆಳಸಮುದಾಯಗಳ ಪರವಾಗಿ ಕಾಣಿಸಿಕೊಂಡ ಒಬ್ಬ ಸಾಂಸ್ಕೃತಿಕ ವೀರನಾಗಿದ್ದಾನೆ. ಕಲ್ಯಾಣದಲ್ಲಿರುವ ಅನೇಕ ಶರಣರನ್ನು ಶುದ್ಧೀಕರಿಸಿ ನಿಜಶರಣರನ್ನಾಗಿ ಮಾಡುತ್ತಾನೆ. "ಮಂಟೇದರಿಗೆ ತನ್ನ ಸುತ್ತಲ ಶೂದ್ರಲೋಕ ವೀರಶೈವಕ್ಕೆ ದೀಕ್ಷೆ ಹೊಂದುವ ಮೂಲಕ ವರ್ಗಗೊಳ್ಳುತ್ತಿದ್ದ ಊಳಿಗದ ಪ್ರಭುತ್ವವಾಗಬಹುದಾಗಿದ್ದ ಅಪಾಯಗಳನ್ನು ಅರಿತೆ ತನ್ನ ಜೊತೆಗಿನ ಮಾದಿಗ ಪಂಥದೊಂದಿಗೆ ಸಂಘರ್ಷ ಇಟ್ಟುಕೊಂಡೇ ಒಕ್ಕಲನ್ನು ರೂಢಿಸುವ ಕೆಲಸವನ್ನು ಮಾಡುತ್ತಾನೆ. ಮಂಟೇಸ್ವಾಮಿಯ ಕಾವ್ಯ ಈ ಒಕ್ಕಲು ಬಳ್ಳಿಗಳನ್ನು ಕಟ್ಟುವ ವೀರಶೈವ ಧರ್ಮ, ಜಾತಿಗೆ ಪರ್ಯಾಯವಾದ ದಿಕ್ಕನ್ನೂ ಹೊಸ ಹಾದಿಯನ್ನು ತುಳಿದಿರುವುದು ಇಲ್ಲಿ ಸ್ಪಷ್ಟವಾಗಿದೆ."[೪೧] ಈ ಹಾದಿಯಲ್ಲಿ ಮಂಟೆಸ್ವಾಮಿಗಳು ಬೇರೆ ಬೇರೆ ಸಮುದಾಯದವರನ್ನು ಸೇರಿಸಿಕೊಳ್ಳುತ್ತಾರೆ. ರಾಚಪ್ಪಾಜಿ, ಚೆನ್ನಾಜಮ್ಮ, ಮೋಡಿಕಾರರು, ಸಿದ್ದಾಪ್ಪಾಜಿ, ಮಡಿವಾಳ ಮಾಚಯ್ಯ, ಮುದ್ದಮ್ಮ-ಬಸವಾಚಾರಿ, ದೊಡ್ಡಮ್ಮ ತಾಯಿ, ಪಾಂಚಾಳರು ಮೊದಲಾದವರು ಮಂಟೇಸ್ವಾಮಿಗೆ ಒಕ್ಕಲಾಗುವುದರ ಮೂಲಕ ಸಮ ಸಮಾಜದ ನಿರ್ಮಾಣಕ್ಕೆ ತೊಡಗುತ್ತಾರೆ.

ಮಂಟೇಸ್ವಾಮಿ ತಳವರ್ಗದವರ ಶೋಷಣೆಯನ್ನು ವಿರೋಧಿಸುತ್ತಲೇ ಬಂದಿದ್ದರೂ ಇಂದು ಮಂಟೇದಯ್ಯ ಮೇಲ್ವರ್ಗಗಳ ಮಠಗಳ ಗದ್ದುಗೆಯಲ್ಲಿದ್ದಾನೆ. ಇದೇ ಮಠಗಳ ಅಧಿಕಾರವು ಸಹ ಪೌರಾಹಿತ್ಯವರ್ಗಕ್ಕೆ ಸೇರಿಸುವುದನ್ನು ಕಾಣಬಹುದು. ಮಂಟೇಸ್ವಾಮಿ ಕುಲ ಜಾತಿಗಳನ್ನು ಕಟ್ಟಿಕೊಂಡು ಪವಾಡ ಮಾಟ ಮಂತ್ರಗಳನ್ನು ಮಾಡಿ ಮಠಗಳ ವಿರುದ್ಧ ಸಂಘರ್ಷ ನಡೆಸುತ್ತಾ ವೀರಶೈವ ಧರ್ಮದ ಅಧಿಕಾರವನ್ನು ಇತರ ಸಮುದಾಯಗಳಿಗೆ ಸಿಗುವಂತೆ ಮಾಡುತ್ತಾನೆ, ಮುತ್ತೆನಹಳ್ಳೀ ಬೊಪ್ಪೆಗೌಡನಪುರದಲ್ಲಿ ಮಠ ಮನೆಗಳಿದ್ದು ಸ್ತ್ರೀ, ಪುರುಷ ಸಮಾನತೆಯನ್ನು ಹುಟ್ಟುಹಾಕಿ, ಕೆಳಜಾತಿಯವರಿಗೆ ಸ್ಥಾನಮಾನಗಳನ್ನು ತಂದುಕೊಟ್ಟ ಮಂಟೇದಯ್ಯ ಇಂದು ರಾಜಕೀಯ ಸಂಕೋಲೆಗಳಲ್ಲಿ ಸಿಲುಕಿ ಪೌರೋಹಿತ್ಯ ಜಾತಿಯಲ್ಲಿ ರೂಪಾಂತರವನ್ನು ಹೊಂದಿದ್ದಾರೆ ಎಂದೇ ಹೇಳಬಹುದು.

ಪಶುಪಾಲಕನಾಗಿ ಹುಟ್ಟಿ ಕಾಡುಗೊಲ್ಲರ ಜೀವನ ವಿಧಾನಕ್ಕೆ ಒಂದು ಬದ್ಧತೆಯನ್ನು ನಿರ್ಮಿಸಿದ ವೀರ ಜುಂಜಪ್ಪನಾಗಿದ್ದಾನೆ. ಜುಂಜಪ್ಪ ಜಾತಿ, ಕುಲ, ಮತಗಳಿಂದ ದೂರವಿದ್ದರೂ ತಮ್ಮ ಕುಲ ಕಸುಬುಗಳು, ಸೋದರ ಸಂಬಂಧಿಗಳೊಂದಿಗೆ ಉಂಟಾಗುವ ಕಲಹಗಳು ಜುಂಜಪ್ಪನ ಸ್ಥಿತ್ಯಂತರಕ್ಕೆ ಕಾರಣವಾಗುತ್ತಾರೆ. ಜುಂಜಪ್ಪ ಹುಟ್ಟಿನಿಂದಲೇ ಪಶುಪಾಲಕನಾಗಿ ವೃತ್ತಿ ಸಂಘರ್ಷವನ್ನು ಮಾಡುತ್ತಾನೆ. ಅಲ್ಲದೆ ಅನೇಕ ವಿಧಿಗಳನ್ನು ತನ್ನ ಸಮುದಾಯಕ್ಕೆ ವಿಧಿಸುವುದರ ಮೂಲಕ ಶೈವ ಸಂಪ್ರದಾಯಕ್ಕೆ ಮುಖ್ಯ ಸ್ಥಾನವನ್ನು ನೀಡುತ್ತಾನೆ ಎಂದೇ ಹೇಳಬಹುದು.

ಜುಂಜಪ್ಪ ಸಾಣೆಕೆರೆ, ಸೇಳೂರು ದೊರೆಗಳು, ಶ್ರೀಮಂತ ಪುಟ್ಟಣ್ಣ ಹಲವು ಪಾಳೆಗಾರರೊಂದಿಗೆ ಪಶು, ಹುಲ್ಲುಗಾವಲಿಗಾಗಿ ಹೋರಾಡುವುದು ಸಾಮಾಜಿಕ ಹಾಗೂ ರಾಜಕೀಯ ವಿಷಮತೆಗಳಿಂದ ಎಂದು ಹೇಳಬಹುದು, ಜುಂಜಪ್ಪನ ಸಮುದಾಯವು ಒಂದೇ ಭೂ ಪ್ರದೇಶಕ್ಕೆ ಬದ್ಧರಾಗಿ ಬದುಕಿದವರಲ್ಲಿ ಅಲೆಮಾರಿಗಳಂತೆ ಎಲ್ಲೆಲ್ಲೋ ಹುಲ್ಲು, ನೀರು ಸಿಗುತ್ತದೆಯೋ ಅಲ್ಲೆಲ್ಲ ಬಿಡಾರಗಳನ್ನು ನಿರ್ಮಿಸಿಕೊಂಡು ಜೀವಿಸುತ್ತಿದ್ದರು. ತನ್ನ ಮಾವರೊಂದಿಗಿನ ಸಂಘರ್ಷವು ಅವನ ಪಶುಪಾಲಕ ವೃತ್ತಿಯಲ್ಲಿ ಹೊಂದಿದ್ದ ಪ್ರೀತಿಯನ್ನು ಕಾಣಬಹುದು. ಜುಂಜಪ್ಪ ಬಡವನಾಗಿದ್ದರೂ ಸಹ ಆರ್ಥಿಕವಾಗಿ ಪ್ರಬಲವಾಗಿದ್ದ. ಪ್ರಭುತ್ವವಾದಿಗಳನ್ನು ಸೋಲಿಸಿದ ಜುಂಜಪ್ಪ ಸಾಮ್ರಾಜ್ಯಗಳ ಒಡೆತನವನ್ನು ಪಡೆದುಕೊಳ್ಳುತ್ತಾನೆ. "ರಾಜನಾದ ಜುಂಜಪ್ಪ ಮತ್ತು ರಾಜತ್ವದ ಯಥಾ ಸ್ಥಿತಿಯನ್ನು ಮುಂದುವರಿಸುವುದಿಲ್ಲ, ಬದಲಿಗೆ ಸಮಾಜಮುಖಿ ಕೆಲಸ ಕಾರ್ಯಗಳಿಗೆ ಮುಂದಾಗುತ್ತಾನೆ. ಸೋಳೂರಿನಲ್ಲಿ ಕೆರೆಯೊಂದನ್ನು ಕಟ್ಟಿಸುವ ಕಾಯಕ ಈ ಸಂಗತಿಯನ್ನು ಸರಿಯಾಗಿ ಸ್ಪಷ್ಟಪಡಿಸುತ್ತಾನೆ. ಪಶುಗಳನ್ನು ಸಾಕಿ ಸಲಹುತ್ತಾ ಹುಲ್ಲು–ನೀರಿಗಾಗಿ ಸಾಕಷ್ಟು ಕಷ್ಟಪಟ್ಟ ಸಮುದಾಯದ ಮನಸ್ಸೊಂದು ಕೆರೆಯ ನಿರ್ಮಾಣದಂತಹ ಕಾರ್ಯವನ್ನು ಕೈಗೆತ್ತಿಕೊಂಡದ್ದು ಅತ್ಯಂತ ಸಹಜವಾಗಿದೆ, ಇಂಥಲ್ಲಿ ದೊರೆಗಳನ್ನೇ ಕೆರೆ ಕಟ್ಟಲು ಹಚ್ಚಿದ್ದು ಗಮನಾರ್ಹವಾಗಿದ"[೪೨] ಜುಂಜಪ್ಪ ರಾಜನಾದರೂ ಸಹ ಸಮುದಾಯಗಳ ಒಳಗೆ ಒಳಾಡಳಿತ ನಡೆಸುತ್ತಿದ್ದ ಆರ್ಥಿಕ ಪ್ರಭುತ್ವಗಳನ್ನು ಸಂಪೂರ್ಣವಾಗಿ ನಾಶಗೊಳಿಸಿ ಮೇಲ್ವರ್ಗದ ರಾಜಕೀಯ

ತಂತ್ರಗಳನ್ನು ಮಟ್ಟಹಾಕುತ್ತಾನೆ. ಅಲ್ಲದೆ ಜುಂಜಪ್ಪ ತನ್ನ ಕುಲದವರೊಂದಿಗೆ ಸಂಘರ್ಷ ಮಾಡುವ ಮೂಲಕ ಹೊಸ ಸಾಂಸ್ಕೃತಿಕರಣಕ್ಕೆ ಬುನಾದಿ ಹಾಕುತ್ತಾನೆ. ಆದ್ದರಿಂದ ಜುಂಜಪ್ಪನು ಕಾಡುಗೊಲ್ಲರ ಸ್ಥಾಪಿತ ದೈವವಾಗುತ್ತಾನೆ.

ಮೈಲಾರಲಿಂಗನು ಜುಂಜಪ್ಪನಂತೆ ಕುಲಗಳ ಜೊತೆ ಸೋದರ ಸಂಬಂಧಗಳ ಜೊತೆ ಸಂಘರ್ಷ ನಡೆಸುವುದನ್ನು ಕಾಣಬಹುದು. ಆದರೆ ಮೈಲಾರನಿಗೆ ಒಂದು ನಿರ್ದಿಷ್ಟತೆ, ಒಂದೇ ಕುಲ, ಮತವೆಂಬ ಬದ್ಧತೆಯಿಲ್ಲ. ತನ್ನ ಒಕ್ಕಲು ಆಗಬೇಕೆಂದು ಬಯಸಿದ ಪ್ರತಿಯೊಂದು ಕುಲಗಳನ್ನು ಸಹ ಮೈಲಾರಲಿಂಗ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತಾನೆ. ಮೈಲಾರನನ್ನು ಕುರುಬರು, ಲಿಂಗಾಯಿತರು, ಬ್ರಾಹ್ಮಣರು, ಗೌಡಿ, ಗೊಲ್ಲ, ಬೇಡ, ಬೆಸ್ತ, ಲಂಬಾಣಿ, ಮುಸ್ಲಿಂ ಹೊಲೆಯ ಮಾದಿಗರು ಮೊದಲಾದವರು ಮೈಲಾರಲಿಂಗನ ಆರಾಧನೆ ಮಾಡುತ್ತಾರೆ. ಆದ್ದರಿಂದಲೇ ಮೈಲಾರ ಒಂದೊಂದು ಕುಲ, ಜಾತಿ, ಸಮುದಾಯಗಳಲ್ಲಿ ಸಂಸ್ಕೃತಿಕರಣಗೊಳ್ಳುತ್ತಾ ಹೋಗುತ್ತಾನೆ. ಆದ್ದರಿಂದಲೇ "ಮೈಲಾರನು ಇಂದಿಗೂ ಸಾಂಸ್ಕೃತಿಕ ವೀರನೂ ಅಲ್ಲದೆ ದೈವವೂ ಅಲ್ಲದ ಅರೆದೈವವಾಗಿದ್ದಾನೆ. ಕೆಲವೆಡೆ ಕುರುಬರು, ಬೆಸ್ತ ಅಂಬಿಗರು, ಮಹಾರಾಷ್ಟ್ರದಲ್ಲಿ ಕೋಳಿ ಜನಾಂಗ ಪೂಜಾರಿಕೆಯನ್ನು ವಹಿಸಿದ್ದರೆ ದೇವರಗುಡ್ಡದಂತಹ ಇನ್ನು ಹಲವು ಕ್ಷೇತ್ರಗಳಲಿ ಬ್ರಾಹ್ಮಣ ಪೌರೋಹಿತ್ಯ ಇದೆ. ವೀರಶೈವ ಬ್ರಾಹ್ಮರು ಮೈಲಾರನನ್ನು ತಮ್ಮ ಕುಲದೈವತೆಯನ್ನಾಗಿ ಮಾಡಿಕೊಂಡಿದ್ದಾರೆ. ಮುಸಲ್ಮಾನರು ಮೈಲಾರನನ್ನು ಮಲ್ಲುಖಾನ, ಅಜಮಲ್ ಖಾನ ಎಂದೇ ಪೂಜಿಸುತ್ತಾರೆ, ಹಾಗಾಗಿ ಮೈಲಾರ ಹಲವು ಕುಲಜಾತಿ ವರ್ಗಗಳ ಪರಿವಾರವನ್ನು ಗಳಿಸಿಕೊಂಡಿರುವ ದೇವತೆಯೆಂದೇ ಭಾವಿಸಬೇಕು"೩ ಆದರೂ ಕುರುಬರು ಮೈಲಾರನ ಕಾವ್ಯವನ್ನೇ ಹಾಡುತ್ತಾರೆ. ಗೊರವರು ಮೈಲಾರನ ಕ್ಷೇತ್ರದಲ್ಲಿ ಕಾರ್ಣಿಕವನ್ನು ನುಡಿಯುತ್ತಾರೆ. ಇದು ಈ ಸಮುದಾಯಕ್ಕೆ ಮಾತ್ರ ಸೇರಿದೆ. ಮೈಲಾರ ಕುಲ ಜಾತಿಗಳ ಜೊತೆ ಸಂಘರ್ಷ ಮಾಡುವುದಕ್ಕಿಂತ ಆರ್ಥಿಕವಾಗಿ ಉತ್ಪಾದನೆಯ ಮೇಲೆ ಒಡೆತನ ಸಾಧಿಸಿದ ಸಮುದಾಯಗಳ ವಿರುದ್ಧ ತಮ್ಮ ಸಮುದಾಯದ ಅಸ್ತಿತ್ವ ನಿರ್ಮಿಸುತ್ತಾನೆ. ಅದಕ್ಕಾಗಿ ಅವನು ಆಯ್ದುಕೊಂಡ ದಾರಿ ವಿವಾಹ, ಶ್ರೀಮಂತ ವ್ಯಾಪಾರಿಗಳ ಮಕ್ಕಳಾದ ಗಂಗಿಮಾಳಮ್ಮ ಮತ್ತು ಕೋಮಾಲಿಯರನ್ನು ವಿವಾಹವಾಗುವುದರ ಮೂಲಕ ಆರ್ಥಿಕತೆಯಲ್ಲಿ ನಡೆಯುತ್ತಿದ್ದ ಒಳಾಡಳಿತವನ್ನು ಹತ್ತಿಕ್ಕುತ್ತಾನೆ.

**ಕೊನೆಟಿಪ್ಪಣಿ**

೧. ಕೇಶವನ್ ಪ್ರಸಾದ್ ಕೆ. ಮಲೆಮಾದೇಶ್ವರ ಕಾವ್ಯ. ೧೯೯೭, ಪು.ಸಂ–೨೭

೨. ಅದೇ ಪುಸ್ತಕ.ಪು.ಸಂ–೭೪

೩. ಅದೇ ಪುಸ್ತಕ, ಪು.ಸಂ–೩೨೭

೪. ಬೋರಲಿಂಗಯ್ಯ ಹಿ.ಚಿ. ಕ್ರರ್ನಾಟಕ ಜನಪದ ಮಹಾಕಾವ್ಯ ಮೀಮಾಂಸೆ ಮತ್ತು ತಾತ್ವಿಕತೆ, ೨೦೧೮, ಪು.ಸಂ–೬೪

೫. ಬೋರಲಿಂಗಯ್ಯ.ಹಿ.ಚಿ. ದೇಸಿ ಕನ್ನಡ ಪರಂಪರೆ, ೨೦೧೬, ಪು.ಸಂ–೨೫೦

೬. ಪಿ.ಕೆ. ರಾಜಶೇಖರ್. ಮಲೆಮಾದೇಶ್ವರ ಕಾವ್ಯ, ಸಂ–೧, ೨೦೦೬, ಪು.ಸಂ–೫೪೯

೭. ಬೋರಲಿಂಗಯ್ಯ ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ–೩೭೨

೮. ಅದೇ ಪುಸ್ತಕ. ಪು.ಸಂ–೪೯೦

೯. ಅದೇ ಪುಸ್ತಕ. ಪು.ಸಂ–೭೨೬

೧೦. ಅದೇ ಪುಸ್ತಕ. ಪ್ರಸ್ತಾವನೆ, ಪು.ಸಂ–೨೭

೧೧. ಮೈತ್ರಿ.ಕೆ.ಎಂ. ಕೃಷ್ಣಗೊಲ್ಲರ ಕಥನ ಕಾವ್ಯಗಳು, ೧೯೯೬, ಪು.ಸಂ–೨

೧೨. ಚಲುವರಾಜು, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ–೧೦೫

೧೩. ಅದೇ ಪುಸ್ತಕ.ಪು.ಸಂ–೨೦೦

೧೪. ಮಂಜುನಾಥ ಬೇವಿನಕಟ್ಟಿ, ಮೈಲಾರಲಿಂಗನಕಾವ್ಯ, ೧೯೯೯, ಪು.ಸಂ–೩೦೫

೧೫. ಅದೇ ಪುಸ್ತಕ, ಪು.ಸಂ–೩೬೩, ೩೬೪

೧೬. ಅದೇ ಪುಸ್ತಕ, ಪು.ಸಂ–೩೭೦

೧೭. ಗಂಗಾಧರ ದೈವಜ್ಞ, ಮಾಳಿಂಗರಾಯನ ಕಾವ್ಯ, ೧೯೯೯, ಪು.ಸಂ–೨೮

೧೮. ಅದೇ ಪುಸ್ತಕ. ಪು.ಸಂ–೩೯

೧೯. ಪ್ರಭಾಕರ್.ಎ.ಎಸ್. ಮ್ಯಾಸಬೇಡರ ಕಥನಗಳು, ೧೯೯೯, ಪು.ಸಂ–೧೨

೨೦. ರಾಜಶೇಖರ್ ಪಿ.ಕೆ. ಮಲೆಮಾದೇಶ್ವರ ಕಾವ್ಯ, ಸಂಪುಟ–೧, ೨೦೦೬, ಪು.ಸಂ–೭೩೬, ೭೩೭

೨೧. ಬೋರಲಿಂಗಯ್ಯ ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ–೨೭೮

೨೨. ಅದೇ ಪುಸ್ತಕ. ಪು.ಸಂ–೩೧೪

೨೩. ಅದೇ ಪುಸ್ತಕ. ಪು.ಸಂ–೩೭೮

೨೪. ಅದೇ ಪುಸ್ತಕ. ಪ್ರಸ್ತಾವನೆ

೨೫. ಪರಮಶಿವಯ್ಯ. ಜೀ.ಶಂ. ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ೧೯೭೯ ಪು.ಸಂ–೧೪೮

೨೬. ಪುರುಷೋತ್ತಮ ಬಿಳಿಮಲೆ. ಕೂಡುಕಟ್ಟು, ೧೯೯೩, ಪು.ಸಂ–೨೯೧

೨೭. ಚಲುವರಾಜು, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ–೩೪೮

೨೮. ಅದೇ ಪುಸ್ತಕ. ಪು.ಸಂ–೩೯

೩೦. ಅದೇ ಪುಸ್ತಕ. ಪು.ಸಂ-೪೩೩

೩೧. ಅದೇ ಪುಸ್ತಕ. ಪು.ಸಂ-೬೧೨

೩೨. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ, ೨೦೦೦, ಪು.ಸಂ-೯೪

೩೩. ಲಕ್ಷ್ಮಿ ನರಸಮ್ಮ, ಕನ್ನಡ ಜನಪದ ಮಹಾಕಾವ್ಯಗಳು ಒಂದು ತೌಲನಿಕ ಅಧ್ಯಯನ, ೨೦೧೦ ಪು.ಸಂ-೨೧೭

೩೪. ಬೋರಲಿಂಗಯ್ಯ ಹಿ.ಚಿ., ದೇಸಿಕನ್ನಡ ಪರಂಪರೆ, ೨೦೧೬, ಪು.ಸಂ-೨೪೯

೩೫. ಚಲುವರಾಜು, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೧೦೫,

೩೬. ಅದೇ ಪುಸ್ತಕ. ಪು.ಸಂ-೪೬, ೪೭

೩೭. ಮಂಜುನಾಥ ಬೇವಿನಕಟ್ಟೆ, ಮೈಲಾರಲಿಂಗನ ಕಾವ್ಯ, ೧೯೯೯, ಪು.ಸಂ-೩೦೫

೩೮. ಬೋರಲಿಂಗಯ್ಯ. ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ-೨೫೩

೩೯. ಗಂಗಾಧರ ದೈವಜ್ಞ, ಮಾಳಿಂಗರಾಯನ ಕಾವ್ಯ, ೧೯೯೯, ಪು.ಸಂ-೭೭,೭೮

೪೦. ಚಲುವರಾಜು, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೩೩೭,

೪೧. ತೀ.ನಂ. ಶಂಕರನಾರಾಯಣ, ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪು.ಸಂ-೭೮, ೭೯.

೪೨. ಲಕ್ಷ್ಮಿ ನರಸಮ್ಮ, ಕನ್ನಡ ಜನಪದ ಮಹಾಕಾವ್ಯಗಳು ಒಂದು ತೌಲನಿಕ ಅಧ್ಯಯನ, ಪು.ಸಂ-೨೨೬, ೨೦೧೦

೪೩. ಮಂಜುನಾಥ ಬೇವಿನಕಟ್ಟೆ, ಮೈಲಾರಲಿಂಗನ ಕಾವ್ಯ, ೧೯೯೯, ಪು.ಸಂ-೩೦೫,

೪೪. ನಿಂಗಪ್ಪ ಮುದೇನೂರು, ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ೨೦೦೪, ಪು.ಸಂ-೧೧೬,

೪೫. ಮುತ್ತಯ್ಯ. ಎಂ.ಎಸ್. ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿ ಸಂಸ್ಕೃತಿ, ೨೦೦೮, ಪು.ಸಂ-೧೩೫.

೪೬. ನಿಂಗಪ್ಪ ಮುದೇನೂರು, ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ೨೦೦೪, ಪು.ಸಂ-೯೬

## ಅಧ್ಯಾಯ : ಐದು

## ಅಲೆಮಾರಿ ಸಮುದಾಯಗಳ ಮೌಖಿಕ ಸಾಹಿತ್ಯದಲ್ಲಿ ಚಾರಿತ್ರಿಕ ವಿವೇಚನೆ

೫.೧. ಮೌಖಿಕ ಕಾವ್ಯಗಳಲ್ಲಿ ಲಿಂಗಸಂಬಂಧಿ ಸಾಂಸ್ಕೃತಿಕ ನೆಲೆಗಳು

೫.೨. ಆಚರಣೆಗಳು ಮತ್ತು ಸ್ತ್ರೀ ದೇವತೆಗಳು

೫.೩. ಮಹಾಕಾವ್ಯಗಳಲ್ಲಿನ ನಾಯಕಿರಯರು

೫.೪. ಧರ್ಮ ಸಂಬಂಧಿ ನೆಲೆಗಳು ಮತ್ತು ಲಿಂಗಸಂಬಂಧಗಳು

# ಅಧ್ಯಾಯ : ಐದು

# ಮೌಖಿಕ ಮಹಾಕಾವ್ಯ ಸಾಂಸ್ಕೃತಿಕ ಮತ್ತು ಧಾರ್ಮಿಕ ನೆಲೆಗಳು

## ೫.೧ ಮೌಖಿಕ ಕಾವ್ಯಗಳಲ್ಲಿ ಲಿಂಗಸಂಬಂಧಿ ಸಾಂಸ್ಕೃತಿಕ ನೆಲೆಗಳು

ಸಂಸ್ಕೃತಿ ಎನ್ನುವುದು ಕನ್ನ ನಾಡಿನ ಅವಿಭಾಜ್ಯ ಅಂಗವಾಗಿದೆ. ಸಂಸ್ಕೃತಿ ಇಂದು ನೆನ್ನೆಯದಲ್ಲ, ಅದಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಮನುಷ್ಯ ತನ್ನ ಬದುಕಿಗಾಗಿ ಪ್ರಕೃತಿಯನ್ನು ಆರಾಧಿಸತೊಡಗಿದನೋ ಅಂದಿನಿಂದಲೇ ಸಂಸ್ಕೃತಿ ನೆಲೆಗೊಂಡಿತು."ಮಾನವ ಜೀವನ ವಿಧಾನವೇ ಸಂಸ್ಕೃತಿ ಎಂದು ಸಂಸ್ಕೃತಿ ತಜ್ಞ ಹರ್ಸ್ಕೋವಿಟ್ ಹೇಳಿದ್ದಾರೆ"[೧] ಸಂಸ್ಕೃತಿ ನಿಂತ ನೀರಾಗಿರದೆ ನಿತ್ಯ ಚಲನಶೀಲವಾಗಿದೆ. ಮಾನವ ಬೌದ್ಧಿಕ ಮತ್ತು ಭೌತಿಕವಾಗಿ ವಿಕಾಸವಾದಂತೆಲ್ಲಾ ಸಂಸ್ಕೃತಿ ವಿಕಾಸವಾಗುತ್ತಾ ಹೋಯಿತು. ಪ್ರತಿಯೊಂದು ಕಾಲಘಟ್ಟದಲ್ಲಿ ಸಂಸ್ಕೃತಿ ಒಂದೇ ರೀತಿಯದಾಗಿರುವುದಿಲ್ಲ. ಅದು ಮಾನವನ ವಿಕಾಸವನ್ನು ಅವಲಂಬಿಸಿರುತ್ತದೆ. ಮನುಷ್ಯ ತನ್ನ ಪ್ರಜ್ಞ ಶಕ್ತಿಯಿಂದ ಆಲೋಚಿಸ ತೊಡಗಿದಾಗ ಕಾಡು ಜೀವನದಿಂದ ನಾಡು ಜೀವನಕ್ಕೆ ಹೆಜ್ಜೆ ಇಟ್ಟಿದ್ದಾನೆ. ಹಾಗಾಗಿ ಸಂಸ್ಕೃತಿಯ ನೆಲೆಗಳು ಆಯಾ ಕಾಲಘಟ್ಟದಲ್ಲಿ ಬದಲಾಗತೊಡಗಿದವು.

ಸಂಸ್ಕೃತಿಯ ನೆಲೆಗಳು ಮಾನವನ ಬದುಕಿನ ಆಧುನಿಕ ಕಾಲದಿಂದ ಪ್ರಾರಂಭವಾಗಿ ಪ್ರಸ್ತುತ ಕಾಲದವರೆಗೂ ಗುರುತಿಸಬಹುದು. ಇಲ್ಲಿ ಸಂಸ್ಕೃತಿ ಬದಲಾವಣೆಗೆ ಮನುಷ್ಯನೇ ಕೇಂದ್ರವಾಗಿದ್ದಾನೆ. ಆತನ ಸುತ್ತಾ ಹೆಣೆದಿರುವ ಬದುಕಿನ ವಸ್ತುವೇ ಸಂಸ್ಕೃತಿ ಆಗುತ್ತದೆ. ಮುಂದೆ ಸಂಸ್ಕೃತಿ ಜಾತಿ, ಜನಾಂಗ, ಸಮುದಾಯಗಳ ಮೂಲಕ ಬೇರೆ ಬೇರೆ ಸ್ವರೂಪಗಳಲ್ಲಿ ಪಡೆದುಕೊಳ್ಳುತ್ತದೆ. ಹನ್ನೆರಡನೆ ಶತಮಾನದಲ್ಲಿದ್ದ ಬಸವಯುಗದ ಶರಣರು ವೃತ್ತಿ, ಜಾತಿ, ಕಸುಬು, ಸಂಪ್ರದಾಯಗಳಿಂದಾಗಿ ಮೇಲು, ಕೀಳು, ಬಡವ, ಬಲ್ಲಿದ, ಎಂಬ ಬೇದ ಉಂಟಾಗಿತ್ತು. ಆ ಸಮಯದಲ್ಲಿ ಬಸವಾದಿ ಶರಣರು ಕಾಯಕದಿಂದ ದಾಸೋಹ ಮಾಡಿದ ಸಾಮಾಜಿಕ ಸಾಮರಸ್ಯ, ಸ್ವಾಸ್ಥ್ಯ ನೆಲೆಗೊಳ್ಳುತ್ತದೆ ಎಂಬ ಸಂದೇಶ ಸಾರುವುದರೊಂದಿಗೆ ಜನರಲ್ಲಿ ನೈತಿಕ ಮೌಲ್ಯಗಳನ್ನು ತಂದರು. ಕೆಳವರ್ಗದವರಲ್ಲಿ ಆತ್ಮವಿಶ್ವಾಸ ಮೂಡಿಸಿ ವರ್ಣಾಶ್ರಮ ಪದ್ಧತಿಗೆ ಕಡಿವಾಣ ಹಾಕಿದರು. ಈ ಸಮಯದಲ್ಲಿ ಬಸವಾದಿ ಶರಣರು ಕೆಳವರ್ಗದವರಿಂದ ಉತ್ಕೃಷ್ಟ ಕಾವ್ಯ ರಚನೆಗೆ ಮೂಲಕಾರಣರಾದರು.

ಹನ್ನೆರಡನೆ ಶತಮಾನದ ಶರಣ ಚಳುವಳಿಯಲ್ಲಿ ನಡೆದ ವರ್ಣಸಂಕರದಿಂದ ಕೆಳಜಾತಿಗಳ ಪರಿಸ್ಥಿತಿ ತುಂಬಾ ಹದಗೆಟ್ಟಿತು. ಆಗ ಅವರೆಲ್ಲಾ ಒಗ್ಗಾಟ್ಟಾಗಿ ಅನೇಕ ಆಂದೋಲನಗಳನ್ನು ನಡೆಸಿದರು. ಆದರೆ ಮೇಲ್ವರ್ಗದವರ ಕೈವಾಡದಿಂದ ಎಲ್ಲಾ ಚಳುವಳಿಗಳು ವಿಫಲವಾದವು. ನಂತರ ಕರ್ನಾಟಕ ಇತಿಹಾಸದಲ್ಲಿ ಮತ್ತೆ ವರ್ಣಗಳ ನಡುವೆ ಕಲಹ ಉಂಟಾಯಿತು. ಬಸವಣ್ಣ, ಅಲ್ಲಮ, ಚನ್ನಬಸವಣ್ಣ, ಹರಳಯ್ಯ, ಕಕ್ಕಯ್ಯಾದಿಗಳ ನಂತರ ಮೇಲ್ವರ್ಗಕ್ಕೆ ಸೇರಿದ ಶರಣರು ಕಾವ್ಯಗಳ ರಚನೆಗೆ ತೊಡಗಿದರು. ಇದು ಕೆಳವರ್ಗದ ಜನರಿಗೆ ಅರ್ಥವಾಗಲಿಲ್ಲ ಹಾಗೂ ಮೇಲ್ವರ್ಗದವರು ತಮಗೆ ಅನುಕೂಲವಾಗುವಂತ ಭಾಷೆ, ಭಾವನೆ, ಅನುಕೂಲಗಳಿಗೆ ತಕ್ಕಂತೆ ತಮ್ಮದೇ ಆದ ಕಟ್ಟುಪಾಡುಗಳನ್ನು ನಿರ್ಮಿಸಿಕೊಂಡು ಕಾವ್ಯ ರಚಿಸತೊಡಗಿದರು. ಇದರಿಂದ ಬೇಸತ್ತ ಕೆಳವರ್ಗದ ಜನರು ನಿರಾಶರಾಗಿ ತಮ್ಮ ದಾರಿಗಳನ್ನು ಹಿಡಿದರು. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಸಮುದಾಯಗಳು ತಮ್ಮದೇ ಆದ ವಿಶಿಷ್ಟ ಸಂಪ್ರದಾಯ, ವಿಧಿ ವಿಧಾನಗಳನ್ನು ರೂಪಿಸಿಕೊಂಡರು. ಅವು ಉಗಮವಾದಗಿನಿಂದ ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡು ಬಂದಿವೆ. ಪ್ರತಿಯೊಂದು ಸಮುದಾಯವು ತಮ್ಮ ಮೂಲದ ಬಗ್ಗೆ, ಪುರಾಣ, ಐತಿಹ್ಯ, ಐತಿಹಾಸಿಕ ಅಂಶಗಳನ್ನು ನೀಡುವುದರೊಂದಿಗೆ ಅವುಗಳ ರಚನೆ, ಸಂಪ್ರದಾಯ, ಧಾರ್ಮಿಕ ವಿಧಿ ವಿಧಾನಗಳು, ಪವಾಡಗಳು, ಹಬ್ಬ, ಉತ್ಸವ, ಜಾತ್ರೆಗಳು ಹೇಗೆಲ್ಲ ನಡೆಯುತ್ತವೆ ಎಂಬುದನ್ನು ತಿಳಿಸುತ್ತವೆ.

ಬಸವಾದಿ ಶರಣರ ಚಳುವಳಿಯ ನಂತರ ಶೋಷಣೆಗೆ ಒಳಗಾದ ಜನರ ರಕ್ಷಣೆಗೆ ಸಾಂಸ್ಕೃತಿಕ ನಾಯಕರ ಆಗಮನವಾಗಬೇಕಾಯಿತು. ಮಾದೇಶ್ವರ, ಮಂಟೇಸ್ವಾಮಿ, ಮೈಲಾರ, ಜುಂಜಪ್ಪ, ಇವರೆಲ್ಲ ಬಸವಾದಿ ಅಲ್ಲಮಾದಿಗಳ ಕಾಲಕ್ಕೆ ಸೇರಿದವರೆಂದು ಹೇಳಬಹುದು. ಆದರೆ ಇದಕ್ಕೆ ಯಾವುದೇ ಆಧಾರಗಳು ಇಲ್ಲ. ಆದರೆ ಮೌಖಿಕ ಕಾವ್ಯಗಳಲ್ಲಿ ಬಸವಣ್ಣ,ಅಲ್ಲಮರ ಕಥಾ ಭಾಗಗಳು ಕಂಡುಬರುತ್ತವೆ. ಆದ್ದರಿಂದ ಇವರ ಕಾಲವನ್ನು "ಸುಮಾರು ಹನ್ನೆರಡನೇ ಶತಮಾನದಿಂದ ೧೫ನೇ ಶತಮಾನದ ಮಧ್ಯಭಾಗವಿರಬಹುದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ."[೨] ವೀರಶೈವ ಧರ್ಮದ ಸಂಸ್ಕೃತಿಯ ವಿರುದ್ಧ ಕೆಳವರ್ಗದ ನಾಯಕರು ಹೋರಾಡತೊಡಗಿದರು. ಅದರ ಫಲಿತವೇ ಅನೇಕ ಸಾಂಸ್ಕೃತಿಕ ನಾಯಕರು ಹುಟ್ಟಿಕೊಂಡರು.

"ಇಲ್ಲಿ ಕೆಳವರ್ಗದ ಜನ ಲಿಂಗ ಧರಿಸಿ ಶರಣರಾದಾಗ ಮಾಂಸ, ಮಧ್ಯ, ಇತ್ಯದಿ ಜನಪ್ರಿಯ ವಿಚಾರಗಳನ್ನು ತೊರೆದವರು. ಹಲವು ಕಟ್ಟುಪಾಡುಗಳನ್ನು ಹಾಕಿಕೊಳ್ಳುವ ಮೂಲಕ ತಮ್ಮನ್ನು ತಾವು ನಿಯಂತ್ರಿಸಿಕೊಂಡು ಒಂದು ಬಂಧನದ ಗೆರೆಗೆ ಒಳಪಟ್ಟರು, ಇದು ತಾತ್ಕಾಲಿಕ ಕಟ್ಟುಪಾಡಾಗಿತ್ತೆಂಬುದನ್ನು ಅಂದಿನ ಇತಿಹಾಸದಿಂದ ತಿಳಿಯಬಹುದು. ಕೆಳವರ್ಗದ ಜನ ಎಂದೂ ಮಾಂಸ ಮದ್ಯ.ಭಂಗಿ, ಮೈಥುನಗಳಿಂದ ಚೈತನ್ಯದಾಯಕ ವಿಚಾರಗಳನ್ನು ತ್ಯಜಿಸಿದವರಲ್ಲ. ಅಥ ಕಟ್ಟುಪಾಡುಗಳಿಂದ ಸಿಡಿದು ಹೊರಬಂದ ಸಂಕೇತ ಮೂರ್ತಿಗಳೇ ಮದೇಶ್ವರ, ಮಂಟೇಸ್ವಾಮಿಗಳಿರಬಹುದೇನೋ. ಹೆಂಡ, ಮಾಂಸ, ಭಂಗಿಗಳನ್ನು ಸದಾ ಸೇವಿಸುತ್ತಾ ಭೈರಾಗಿಗಳಂತೆ ಕಾಡು ಮೇಡುಗಳನ್ನು ಸುತ್ತುತ್ತಾ ಎಲ್ಲೆಂದರಲ್ಲಿ ಇದ್ದು ಜಾಗಸಿಕ್ಕಲ್ಲಿ ಮಲಗಿ ಭಕ್ತರ ಮನೆಯಲ್ಲಿ

ಉಂಡು ತಿಂದು ಸಾಮಾನ್ಯ ಜನರ ಮನ ಗೆದ್ದ ನಾಯಕರಿವರಾಗಿದ್ದಾರೆ."[೩] ಮೌಖಿಕ ಕಾವ್ಯಗಳಲ್ಲಿ ಬರುವ ಸಾಂಸ್ಕೃತಿಕ ವೀರರು ದಟ್ಟಾರಣ್ಯದಿಂದ ಬಂದವರಾಗಿದ್ದು, ಅಲ್ಲಿಂದಲೇ ಅವರ ಸಂಸ್ಕೃತಿಯ ಹರವು ಕಥೆಯಾಗಿ ರೂಪುಗೊಂಡು ಅವರವರ ಜನಾಂಗಗಳ ಮೇಲೆ ಬೆಳಕು ಚೆಲ್ಲುತ್ತದೆ. ಮಾದೇಶ್ವರ, ಮಂಟೇಸ್ವಾಮಿ,ಮೈಲಾರಲಿಂಗ, ಜುಂಜಪ್ಪ, ಮಾಳಿಂಗರಾಯರು ಪವಾಡಗಳನ್ನು ಮಾಡಿ ತಮ್ಮದೇ ಆದ ಒಕ್ಕಲು ಪಡೆಯುವುದರ ಮೂಲಕ ನಿರ್ದಿಷ್ಟ ಸಾಂಸ್ಕೃತಿಕ ನೆಲೆಯನ್ನು ಕಂಡುಕೊಳ್ಳುತ್ತಾರೆ.

ಮೌಖಿಕ ಕಾವ್ಯಗಳಲ್ಲಿಯ ನಾಯಕರು ಪುರಾಣ ಮತ್ತು ಐತಿಹ್ಯಗಳನ್ನು ಒಳಗೊಳ್ಳುವ ಮೂಲಕ ತಮ್ಮದೇ ಸಾಂಸ್ಕೃತಿಕ ನೆಲೆಯಲ್ಲಿ ಚಾರಿತ್ರಿಕ ವ್ಯಕ್ತಿಗಳಾಗಿ ನಿಲ್ಲುತ್ತಾರೆ."ಒಂದು ಸಮುದಾಯದ ತನ್ನ ಸಂಸ್ಕೃತಿಕ ವೀರನನ್ನು ಒಂದು ಸಲ ಪುರಾಣ ವ್ಯಕ್ತಿಯನ್ನಾಗಿ ಅಥವಾ ದೈವವನ್ನಾಗಿ ಚಿತ್ರಿಸಿದ ಮೇಲೆ ಅಥವಾ ಒಪ್ಪಿದ ಮೇಲೆ ಅವನನ್ನು ಯವ ಕಾರಣಕ್ಕೂ ಮನುಷ್ಯ ಸಹಜ ರೂಪದಲ್ಲಿ ನೋಡುವುದಕ್ಕೆ ಆ ಸಮುದಾಯ ಒಪ್ಪುವುದಿಲ್ಲ. ಬೇರೊಂದು ಸಂಸ್ಕೃತಿ ಅವನನ್ನು ಮನುಷ್ಯ ಸಹಜ ರೂಪದಲ್ಲಿ ನೋಡಿದರೆ ಸಹಿಸುವುದಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಪೌರಾಣಿಕ ವ್ಯಕ್ತಿಗಳನ್ನು ಚಾರಿತ್ರಿಕ ವ್ಯಕ್ತಿಗಳನ್ನಾಗಿ ರೂಪಿಸುವ ಮತ್ತು ಚಾರಿತ್ರಿಕ ವ್ಯಕ್ತಿಗಳನ್ನು ಪೌರಾಣಿಕ ವ್ಯಕ್ತಿಗಳಾಗಿ ರೂಪಿಸುವ ಸಂಪ್ರದಾಯ ಕಂಡುಬರುತ್ತದೆ."[೪] ಹಾಗೇ ರೂಪಿಸಿದ ನಾಯಕರು ತಮ್ಮ ಆಚರಣೆ, ಪೂಜೆಗಾಗಿ ಪ್ರತ್ಯೇಕವಾದ ಸಮುದಾಯಗಳನ್ನು ಒಕ್ಕಲುಗಳಾಗಿ ನೇಮಿಸಿಕೊಳ್ಳುತ್ತಾರೆ. ಈ ಪರಂಪರೆ ಆ ಸಮುದಾಯ ಇರುವವರೆಗೂ ತಲಾತಲಾಂತರದವರೆಗೂ ಮುಂದುವರೆಸಿಕೊಂಡು ಹೋಗುತ್ತದೆ.

ಮಲೆಮಾದೇಶ್ವರ ಒಬ್ಬ ಸಾಂಸ್ಕೃತಿಕ ಯೋಧನಾಗಿದ್ದು ದಕ್ಷಿಣ ಕರ್ನಾಟಕ ಪ್ರದೇಶದ ಸಾಂಸ್ಕೃತಿಕ ಸಾಮ್ರಾಜ್ಯದ ಅಧಿಪತಿಯಾಗಿದ್ದಾನೆ. ಉತ್ತರದೇಶದಲ್ಲಿ ಎಲ್ಲೊ ಹುಟ್ಟಿ ಕತ್ತಲರಾಜ್ಯದಲ್ಲಿ ಬೆಳದು ಕರ್ನಾಟಕದ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಕಾವೇರಿ ನದಿ ಆಚೆಗಿನ ಕರ್ನಾಟಕ ಮತ್ತು ತಮಿಳ್‌ನಾಡು ಗಡಿ ಪ್ರದೇಶದ ವಿಸ್ತಾರ ಮಲೆ ಸಾಲುಗಳಲ್ಲಿನ ನಡುಮಲೆಯಲ್ಲಿ ನಿಂತ ಮಾದಪ್ಪನು ಸಾಂಸ್ಕೃತಿಕ ಕಥನವನ್ನು ಅವರ ಪರಂಪರೆಯಿಂದ ಬಂದ ದೇವರ ಗುಡ್ಡರು ಕಂಠಸ್ಥ ಮಾಡಿಕೊಂಡು ಹತ್ತಾರು ರಾತ್ರಿಗಳವರೆಗೆ ವಿಸ್ತಾರವಾಗಿ ಹಾಡುತ್ತಾ ಕೇಳುಗರನ್ನು ಮೈಮರೆಸುವಷ್ಟು ರೋಚಕವಾಗಿದೆ.

ಮಲೆಮಾದೇಶ್ವರ ಹಿಂದುಳಿದ ವರ್ಗದ, ಸಮಾಜದ ಸಾಂಸ್ಕೃತಿಕ ಪುರುಷನಾಗಿದ್ದಾನೆ. ಕರ್ನಾಟಕದಲ್ಲಿ ಹೆಚ್ಚು ಆರಾಧ್ಯ ಪುರುಷನಾಗಿದ್ದು ತನ್ನ ಅಸಾಧಾರಣ ಪವಾಡಗಳಿಂದ ಮೆರೆದು 'ದುಷ್ಟ ಶಿಕ್ಷಣ, ಶಿಷ್ಟ ರಕ್ಷಣ' ಎಂಬ ಸಂದೇಶವನ್ನು ಸಾರಿದ್ದಾನೆ. ಮಾದೇಶ್ವರನ ಸಾಂಸ್ಕೃತಿಕ ನೆಲೆ ಮಹತ್ವಪೂರ್ಣವಾಗಿದ್ದು ದೇವಾಲಯದ ಪಕ್ಕದಲ್ಲಿ ಅಂತರಗಂಗೆ ಇದೆ. ಆಲಂಬಾಡಿ ಜುಂಜೇಗೌಡ ತನ್ನ ಹಸುಗಳ ಕಾಯಿಲೆ ವಾಸಿಯಾದರೆ ಉರಿಗದ್ದುಗೆಯನ್ನು ಕಟ್ಟಿಸುತ್ತೇನೆ ಎಂದು ಮಾದೇಶ್ವರನಲ್ಲಿ ಹರಕೆ ಕಟ್ಟಿಕೊಂಡುದುದರ ಫಲವಾಗಿ ಮಾದೇಶ್ವರ ಒಂದು ಬಂಡೆಯನ್ನು ಕಾಲಿನಿಂದ ಒದೆದಾಗ ನೀರು ಚಿಮ್ಮುತ್ತ ಅದೇ ಅಂತರಗಂಗೇ ಎಂದು ಹೆಸರಾಯಿತು. ಎಂಬ ಪ್ರತೀತಿ ಇಂದಿಗೂ ಇದೆ.

ಮಾದೇಶ್ವರನ ದೇವಾಲಯಕ್ಕೆ ಸ್ವಲ್ಪ ದೂರದಲ್ಲಿ ಜಡೇಕಲ್ಲು ಇದೆ. ಇದು ಮಾದೇಶ್ವರನು ಸ್ನಾನ ಮಾಡಿ ತಮ್ಮ ಜಡೆಯನ್ನು ಒರಿಸಿಕೊಂಡು ಬಿಸಿಲು ಕಾಯಿಸುತ್ತಿದ್ದ ಸ್ಥಳ ಎಂದು ಹೇಳುವರು. ಮಾದೇಶ್ವರ ದೇವಾಲಯದ ಎದುರು ಇರುವ ಬೆಟ್ಟ ಎದುರುಬೋಳಿ (ಎದುರು ಬೆಟ್ಟ), ಇದಕ್ಕೆ ಈಶ್ರ ಗುಡ್ಡ ಎಂತಲೂ ಕರೆಯುತ್ತಾರೆ. ಜಾತ್ರೆಯ ಸಮಯದಲ್ಲಿ ಮಾದೇಶ್ವರ ಈ ಗುಡ್ಡದ ಮೇಲೆ ನಿಂತು ಪರುಸೆ ನೋಡುತ್ತಾನೆ ಎಂದು ಅಲ್ಲಿನ ಜನ ನಂಬುತ್ತಾರೆ. "ದೇವಾಲಯಕ್ಕೆ ಸುಮಾರು ಒಂದು ಕಿ.ಮೀ.ದೂರದಲ್ಲಿ ಸಾಲೂರು ಮಠವಿದೆ. ಇದು ವೀರಶೈವನ ಮಠ, ರಾಯಣ್ಣನ ಮನೆತನದವರು, ಕಾಡು ಸೋಲಿಗರು, ಕುರುಬರು ದೇವರ ಗುಡ್ಡಗಳೇ ಮೊದಲಾದವರು ಜಾತಿ ಭೇದವಿಲ್ಲದೆ ಈ ಮಠಕ್ಕೆ ಸೇವೆಯಲ್ಲಿ ಸುತ್ತಾ ಬಂದಿದ್ದಾರೆ."[೫] ನಾಗಮಲೆ ಬೆಟ್ಟದ ಪೂರ್ವ ದಿಕ್ಕಿಗೆ ೧೮ ಕಿ.ಮೀ ದೂರದಲ್ಲಿ ಮಾದೇಶ್ವರ ತಪಸ್ಸು ಮಾಡಿದ ಸ್ಥಳವಾಗಿದೆ. ಇಲ್ಲಿ ಮಹಿಳೆಯರಿಗೆ ಪ್ರವೇಶವಿಲ್ಲ. ಸುಂಕಮಲೆ ಸುತ್ತಿನ ಕಾಡಿಗೆ ಕೊಂಡರ ಗುಳಿಕಾನು ಎಂದು ಕರೆಯುತ್ತಾರೆ. ಇದು ಸೋಲಿಗರ ನೀಲಯ್ಯ ತನ್ನ ಹೆಂಡತಿಯನ್ನು ಸುಂಕಮ್ಮನ ಶೀಲ ಶಂಕಿಸಿ ಅವಳು ಸತ್ಯವಂತೆಯಾದರೆ ಈ ಬೆಂಕಿಕೊಂಡದಿಂದ ಬರಲಿ ಎಂದು ಹೇಳಿ ಆಕೆಯನ್ನು ಬೆಂಕಿಗೆ ತಳ್ಳಿದ ಸ್ಥಳವೆಂದು ಹೇಳುತ್ತಾರೆ. ತಾಳುಬೆಟ್ಟದಿಂದ ಸ್ವಲ್ಪ ದೂರ ಹೋದರೆ ಬೇವಿನಹಟ್ಟಿ ಸಿಗುತ್ತದೆ. ಇದು ಬೇವಿನಕಾಳಿ ಸಕಲೈಶ್ವರ್ಯದಿಂದ ಮೆರೆದ ಸ್ಥಳವಾಗಿದೆ. ಮಾದೇಶ್ವರ ಆಕೆಯನ್ನು ಪರೀಕ್ಷಿಸಿದ ಸ್ಥಳವೆಂದು ಹೇಳುವರು ಮಾದೇಶ್ವರನ ಬೆಟ್ಟಕ್ಕೆ ಕಾಲ್ನಡಿಗೆಯಲ್ಲಿ ಹೋಗುವ ಪರಿಷೆ ಬೇವನಟ್ಟಿಲಿ ಧೂಪ ಹಾಕಿ ಮುಂದೆ ಹೋಗುವರು.

ಮಾದೇಶ್ವರನು ಏಳು ಮಲೆಗಳ ಪ್ರದೇಶದಿಂದ ಆವೃತವಾದ ಬೆಟ್ಟ ಗುಡ್ಡಗಳ ಸುತ್ತಲಿನಲ್ಲಿ ತನ್ನ ಪವಾಡಗಳಿಂದ, ಧಾರ್ಮಿಕ ಮತ್ತು ಸಾಮಾಜಿಕ ಪ್ರಭಾವಗಳಿಂದ ವಿಶಿಷ್ಟ ಸ್ಥಾನ ಗಳಿಸಿದ್ದಾನೆ. ಸೋಲಿಗರು, ಬೇಡಗಂಪಣರು ಮಾದಪ್ಪನ ಒಕ್ಕಲಾಗಿದ್ದಾರೆ. ಮಾದೇಶ್ವರ ಒಂದು ಸಾಂಸ್ಕೃತಿಕ ವ್ಯವಸ್ಥೆ ನಿರ್ಮಿಸಲು ಒಕ್ಕಲು ಪಡೆಯುವ ಉದ್ದೇಶ ಹೊಂದಿದ್ದರು ಎಂದು ಹೇಳಬಹುದು.

ಮಾದೇಶ್ವರನಂತೆ ಮಂಟೇಸ್ವಾಮಿಯು ೧೨ ನೇ ಶತಮಾನದಲ್ಲಿ ಶೋಷಣೆಗೆ ಒಳಪಟ್ಟ ಕೆಳವರ್ಗದ ಜನರ ಸ್ವಾಭಿಮಾನಕ್ಕೆ ಬೆಳಕನ್ನು ನೀಡಿ ವಚನಕಾರರಿಗಿಂತ ವಿಭಿನ್ನವಾದ ಆಂದೋಲನವನ್ನು ಹುಟ್ಟಿ ಹಾಕಿ, ಶಿಷ್ಟರ ಒಣ ಸಂಪ್ರದಾಯವನ್ನು ಕಿತ್ತೊಗೆದರು. ಹೆಂಡ, ಮಾಂಸ, ಭಂಗಿ ಮುಂತಾದವುಗಳ ಜೊತೆಗೆ ಸಾಮಾನ್ಯರ ಬದುಕನ್ನು ರೂಪಿಸಬೇಕೆಂದು ಅರಿತು ಅದನ್ನು ಗೌರವಿಸಿ ತಮ್ಮ ಪರಂಪರೆಯ ಸಾಂಸ್ಕೃತಿಕ ಸಂಕೇತವಾಗಿ ಮಾರ್ಪಡಿಸಿದ ವೀರ ನಾಯಕ ಆರಾಧ್ಯ ದೈವವಾಗಿ ಪೂಜಿಸಲ್ಪಟ್ಟಿದ್ದಾರೆ. "ಪಟ್ಟ ಬದ್ಧ ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗದವರ ಅಸ್ತಿತ್ವವನ್ನು ಪುನರ್‌ಸ್ಥಾಪಿಸಿ ಪ್ರತಿ ಸಂಸ್ಕೃತಿಯ ನಿರ್ಮಾಣದ ಉದ್ದೇಶವೆಂಬಂತೆ ಉತ್ತರದ ವೀರಶೈವ ಧರ್ಮವನ್ನು ದಾಟಿಕೊಂಡು ದಕ್ಷಿಣಕ್ಕೆ ಬಂದವರು ಮಂಟೇಸ್ವಾಮಿಗಳಾಗಿದ್ದಾರೆ."[೬] ಮಂಟೇಸ್ವಾಮಿಗಳ ಸಾಂಸ್ಕೃತಿಕ ದಾರಿ ನದಿಯ ಮಾರ್ಗವನ್ನು ಅವಲಂಬಿಸಿ ಕೊನೆಗೆ ಈಗಿನ ಮಳವಳ್ಳಿ ತಾಲ್ಲೂಕಿನ ಬೊಪ್ಪಗೌಡನಪುರದಲ್ಲಿ ಬಂದು ನೆಲೆಸಿದರು. ಹೆಂಡ, ಮಾಂಸ, ಭಂಗಿಗಳನ್ನು ಸೇವಿಸುತ್ತಾ ವೈರಾಗಿಗಳಂತೆ ಕಾಡುಮೇಡುಗಳಲ್ಲಿ ತಿರುಗುತ್ತಾ ಎಲ್ಲೆಂದರಲ್ಲಿ ಮಲಗಿ ಎದ್ದು ಭಕ್ತರ ಮನೆಯಲ್ಲಿ ಸಿಕ್ಕಿದ್ದನ್ನು ತಿಂದು ಸಾಮಾನ್ಯ ಜನರ ಮನದಲ್ಲಿ ಒಬ್ಬ ಅಸಮಾನ್ಯ

ವೀರರಾಗಿ ಉಳಿದಿದ್ದಾರೆ. ಸಾಂಸ್ಕೃತಿಕ ವೀರ ಮಂಟೇಸ್ವಾಮಿಗಳು ಜಗತ್ತನ್ನು ಸೃಷ್ಟಿಸಬಲ್ಲರು ಎಂಬ ನಂಬಿಕೆಯನ್ನು ಮೂಡಿಸಿ ವಿಶೇಷ ಆಚರಣೆಗಳಿಂದ ಪೂಜೆಗೆ ಒಳಗಾಗುತ್ತಾರೆ. ಮಂಟೇಸ್ವಾಮಿಗಳು ಕಲ್ಯಾಣದಿಂದ ದಕ್ಷಿಣಾಭಿಮುಖವಾಗಿ ಪಯಣಿಸಿ ಭಕ್ತರು, ಶಿಷ್ಯರನ್ನು ಸಂಪಾದಿಸಿ ಒಕ್ಕಲುಗಳನ್ನು ಗುರುತಿಸಿಕೊಂಡು ಗುರುಪರಂಪರೆಯ ಪ್ರಸಾರಕ್ಕಾಗಿ ಮಠಗಳನ್ನು ಸ್ಥಾಪಿಸುತ್ತಾ ಹೋದರು. ಮಂಟೇಸ್ವಾಮಿಗೆ ನಡೆದುಕೊಳ್ಳುವ ಸಮುದಾಯವೆಂದರೆ ಒಕ್ಕಲಿನ ನೀಲಗಾರರು, ಹರಿಜನರು, ಕುರುಬರು, ಉಪ್ಪಾರರು ಆಗಿದ್ದಾರೆ.

ಸಿದ್ದಾಪ್ಪಾಜಿಯನ್ನು ಶಿಷ್ಯನನ್ನಾಗಿ ಪಡೆದು ತನ್ನ ದಳವಾಯಿಯಾಗಿ ಮಂಟೇಸ್ವಾಮಿಯನ್ನು ನೇಮಿಸಿಕೊಂಡರು ಕಲಿಪುರುಷನ ಸುಳಿವನ್ನು ಕಂಡ ಕೂಡಲೆ ತಾನೂ ಪಾತಾಳಬಾವಿಯಲ್ಲಿ ಪವಡಿಸಲು ಮಂಟೇಸ್ವಾಮಿ ಇಚ್ಚಿಸಿದಾಗ ಸಿದ್ದಾಪ್ಪಾಜಿಯಿಂದ ಅದಕ್ಕೆ ಅಗತ್ಯವಾದ ಹಲಗೂರಿನ ಪಾಂಚಳರನ್ನು ತನ್ನ ಒಕ್ಕಲಾಗಿ ಮಾಡಿಕೊಳ್ಳುತ್ತಾರೆ. ನಂತರ ಸಿದ್ದಾಪ್ಪಾಜಿಯು ಮಂಟೇಸ್ವಾಮಿಯನ್ನು ಬೀಳ್ಕೊಟ್ಟು ಪೂರ್ವಭಿಮುಖವಾಗಿ ಹೊರಟು ಚಿಕ್ಕಲೂರು ಕ್ಷೇತ್ರಕ್ಕೆ ಬಂದು ಅಲ್ಲಿ ಅನೇಕ ಪವಾಡಗಳನ್ನು ಮೆರೆದು ಮುತ್ತತ್ತಿರಾಯನ ಕ್ಷೇತ್ರದಲ್ಲಿ ನೆಲೆಸಿ ಸಾಂಸ್ಕೃತಿಕ ವೀರನೆನಿಸಿಕೊಳ್ಳುತ್ತಾರೆ.

ರಾಚಪ್ಪಾಜಿಯವರು ತನ್ನ ಗುರು ಮಂಟೇಸ್ವಾಮಿಯ ಸಲಹೆಯಂತೆ ಬೊಪ್ಪಗೌಡನಪುರದಿಂದ ಕಪ್ಪಡಿಗೆ ಹೋಗಿ ನೆಲೆಸುತ್ತಾರೆ. "ಮಂಟೇಸ್ವಾಮಿಗಳು ಬಸವಣ್ಣನ ಮೂಲಕವೇ ರಾಚಪ್ಪಾಜಿಗೆ ತಾಮ್ರದ ಚಪ್ಪೋಡು ಬರೆಸುತ್ತಾನೆ. ಮಂಟೇಸ್ವಾಮಿ ಕಪ್ಪಡಿಯನ್ನು ಕೈಲಾಸ ಮಾಡಿ ರಾಚಪ್ಪಾಜಿಗೆ ಒಪ್ಪಿಸುತ್ತಾನೆ. ರಾಚಪ್ಪಾಜಿಯನ್ನು ಕುರುಬರು, ಹರಿಜನರು ಈ ಒಕ್ಕಲಿನಲ್ಲಿ ಬಂದವರಾಗಿದ್ದಾರೆ. ಇವತ್ತಿಗೂ ರಾಚಪ್ಪಾಜಿ ಗದ್ದುಗೆಯಿಂದ ಕಪ್ಪಡಿ ಜಾತ್ರೆಯ ಸಂದರ್ಭದಲ್ಲಿ ಕೆಲವು ಧಾರ್ಮಿಕ ಆಚರಣೆಗಳನ್ನು ನಡೆಸುವುದನ್ನು ಕಾಣಬಹುದು"[೭] ದೊಡ್ಡಮ್ಮತಾಯಿಯನ್ನು ಮಂಟೇಸ್ವಾಮಿಯ ಶಿಶುಮಗಳಾಗಿ ಪಡೆದ ಮೇಲೆ ರಾಚಪ್ಪಾಜಿಯೊಂದಿಗೆ ವಿವಾಹ ಮಾಡಿಸುತ್ತಾರೆ. ಒಕ್ಕಲಿನ ಸ್ತ್ರೀಯರು ದೊಡ್ಡಮ್ಮತಾಯಿಯ ಕುರಿತು ಹಾಡುತ್ತಾರೆ. ದೊಡ್ಡಮ್ಮತಾಯಿಯು ರಾಚಪ್ಪಾಜಿಯೊಂದಿಗೆ ಕಪ್ಪಡಿಗೆ ಹೋಗುವಾಗ ಮುಟ್ಟಾದಳೆಂದು ಅವಳನ್ನು ಮುತ್ತನಳ್ಳಿಯ ತೋಪಿನಲ್ಲಿ ನೆಲೆಸುವಂತೆ ಹೇಳುತ್ತಾ ದೊಡ್ಡಮ್ಮತಾಯಿ ಇಲ್ಲಿ ನೆಲೆಸುವುದರೊಂದಿಗೆ ಮಂಟೇಸ್ವಾಮಿಯ ಸಾಂಸ್ಕೃತಿಕ ನೆಲೆ ಇಲ್ಲಿಯೂ ಕಾಣಬಹುದು.

ಒಟ್ಟಿನಲ್ಲಿ ಮಂಟೇಸ್ವಾಮಿಯ ಸಾಂಸ್ಕೃತಿಕತೆ ಇಡೀ ಚಾಮರಾಜ ನಗರ. ಕೊಳ್ಳೆಗಾಲದ ಸುತ್ತಲಿನ ಪ್ರದೇಶದಲ್ಲಿ ನಿರ್ಮಾಣಗೊಂಡಿದೆ. ಮಂಟೇಸ್ವಾಮಿಗಳು ಒಬ್ಬ ಸಾಕಾರಮೂರ್ತಿಯಾಗಿ ಶಿಷ್ಟ-ಪರಿಶಿಷ್ಟ ಕಲ್ಪನೆಗಳ ಹಿನ್ನೆಲೆಯಲ್ಲಿ ಪ್ರದಾನ ಸಂಸ್ಕೃತಿಯನ್ನು ಜನರಿಗೆ ಪರಿಚಯಿಸುತ್ತಾರೆ. ಮೇಲು-ಕೀಳು ಎಂದು ಹೀನಾಯವಾಗಿ ಕಂಡ ಪರಂಪರೆಯನ್ನೆ ಮುನ್ನಲೆಗೆ ತರುತ್ತಾರೆ. ಮನುಕುಲದ ಉದ್ದಾರಕ್ಕಾಗಿ ಮಂಟೇಸ್ವಾಮಿಗಳು ವಿಶೇಷವಾದ ಸಂಪ್ರದಾಯ, ನಂಬಿಕೆಗಳನ್ನು ಹುಟ್ಟುಹಾಕಿದ್ದಾರೆ. ಈ ಎಲ್ಲಾ ಸಂಸ್ಕೃತಿಯನ್ನು ಎಲ್ಲಾ ಜನಾಂಗದವರ ಜೀವನದ ಅವಿಭಾಜ್ಯ ಅಂಗವಾಗಿ ಆಚರಿಸುವಂತೆ ಮಾಡಿದ್ದಾರೆ.

ಜುಂಜಪ್ಪ ಕಾವ್ಯ ಗೊಲ್ಲ ಸಮುದಾಯದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಮೌಖಿಕ ಕಾವ್ಯಗಳಲ್ಲಿ ಜುಂಜಪ್ಪ ಒಂದು ಹೊಸ ಪರಂಪರೆಯನ್ನೇ ಸೃಷ್ಟಿಸಿದ್ದಾರೆ. ಮಧ್ಯಕರ್ನಾಟಕದ ಸಾಂಸ್ಕೃತಿಕ ವೀರನಾದ

ಜುಂಜಪ್ಪ ಮಲೆಮಾದೇಶ್ವರ, ಮಂಟೇಸ್ವಾಮಿಗಳಿಂತಲೂ ಭಿನ್ನವಾಗಿಯೇ ಗೋಚರಿಸುತ್ತಾರೆ. "ಆಧ್ಯಾತ್ಮವೇ ಗೊತ್ತಿಲ್ಲದ ಬದುಕಿನ ವೇದಾಂತದ ಪಶುಪಾಲಕ ವೃತ್ತಿಯಲ್ಲಿ ಪರಮಾರ್ಥ ಕಂಡ ಮಣ್ಣಿನ ಜೀವಿಯ ಕಥೆ ಜುಂಜಪ್ಪನದ್ದಾಗಿದೆ, ಜುಂಜಪ್ಪ ಮತ್ತು ಎತ್ತಪ್ಪ ಕಾಡುಗೊಲ್ಲ ಜನಾಂಗದ ಸಾಂಸ್ಕೃತಿಕ ಮೊತ್ತವಾಗಿ ಕಾಣುವುದರೊಂದಿಗೆ ಇವರ ಸಂಸ್ಕೃತಿಯ ಮೇಲೆ ಬೇರೆ ಸಂಸ್ಕೃತಿಗಳ ಧಾಳಿ ನಗಣ್ಯವೆನಿಸುವಂತ್ತಾದ್ದಾಗಿ ಕಾಣುತ್ತದೆ."[೮] ಜುಂಪ್ಪನ ಸಾಂಸ್ಕೃತಿಕ ನೆಲೆಗಳು ಚಿತ್ರದುರ್ಗ, ತುಮಕೂರು, ಶಿರಾ ತಾಲ್ಲೂಕುಗಳಲ್ಲಿ ಕಂಡುಬರುತ್ತದೆ. ತುಮಕೂರು ಜಿಲ್ಲೆಯಲ್ಲಿ ಜುಂಜಪ್ಪನ ಕುರಿತು ಪ್ರಮುಖ ನೆಲೆಗಳು ಕಳುವೋರಳ್ಳಿ, ಬೇವಿನಳ್ಳಿ, ಹಾಗಲವಾಡಿಯ ಪ್ರಮುಖ ಸಾಂಸ್ಕೃತಿಕ ನೆಲೆಗಳಾಗಿವೆ. ಇಲ್ಲೇ ಜುಂಜಪ್ಪನ ಬಾಲ್ಯ ಯುದ್ದ, ಸಂಘರ್ಷಗಳು ನಡೆದಿರುವುದನ್ನು ಕಾಣಬಹುದು.

ಜುಂಜಪ್ಪನ ಕಾವ್ಯದಲ್ಲಿ ಮುಖ್ಯವಾಗಿ ಬರುವ ಸಾಂಸ್ಕೃತಿಕ ವೀರರೆಂದರೆ ಎತ್ತಪ್ಪ, ಜುಂಜಪ್ಪ, ಕಾಟುಮದೇವರು, ಚಿತ್ತದೇವರು, ಪಾತೆದೇವರು, ಕ್ಯಾತೆದೇವರು, ನರಸಿಂಹ ತಿಮ್ಮಪ್ಪ. ರಂಗಪ್ಪ, ಇವರು ಪ್ರಮುಖ ದೇವತೆಗಳಾಗಿದ್ದಾರೆ. ಇವರ ನೆಲೆಗಳು ಹಿರಿಯೂರು ತಾಲ್ಲೂಕಿನ ವೆಣ್ಕಲ್ ಗುಡ್ಡದಲ್ಲಿ ಮತ್ತು ಚಿತ್ರದುರ್ಗ ತಾಲ್ಲೂಕಿನ ತಳುಕಿನ ಗುಡ್ಡದಲ್ಲಿ ಇವೆ. ಜುಂಜಪ್ಪನ ನೆಲೆಗಳು ಶಿರಾ ತಾಲ್ಲೂಕಿನ ಬೇವಿನಳ್ಳಿ, ಮತ್ತು ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿವೆ. ಚಿತ್ರದೇವರ ನೆಲೆಗಳು ಸಿರಾ ತಾಲ್ಲೂಕಿನ ಮದನಕುಂಟೇಯಲ್ಲಿ, ಪಾವಗಡ ತಾಲ್ಲೂಕಿನ ಪಾಲೇನಹಳ್ಳಿಯಲ್ಲಿ ಮತ್ತು ಹೊಳಲ್ಕೆರೆ ತಾಲ್ಲೂಕಿನ ಚಿತ್ರಹಳ್ಳಿಯಲ್ಲಿವೆ. ಈ ಮೂರು ದೇವತೆಗಳನ್ನು ಮಾರನವರ ಗೊಲ್ಲರು ಮಾತ್ರ ಪೂಜಿಸುತ್ತಾರೆ. ಸೋಮನಗರ ಗೊಲ್ಲರು, ಬೊಮ್ಮನಗೊಲ್ಲರು, ಕೋಣನವರಗೊಲ್ಲರು ಇಷ್ಟು ಬೆಡಗುಗಳನ್ನು ಬಿಟ್ಟು ಉಳಿದ ಎಲ್ಲಾ ಗೊಲ್ಲರು ಕಾಟುಮದೇವರನ್ನು ಪೂಜಿಸುತ್ತಾರೆ. ಚಳ್ಳಕೆರೆಯ ತಾಲ್ಲೂಕಿನ ಚೆನ್ನಮ್ಮ ನಾಗತಿಹಳ್ಳಿಯಲ್ಲಿ ಕೇತೇದೇವರ ಒಂದು ಕೇಂದ್ರವಿದೆ. ಪೋಲನವರ ಗೊಲ್ಲರು ಮಾತ್ರ ಈ ದೇವರಿಗೆ ನಡೆದುಕೊಳ್ಳುತ್ತಾರೆ.

ಜುಂಜಪ್ಪ ಸಮಾಧಿಯಾಗಿರುವ ಕಳುವೋರಳ್ಳಿಯಲ್ಲಿ ದೀಪಾವಳಿಯನ್ನು ವಿಶೇಷವಾಗಿ ಆಚರಿಸುತ್ತಾರೆ. ತುಮಕೂರು ಜಿಲ್ಲೆಯಲ್ಲಿ ಜುಂಜಪ್ಪನಿಗೆ ಸಂಬಂದಿಸಿದಂತೆ ದೀಪ ಏರಿಸುವುದು ಪ್ರಮುಖವಾಗಿದೆ. ಜುಂಜಪ್ಪನ ನೆಲೆಸಿರುವ ಸ್ಥಳಗಳೆಲ್ಲಾ ಸಾಂಸ್ಕೃತಿಕ ಕೇಂದ್ರಗಳಾಗಿವೆ, ಜುಂಜಪ್ಪ ನಡೆಸಿದ ಪಶುಪಾಲಕ ವೃತ್ತಿ , ತನ್ನ ಮಾವಂದಿರೊಂದಿಗೆ ನಡೆಸಿದ ಸಂಘರ್ಷಗಳು ಇವೆಲ್ಲಾ ಒಂದು ಸಹಜ ಕಥೆಯನ್ನೇ ಹೇಳುವಂತೆ ಅನ್ನಿಸುತ್ತದೆ. "ಹುಲ್ಲು-ನೀರಿಗೋಸ್ಕರ ಬವಣೆ ಪಡುತ್ತಾ, ಕಾವಲಿಯಿಂದ ಕಾವಲಿಗೆ ಅಲೆಯುತ್ತಾ, ದ್ವೇಷ ಅಸೂಯೆಗಳ ಜಂಜಾಟದಲ್ಲಿ ತೊಳಲುತ್ತಾ, ವಿರೋಧಿಗಳ ಹುಟ್ಟಡಗಿಸುತ್ತಾ,' ಎಲ್ಲಿ ಹುಲ್ಲು, ನೀರು ಐತೋ ಅದೇ ನಮ್ಮ ಮನಿ ಮಾರು ಎನ್ನುವ ಗೊಲ್ಲ ಜೀವನದ ಸಿದ್ದಾಂತವನ್ನು ಜುಂಜಪ್ಪ ಹುಟ್ಟುಹಾಕುತ್ತಾನೆ."[೯] ಇದರಿಂದಾಗಿಯೇ ಜುಂಜಪ್ಪ ಗೊಲ್ಲ ಸಮುದಾಯದ ಸಂಪ್ರದಾಯ, ನಂಬಿಕೆ, ವಿಧಿ, ನಿಷೇಧಗಳನ್ನು ಸಾಂಸ್ಕೃತಿಕ ನೆಲೆಯಲ್ಲಿಯೇ ರೂಪಿಸಿದ್ದಾನೆ.

ಜುಂಜಪ್ಪನ ಕಾವ್ಯದಲ್ಲಿ ಮತ್ತೊಬ್ಬ ಸಾಂಸ್ಕೃತಿಕ ವೀರನ ಕುರಿತಂತೆ ನೆಲೆಗಳು ನಿರ್ಮಾಣಗೊಂಡು ಒಂದು ಹೊಸ ಪರಂಪರೆಯನ್ನೇ ಸೃಷ್ಟಿಸಿರುವುದು, ಎತ್ತಪ್ಪನೆಂಬ ಸಾಂಸ್ಕೃತಿಕ ವೀರನಾಗಿದ್ದನೆ. ಚಿತ್ರದುರ್ಗ

ಜಿಲ್ಲೆಯಲ್ಲಿ ಹೆಚ್ಚಾಗಿ ಆಚರಿಸುವ ಎತ್ತಪ್ಪ ನಾಯಕನ ಪ್ರಭಾವ ಇಂದಿಗೂ ಶಿಷ್ಯಪರಂಪರೆಯಲ್ಲಿದೆ. ಎತ್ತಪ್ಪನಿಗೆ ಸಂಬಂಧಿಸಿದಂತೆ ಗೂಡಿನ ಹಬ್ಬದ ಮೂಲಕ ವಿವಿಧ ಧರ್ಮಗಳನ್ನು ಒಗ್ಗೂಡಿಸಲಾಗಿದೆ. ಕ್ಯಾತಪ್ಪ ದೇವರು ಸಹ ಇಲ್ಲಿ ಮುಖ್ಯರಾಗುತ್ತಾರೆ. ಕ್ಯಾತಪ್ಪನು ಚಿತ್ತದುರ್ಗ ಜಿಲ್ಲೆಯಲ್ಲಿ ಸಾಂಸ್ಕೃತಿಕ ವೀರನಾಗಿದ್ದಾನೆ.

ಜುಂಜಪ್ಪನ ಕಾವ್ಯ ಪಶುಪಾಲನ ವೃತ್ತಿಯೊಂದಿಗೆ ಹೊಸ ಸಂಸ್ಕೃತಿಯನ್ನು ಬೆಳೆಸುತ್ತದೆ. ಇಲ್ಲಿ ಜುಂಜಪ್ಪನ ವ್ಯಕ್ತಿತ್ವವನ್ನು ಕಾಡುಗೊಲ್ಲ ಸಮುದಾಯ ಒಂದು ಪುರಾಣವಾಗಿ ಪಾಲಿಸಿಕೊಂಡು ಬಂದಿದ್ದಾರೆ. ಅಲ್ಲದೇ ಕಾವ್ಯದ ವೀರರು ಸಾಂಸ್ಕೃತಿಕ ಅಂಶಗಳಿಂದ ಪ್ರಸ್ತುತವಾಗುತ್ತಾರೆ. ಜುಂಜಪ್ಪನು ಕುಂಚಿಟಿಗ, ಒಕ್ಕಲಿಗರಿಗೆ ಮನೆದೇವರು ಆಗಿದ್ದಾನೆ. ಆದ್ದರಿಂದ ಬೆಳಗಿನ ಪೂಜೆ ಒಬ್ಬರದ್ದಾದ ಸಂಜೆಯ ಪೂಜೆ ಒಂದು ಸಮುದಾಯಕ್ಕೆ ಸೇರಿರುತ್ತದೆ. ಜುಂಜಪ್ಪನ ಪ್ರೀತಿಯ ಹಸು ಬಡಮೈಲವು ಒಂದು ಸಾಂಸ್ಕೃತಿಕ ವೀರನಂತೆ ಕಂಡುಬರುತ್ತದೆ. ಕಳುವೋರಳ್ಳಿಯಲ್ಲಿ ಬಡಮೈಲನ ಸಮಾಧಿ ಇದೆ. ಇದು ಸಹ ಜುಂಜಪ್ಪನಿಗೆ ಸಂಬಂಧಿಸಿದ ಸಾಂಸ್ಕೃತಿಕ ನೆಲೆಯಾಗಿದೆ.

ಮೈಲಾರಲಿಂಗ ಒಬ್ಬ ಸಾಂಸ್ಕೃತಿಕ ವೀರನಾಗಿದ್ದಾನೆ. ಮೈಲಾರನನ್ನು ಹಿರೇ ಮೈಲಾರನೆಂದೂ, ಮಣ್ಣುಮೈಲಾರನೆಂದು ಕರೆಯುತ್ತಾರೆ. ವಿವಿಧ ಜಾತಿ, ಮತ, ಪಂಥದವರು ಮೈಲಾರನನ್ನು ಪೂಜಿಸುತ್ತಾರೆ. ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರ, ಗೋವಾ, ಮಧ್ಯಪ್ರದೇಶದವರೆಗೂ ಮೈಲಾರನ ಮಹಿಮೆ ಹರಡಲಾಗಿದೆ. ಮೈಲಾರಲಿಂಗನು ಕುರುಬರ, ಗೊರವರ ಆರಾಧ್ಯ ದೈವವಾಗಿದ್ದು ವಿಸ್ತಾರವಾದ ಸಂಸ್ಕೃತಿಕ ನೆಲೆಯನ್ನು ಹೊಂದಿದ್ದಾನೆ. “ಕರ್ನಾಟಕದಲ್ಲಿ ಮೈಲಾರಲಿಂಗನಾಗಿ, ಆಂಧ್ರದಲ್ಲಿ ಮಲ್ಲಯ್ಯನಾಗಿ, ಮಹಾರಾಷ್ಟ್ರದಲ್ಲಿ ಖಂಡೋಬನಾಗಿ ಹೆಸರಾಗಿರುವ ಮೈಲಾರನ ದೇವಾಲಯಗಳು ಬಾಗಲಕೋಟೆ ಮತ್ತು ಗದಗ ಮೊದಲಾದ ಜಿಲ್ಲೆಗಳಲ್ಲಿ ಹಬ್ಬಿರುವುದು ಕಾಣಬಹುದು. ಊರೂರಿಗೆ ಮೈಲಾರನ ಗುಡಿಗಳಿಲ್ಲದೇ ಹೋದರು ಶಿಬಾರವಂತು ಇದ್ದೇ ಇರುತ್ತದೆ. ಕರ್ನಾಟಕದಲ್ಲಿ ಮುನ್ನೂರಕ್ಕೂ ಮೀರಿ ಮೈಲಾರನ ಗುಡಿಗಳಿವೆ. ಎಂದು ವಿದ್ವಾಂಸರು ಹೇಳುತ್ತಾರೆ.”[೧೦] ಇದರಿಂದಲೇ ಮೈಲಾರನು ಬೇರೆ ಸಾಂಸ್ಕೃತಿಕ ವೀರರಿಗಿಂತ ಹೆಚ್ಚು ಸಾಂಸ್ಕೃತಿಕ ನೆಲೆಗಳನ್ನು ಹೊಂದಿದ್ದಾನೆ ಅಷ್ಟೇ ಅಲ್ಲದೇ ಎಲ್ಲಾ ಸಾಂಸ್ಕೃತಿಕ ನಾಯಕರಿಗಿಂತ ಮೈಲಾರನೆ ಹೆಚ್ಚು ಭಕ್ತ ಸಮೂಹವನ್ನು ಹೊಂದಿದ್ದಾನೆ.

ಉತ್ತರ ಕರ್ನಾಟಕದ ಮೈಲಾರನ ಸಾಂಸ್ಕೃತಿಕ ನೆಲೆಗಳಲ್ಲಿ ಪ್ರಮುಖವಾದದ್ದು ಹೂವಿನಹಡಗಲಿ ತಾಲ್ಲೂಕಿನ ಮೈಲಾರವಾಗಿದೆ. ಇದು ಎಲ್ಲಾ ಸಾಂಸ್ಕೃತಿಕ ಕೇಂದ್ರಗಳಿಗಿಂತ ಪ್ರಮುಖವಾಗಿದ್ದು, ಇಲ್ಲಿ ಕಾರ್ಣಿಕವು ವಿಶೇಷವಾಗಿ ನಡೆಯುತ್ತದೆ. ರಾಣೆಬೆನ್ನೂರಿನಲ್ಲಿರುವ ದೇವರಗುಡ್ಡವೂ ತಂಬಾ ಪ್ರಭಾವವಿರುವ ಸಾಂಸ್ಕೃತಿಕ ನೆಲೆಯಾಗಿದೆ. ಹಿರೇಮೈಲಾರಕ್ಕೆ ಹೋಗುವವರು ಮೊದಲು ದೇವರಗುಡ್ಡಕ್ಕೆ ಬಂದು ಪೂಜೆ ಸಲ್ಲಿಸಿದ ನಂತರವೇ ಹಿರೇಮೈಲಾರಕ್ಕೆ ತೆರಳುತ್ತಾರೆ. ಮೈಲಾರನ ಕಾವ್ಯದಲ್ಲಿ ಇರುವಂತೆ ಮೈಲರನು ಮಣಿಮಲ್ಲಾಸುರನನ್ನು ಕೊಂದದ್ದು ಒಂದು ಪೌರಾಣಿಕ ಕಥೆಗೆ ಆಧಾರವಾಗಿ ದೇವರಗುಡ್ಡವನ್ನು ಗುಡ್ಡಾಪೂರ ಎಂದು ಕರೆಯುತ್ತಾರೆ.

ಮೈಲಾರನ ಮತ್ತೊಂದು ಸಾಂಸ್ಕೃತಿಕ ನೆಲೆಯಾಗಿ ಕಂಡುಬರುವ ದೇವಾಲಯ ಗಂಗಿಮಾಳಮ್ಮನ ಆಗಿದೆ. ಮೈಲಾರನ ದೇವಾಲಯ ಇರುವ ಆವರಣದಲ್ಲೇ ಗಂಗಿಮಾಳಮ್ಮನ ದೇವಾಲಯವು ಮುಖ್ಯವಾಗಿದ್ದು, ಮಾಳವ್ವ ಮೈಲಾರನ ಮೊದಲ ಹೆಂಡತಿಯಾಗಿದ್ದಾಳೆ. ಮೈಲಾರ ಗಂಗಿಮಾಳಮ್ಮನನ್ನು ಬಿಟ್ಟು ಹೋದಾಗ ಮಾಳಮ್ಮ ಮೈಲಾರನ ನೆನಪಲ್ಲಿಯೇ ತನ್ನ ಪಾತಿವ್ರತ್ಯವನ್ನು ಉಳಿಸಿಕೊಳ್ಳುತ್ತಾಳೆ. ಆದ್ದರಿಂದ ಮೈಲಾರನ ಆಚರಣಾ ಸಂದರ್ಭದಲ್ಲಿ ಗಂಗಿಮಾಳಮ್ಮನಿಗೆ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಗಂಗಿಮಾಳಮ್ಮನೊಂದಿಗೆ ಮೈಲಾರನ ಮತ್ತೊಬ್ಬ ಹೆಂಡತಿಯಾದ ಕೋಮಾಲೆಯ ದೇವಾಲಯವಿದೆ. ಇದು ದೇವರಗುಡ್ಡಕ್ಕೆ ಹತ್ತಿರವಾದ ಸಿಡಿಗನಾಳದಲ್ಲಿ ಇದ್ದು, ಮೈಲಾರ ಕೋಮಾಲೆಯನ್ನು ಮದುವೆಯಾಗಲು ಅನೇಕ ಮಾಟ, ಮಂತ್ರಗಳನ್ನು ನಡೆಸುತ್ತಾನೆ. ಮೈಲಾರನು ಕುರುಬರನ್ನು ತನ್ನ ಒಕ್ಕಲನ್ನಾಗಿ ಮಾಡಿಕೊಳ್ಳಲು ಕೋಮಾಲಿಯನ್ನು ಪೀಡಿಸಿ, ಪ್ರೀತಿಸಿ ವಿವಾಹವಾಗುತ್ತಾನೆ.

ಮೈಲಾರಲಿಂಗನು ಒಬ್ಬ ಸಾಂಸ್ಕೃತಿಕ ವೀರನಾಗಿ ಇಂದಿಗೂ ಮೈಲಾರನ ಕಾರ್ಣಿಕದಂತೆ ಜಗತ್ತಿನಲ್ಲಿ ಒಳ್ಳೆಯದು, ಕೆಟ್ಟದು ಎಂಬುದನ್ನು ನಿರ್ಧರಿಸುತ್ತದೆ. ಮೈಲಾರನ ಕ್ಷೇತ್ರದಲ್ಲಿ ಭಕ್ತರು ಏಳುಕೋಟಿ ಏಳುಕೋಟಿ ಎನ್ನುವ ಘೋಷಣೆಯೊಂದಿಗೆ ಮೈಲಾರನ ಸಂಸ್ಕೃತಿಯ ಮಹಿಮೆಯನ್ನು ಸುತ್ತಲೂ ಪ್ರದೇಶದವರೆಗೆ ಹರಡುವಂತೆ ಮಾಡಿದ್ದಾರೆ. ಮೈಲಾರನು ಸಮಾಜದ ಭವಿಷ್ಯವನ್ನು ನುಡಿಯುತ್ತಾನೆ ಎಂದು ಜನರು ನಂಬುತ್ತಾರೆ, ಗೊರವರು ಮೈಲಾರನ ಸಂಪ್ರದಾಯಗಳನ್ನು ಮುಂದುವರೆಸುವುದರಿಂದ ಕಾರ್ಣಿಕವನ್ನು ಅವರೇ ನುಡಿಯುತ್ತಾರೆ.

ಮಾಳಿಂಗರಾಯನ ಕಾವ್ಯವು ಸಾಂಸ್ಕೃತಿಕ ನೆಲೆಗಳಲ್ಲಿ ವಿಶೇಷವಾಗಿದೆ. ಏಕೆಂದರೆ ಕರ್ನಾಟಕ ಮತ್ತು ಮಹಾರಾಷ್ಟ್ರದ ಅನೇಕ ಪ್ರದೇಶಗಳಲ್ಲಿ ಮಾಳಿಂಗರಾಯನ ಆಚರಣೆಗಳು ನಡೆಯುತ್ತವೆ. ಮಾಳಿಂಗರಾಯ ಒಬ್ಬ ಸಾಂಸ್ಕೃತಿಕ ವೀರನಾಗಿರದೆ ಪೌರಾಣಿಕ ಪುರುಷನಾಗಿ ದೈವಿಕಶಕ್ತಿ ಹೊಂದಿರುವ ವೀರ ಪುರುಷನಾಗಿ ಕಂಡುಬರುತ್ತಾನೆ, ಮಾಳಿಂಗರಾಯ ಸಂಚರಿಸಿರುವ ಪ್ರದೇಶಗಳನ್ನು ಗಮನಿಸಿದರೆ ಈ ವೀರನ ಕುರಿತು ನಡೆಯುವ ಆಚರಣೆಗಳು ಗಮನ ಸೆಳೆಯುತ್ತವೆ. ಮಾಳಿಂಗರಾಯನ ಸಾಂಸ್ಕೃತಿಕ ನೆಲೆ ಹುಲುಜಂತಿಯಿಂದ ಪ್ರಾರಂಭವಾಗಿ ಅನೇಕ ಪ್ರದೇಶಗಳನ್ನು ಒಳಗೊಂಡಂತೆ ಬಬ್ಬುಲಿವನವು ಪ್ರಮುಖ ಸಾಂಸ್ಕೃತಿಕ ನೆಲೆಯಾಗಿ ಕಂಡುಬರುತ್ತದೆ.

"ಮಾಳಿಂಗರಾಯನನ್ನು ಕುರಿತು ಅನೇಕ ಐತಿಹ್ಯಗಳು ಪ್ರಚಾರದಲ್ಲಿವೆ. ಐತಿಹ್ಯಗಳು ಸತ್ಯ ಎಂದು ಪ್ರಕಟಿಸಲು ಅನೇಕ ಭೌತಿಕ ವಸ್ತುಗಳನ್ನು ತೋರಿಸುತ್ತಾರೆ. ಮಾಳಿಂಗರಾಯನ ಮೊದಲನೆಯ ಅವತಾರವೆಂದು ಬಸವಣ್ಣನ ಗದ್ದಿಗೆ ತೋರಿಸುತ್ತಾರೆ. ಪಾಂಡುರಂಗ ಮಾಳಿಂಗರಾಯನ ಭೆಟ್ಟಿಗೆ ಬೊಬ್ಬಲಿ ವನಕ್ಕೆ ಬಂದದ್ದರ ಕುರುಹು ಎಂದು ವಿಠ್ಠಲನ ದೇವಸ್ಥಾನ, ಸಿಡಿಯಾಣದಲ್ಲಿ ಶೀಲವಂತಿ, ಬೊಬ್ಬಲಿವನದಲ್ಲಿ ಮಾಳಿಂಗರಾಯ ನೆಟ್ಟ ಗಿಡ, ಮಾಳಿಂಗರಾಯ ಹುಲಿ ಉಗುರಿನಿಂದ ಕಟ್ಟಿದ ಅಗಸೆ ಬಾಗಿಲು, ಮಾಳಿಂಗರಾಯ ಕುರಿ ಕಾಯಲು ತಿರುಗುವ ಸಂದರ್ಭದಲ್ಲಿ ಅವನು

ಕುಳಿತುಕೊಂಡಿರುವ ಸ್ಥಳಗಳು"[೧೧] ಮಾಳಿಂಗರಾಯನ ಸಂಸ್ಕೃತಿಯನ್ನು ತಿಳಿಸುತ್ತವೆ. ಇಂದಿಗೂ ಮಾಳಿಂಗರಾಯನ ಜಾತ್ರೆ ನಡೆಯುವಾಗ ಮೊದಲು ಬಸವಣ್ಣನ ಗದ್ದುಗೆಗೆ ಪೂಜೆ ಮಾಡುವ ಆಚರಣೆ ನಡೆಯುತ್ತದೆ.

ಒಟ್ಟಿನಲ್ಲಿ ಮಾನವ ಎಲ್ಲಿ ನೆಲೆ ನಿಲ್ಲುತ್ತಾನೋ ಅಲ್ಲಿ ಒಂದು ಸಂಸ್ಕೃತಿಯ ಪರಂಪರೆಯೇ ನಿರ್ಮಾಣವಾಗುತ್ತದೆ. ಈ ಸಂಸ್ಕೃತಿ ತಲೆಮಾರಿನಿಂದ ತಲೆಮಾರಿಗೆ ಸಾಗುವುದರೊಂದಿಗೆ ಸಮುದಾಯಗಳು ತಮ್ಮದೇ ಆರಾಧ್ಯ ದೈವದ ಸ್ಥಾಪನೆ ಮಾಡುತ್ತಾರೆ. ಕೆಳವರ್ಗದವರ ಪರವಾಗಿ ಹುಟ್ಟಿಕೊಂಡ ಸಾಂಸ್ಕೃತಿಕ ನಾಯಕರ ಐತಿಹಾಸಿಕ, ಭೌಗೋಳಿಕ, ಸಾಂಸ್ಕೃತಿಕ ನೆಲೆಗಳನ್ನು ಗುರುತಿಸಿದ್ದಾರೆ. ನಾಯಕರು ನೆಲೆಸಿರುವ ಈ ಸಾಂಸ್ಕೃತಿಕ ನೆಲೆಗಳ ಮೂಲಕ ಸಮಾಜಕ್ಕೆ ಅಗತ್ಯವಾದ ಆಚರಣೆಗಳನ್ನು ಜಾರಿಗೆ ತರುತ್ತಾರೆ. ನಾಯಕರ ಪರವಾಗಿ ಹುಟ್ಟಿಕೊಂಡ ಆಚರಣೆಗಳು ವ್ಯಕ್ತಿಯನ್ನು ಆಂತರಿಕವಾಗಿ ಸದೃಡನನ್ನಾಗಿ ಮಾಡುತ್ತವೆ.

**೫.೨ ಆಚರಣೆಗಳು ಮತ್ತು ಸ್ತ್ರೀ ದೇವತೆಗಳು**

ಮನುಷ್ಯ ಆಗೋಚರವಾಗಿ ನಂಬುವ ದೈವಶಕ್ತಿಗಳ ಪ್ರತಿರೂಪವಾಗಿ ನಡೆಸುವ ಮತಾಚಾರವೇ ಆಚರಣೆಗಳಾಗಿವೆ. ಇವು ವ್ಯಕ್ತಿಯ ಜೀವನಕ್ಕೆ ಅವಿಭಾಜ್ಯ ಸಂಗತಿಗಳಾಗಿವೆ. ಆಚರಣೆಗಳು ಮಾನವನ ಜೀವನವನ್ನು ರೂಪಿಸಿ ಸ್ಮೃತಿಯನ್ನು ಬೆಳೆಸುತ್ತವೆ ಹಾಗೂ ಮಾನವನ ಭೌತಿಕ ಬೌದ್ಧಿಕ ಮತ್ತು ಬೆಳವಣಿಗೆಯಲ್ಲಿ ಆಚರಣೆಗಳು ಪ್ರಮುಖ ಪಾತ್ರ ವಹಿಸುತ್ತವೆ. "ಮನುಕುಲದ ಶ್ರೆಯಸ್ಸಿಗಾಗಿ ಅತ್ಯವಶ್ಯವೆಂದು ಎಣಿಕೆಗೊಂಡಿರುವ ನಂಬಿಕೆಗಳೇ ಸಂಪ್ರದಾಯಗಳಾಗಿ ವಿಧಿ–ನಿಷೇಧಗಳಾಗಿ ಉಪಾಸನೆಗಳಾಗಿ ನೌಕಾರತೆ ಪಡೆಯುತ್ತವೆ"[೧೨] ಇಂಥಹ ಆಚರಣೆಗಳಿಂದ ನಂಬಿಕೆ, ಸಂಪ್ರದಾಯ ರೂಢಿ ಪದ್ದತಿಗಳು ಉಳಿದು ಬೆಳೆದುಕೊಂಡು ಬಂದಿವೆ, "ಭೌಗೋಳಿಕ ಹಾಗೂ ಸಾಂಸ್ಕೃತಿಕ ಪರಿಸರ ಹಿನ್ನೆಲೆಯಲ್ಲಿ ಆಯಾ ಜನರ ಮನೋಧರ್ಮವನ್ನುವಲಂಬಿಸಿ ಸಂಪ್ರದಾಯಗಳು ಉಗಮಸಿ ಆಚರಣಾ ವಿಧಿವಿಧಾನಗಳಿಂದ ಅವು ಉಳಿದುಕೊಂಡಿವೆ. ಮಾನವನ ಬೌದ್ಧಿಕ ಮಾನಸಿಕ ಹಾಗೂ ಶಾರೀರಿಕ ಗುಣಲಕ್ಷಣ ಕ್ರಿಯೆಗಳು ಸಾರ್ವತ್ರಿಕವಾಗಿ ಏಕರೂಪವಾದ್ದರಿಂದ ಒಂದೇ ಬಗೆಯ ಸಂಪ್ರದಾಯ ಆಚರಣೆಗಳು ಭಿನ್ನ ಭಿನ್ನ ಪ್ರದೇಶಗಳಲ್ಲಿ ಸ್ವತಂತ್ರವಾಗಿ ರೂಪುಗೊಳ್ಳುತ್ತವೆ."[೧೩] ಏಕೆಂದರೆ ಸಾಮಾಜಿಕ ಮೌಲ್ಯಗಳು ಬದಲಾದಂತೆ ಆಚರಣೆಗಳು ಬದಲಾಗುತ್ತವೆ. ಅವು ಆಧುನೀಕರಣಗೊಳ್ಳಬಹುದು ಆದರೆ ಪೂರ್ಣ ನಶಿಸುವುದಿಲ್ಲ, ಆದರೆ ಕೆಲವು ವರ್ಗಗಳು ರೂಢಿಸಿಕೊಂಡು ಬಂದಿರುವ ಆಚರಣೆಗಳು ತಮ್ಮ ಮುಂದಿನ ತಲಮಾರುಗಳವರೆಗೆ ಸಾಗಿಸುತ್ತಾರೆ. ಇದು ಬೇರೆ ಬೇರೆ ಜನಾಂಗ ಜಾತಿ, ಸಂಸ್ಕೃತಿಯು ವಿವಿಧ ಆಚರಣೆಗಳು ಜಾರಿಯಲ್ಲಿವೆ.

ಸಂಸ್ಕೃತ ಮೂಲದ 'ಪರ್ವ' ಪದದ ತದ್ಬವ ರೂಪ 'ಹಬ್ಬ' ಇದು ಜನಾಂಗಿಕ ಜೀವನದ ನಿರ್ದಿಷ್ಟ ಕಾಲದ ಉತ್ಸವದ ಸಂಕೇತವಾಗಿದೆ. ಒಂದು ಕಾಲಾವಧಿಯಲ್ಲಿ ಕೈಗೊಳ್ಳುವ ಆಚರಣೆಗಳು ಒಂದು ಸಮುದಾಯದ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಯಾವುದೇ ಜನಾಂಗದ ಸಾಂಸ್ಕೃತಿಕ ಬೆಳವಣಿಗೆಯನ್ನು ಗುರುತಿಸಲು ಸಿಗುವ ಮಹತ್ವಪೂರ್ಣ ಆಕರಗಳೇ ಅವರ ನಂಬಿಕೆ ಶ್ರದ್ದೆ ಹಾಗೂ

ಆಚರಣೆಗಳಾಗಿವೆ. "ಸಾಮಾಜಿಕ ಬದುಕು ಪುರಾಣದ ಸೃಷ್ಟಿ ಹಾಗೂ ಆರಾಧನೆ ಸ್ತುತಿ ಆಚರಣೆ ಇವೆಲ್ಲ ಚಕ್ರಗತಿಯಲ್ಲಿ ರೂಪುಗೊಂಡು ಕಾಲಾಂತರದಲ್ಲಿ ನಿರ್ದಿಷ್ಟ ಕಾಲದ ಆಚರಣೆಗಳಾಗಿ ಹಬ್ಬಗಳ ಸ್ವರೂಪವಾಗಿ ಬದಲಾದವು"[೧೪] ಹಬ್ಬಗಳು ಮತ್ತು ಸಂಪ್ರದಾಯಗಳು ಮಾನವ ಜೀವನದಲ್ಲಿ ಹಾಸು ಹೊಕ್ಕಾಗಿವೆ.

ಖ್ಯಾತ ಜಾನಪದ ತಜ್ಞರಾದ ಪ್ರೊ.ಟಿ.ಲಿಂಗಯ್ಯನವರು ಆಚರಣೆಗಳನ್ನು ಕುರಿತು ಹೀಗೆ ಹೇಳುತ್ತಾರೆ.

"ಆಚರಣೆಗಳು ಮಾನವನ ಬದುಕಿನ ಪ್ರತೀಕಗಳು ಪ್ರತಿಬಿಂಬಗಳು ಪ್ರತಿಮೆಗಳು ಇವು ಬದುಕಿನ ಅಯಾಮಗಳ ಸಾಂಕೇತಿಕ ರೂಪಗಳ ಅನುಪಕರಣದ ಮಾನವ ಬದುಕಿನ ಅಥವಾ ಪ್ರಕೃತಿ ಬದುಕಿನ ಛಾಯಾವರ್ತಿಗಳೇ ಆಚರಣೆಗಳು"[೧೫] ಧಾರ್ಮಿಕ ವಿಧಿ ವಿಧಾನಗಳನ್ನು ರೂಪಿಸುವುದು ಅದಕ್ಕೆ ತಕ್ಕ ಫಲಾಪೇಕ್ಷೆಯನ್ನು ಪಡೆಯುವುದು ಆಚರಣೆಗಳ ಮುಖ್ಯ ಆಕರಗಳಾಗಿವೆ. ಒಬ್ಬ ವ್ಯಕ್ತಿಯಿಂದ ಒಂದು ಸಮುದಾಯದ ಜೀವನದ ವಿಧಾನದ ಆಧಾರದ ಮೇಲೆ ಆಚರಣೆಗಳು ಹುಟ್ಟುತ್ತವೆ. ಪ್ರಕೃತಿ ಮಾನವ ಸಂಸ್ಕೃತಿ ಆಚರಣೆ, ಧರ್ಮ ಸಮುದಾಯಗಳ ಬದಲಾವಣೆಗಳಿಗೆ ನೇರ ಸಂಬಂಧವಿದೆ "ಸಸ್ಯ, ಪ್ರಾಣಿ, ದೇವರುಗಳು ಆಚರಣೆಯ ಸೃಷ್ಟಿಗೆ ದಾರಿ ಮಾಡಿವೆ. ಮನುಷ್ಯನ ಚಟುವಟಿಕೆಗಳಿಗೂ ಆಚರಣೆಗಳ ಆಶಯಗಳಿಗೂ ನಿಕಟವಾದ ಸಂಬಂಧಗಳಿವೆ. ಮನುಷ್ಯ ಹಾಗೂ ಆಚರಣೆಗಳ ರಚನಾ ವಿನ್ಯಾಸವನ್ನು ಈ ಕೆಳಗಿನ ೩ ನಂತೆ ಗುರುತಿಸಬಹುದು"[೧೬]

೧ ಮಾನವನ ಬದುಕು ೨ ಆಚರಣೆ



ಮಾನವನಿಗೆ ಹುಟ್ಟಿದಾಗಿನಿಂದ ಹಿಡಿದು ಬೆಳೆದು ಅವನು ಸಾಯುವವರೆಗೂ ಆಚರಣೆಗಳು ಇರುತ್ತವೆ. ಇವು ಮಾನವನೊಂದಿಗೆ ಆರಂಭಗೊಂಡು ಅದನೊಂದಿಗೆ ಬೆಳೆದು ಆನಂತರ ಅವನೊಂದಿಗೆ ವಿಸರ್ಜನೆಗೊಳ್ಳುತ್ತವೆ. ಈ ಪ್ರಕ್ರಿಯೆ ಎಲ್ಲಾ ಮಾನವನ ಜೀವನ ಚಕ್ರದಂತೆ, ಹರಿಯುವ ನೀರಿನಂತೆ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಆಚರಣೆಗಳು ಪ್ರಕೃತಿ ಮತ್ತು ಮಾನವರ ನಡುವೆ ಹೊಸ ಸಂಬಂಧವನ್ನೆಲ್ಲ ಏರ್ಪಡಿಸುತ್ತದೆ ಹಾಗೂ ಮಾನವನಿಗೆ ಸಮಾಜದೊಂದಿಗೆ ತನ್ನ ಅಸ್ತಿತ್ವ ಕಂಡುಕೊಳ್ಳಲು ಆಚರಣೆಗಳೇ ಸಹಾಯಕವಾಗಿಯರುವುದನ್ನು ಕಾಣಬಹುದಾಗಿದೆ.

ಮೌಖಿಕ ಕಾವ್ಯಗಳಲ್ಲಿ ಹೆಚ್ಚಾಗಿ ಕಾಡೇ ದೈವವಾಗಿತ್ತು ಹಾಗೂ ಆಯಾ ಸಮುದಾಯಗಳಿಗೆ ಸಂಬಂಧಿಸಿದ ದೈವಗಳು ಹುಟ್ಟಿಕೊಂಡವು. ಈ ಕಾರಣದಿಂದಲೇ ಋತುಮಾನಕ್ಕೆ ಅನುಗುಣವಾಗಿ ಹಬ್ಬ ಆಚರಣೆಗಳು ಕಾಣಿಸಿಕೊಂಡವು. ಕೃಷಿಗೆ ಸಂಬಂಧಿಸಿದಂತೆ ಮಾನವ ಆಲೋಚಿಸಿದಂತೆಲ್ಲಾ ಹಗಲು, ರಾತ್ರಿ, ಮಳೆ, ಭೂಮಿ ಆಕಾಶ, ನೀರು, ನದಿ, ಗಿಡ, ಮರ, ಕಾಯಿ ಮುಂತಾದವುಗಳು ಒಂದೊಂದು ಬಗೆಯ ದೈವತ್ವವನ್ನು ಪಡೆದವು. ಈ ಬಗೆಯ ದೈವತ್ವ ಮಾನವನಲ್ಲಿ ವಿಶೇಷವಾದ ಭಾವವನ್ನು ಉಂಟುಮಾಡಿ ಕಾಣದ ಶಕ್ತಿಯಾಗಿ ಪರಿಣಮಿಸಿತು"ಮಾತೃ ಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿ ಬದಲಾವಣೆ ಹೊಂದಿದಾಗ ಆಚರಣೆಗಳಲ್ಲಿ ಸಾಂಸ್ಕೃತಿಕ ಪಲ್ಲಟವೆಂಬುದು ಸಂಭವಿಸಿತು. ಈ ಪಲ್ಲಟ, ಮಹಿಳೆ, ಪುರುಷರ ಸಮಾನತೆ ಮತ್ತು ಹಕ್ಕಿನಲ್ಲಿಯೂ ಬದಲಾವಣೆಯನ್ನುಂಟು ಮಾಡಿತು. ಮಹಿಳೆಯರನ್ನು ಮೂಲೆ ಗುಂಪಾಗಿಸಿ ವ್ಯಾಪಾರಿ ಕೇಂದ್ರವಾದ ದೇವಾಲಯಗಳು ಆಚರಣೆಗಳನ್ನು ತಮ್ಮ ಹಿತಾಸಕ್ತಿಗಾಗಿ ಒಳಗೊಂಡಂತೆ ನೋಡಿಕೊಳ್ಳಲಾಯಿತು"[೧೭] ಡಿ.ಡಿ.ಕೋಸಾಂಬಿ ಅವರು ಹೇಳುವಂತೆ – ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ರೂಪುಗೊಂಡು ಮಾತೃದೇವತೆಗಳ ಪ್ರತಿನಿಧಿಗಳಾದ ಗ್ರಾಮದೇವತೆಗಳು ಗ್ರಾಮದಲ್ಲಿ ಆರಾಧನೆಗೆ ಒಳಗಾದವು ಸಮೃದ್ಧಿಯ ಆಚರೆಣೆಗಳೆಲ್ಲಾ ಮಹಿಳಾ ಸಂಬಂಧಿ ಆಚರಣೆಗಳಾದ್ದರಿಂದ ಅನೇಕ ಸಂಸ್ಕೃತಿಗಳಲ್ಲಿ ಗಂಡಿಗೆ ಆಚರಣೆ ಹಕ್ಕನ್ನು ಮಹಿಳೆಗೆ ಆಚರಣೆಗಳ ಸ್ಥಳಕ್ಕೆ ಪ್ರವೇಶವನ್ನು ನಿರಾಕರಿಸಲಾಗಿದೆ. ಮಾನವನ ಜೀವನ ವಿಧಾನ ಬದಲಾದಂತೆ ಕೃಷಿಯು ಮುಂದುವರೆದ ಘಟ್ಟದಲ್ಲಿ ಗಂಡು ಮಹತ್ವಸ್ಥಾನವನ್ನು ಗಳಿಸುತ್ತಾನೆ. ಆಗ ಸಮೃದ್ಧಿಯ ಆಚರಣೆಗಳನ್ನು ನೇರವೇರಿಸುವ ಹೊಣೆಗಾರಿಕೆ ಅವನದಾಗುತ್ತದೆ"[೧೮]

ಮೌಖಿಕದಲ್ಲಿ ಪ್ರಮುಖವಾಗಿ ನಂಬಿಕೆಗಳು ಆಚರಣೆಗಳಿಂದ ವ್ಯಕ್ತವಾಗುತ್ತವೆ. ಅವರ ನಿತ್ಯ ಜೀವನದಲ್ಲಿ ನಡೆಯುವ ಘಟನೆಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದಕ್ಕೆ ದೈವವೇ ಕಾರಣ ಎಂಬ ನಂಬಿಕೆ ಹೊಂದಿರುತ್ತಾರೆ. ಹಾಗಾಗಿ ಅವರು ತಮ್ಮ ದೈವಕ್ಕೆ ಶ್ರದ್ಧಾ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಅವರ ಆಚರಣೆಗಳು ಒಂದು ಸಮುದಾಯದಲ್ಲಿರುವ ನಾಯಕರ ದೈವತ್ವಕ್ಕೇರಿಸುವುದೇ ಆಗಿರುತ್ತದೆ. ಈ ನಾಯಕ ಮತ್ತು ಸಾಮಾಜಿಕ ವ್ಯವಸ್ಥೆ ಎರಡನ್ನೂ ಸಮೀಕರಿಸುವುದನ್ನು ಕಾಣಬಹುದು. ಯಾವುದೇ ಆಚರಣೆ ಇರಲಿ ಅದಕ್ಕೆ ದೈವ ಮತ್ತು ಪ್ರಾಕೃತಿಕ ನಿಸರ್ಗ ಕಾರಣವಿರುತ್ತದೆ ಎಂದು ನಂಬಿರುತ್ತಾರೆ. ಈ ನಿಟ್ಟಿನಲ್ಲಿಯೇ ಅನೇಕ ಮೌಖಿಕ ಕಾವ್ಯಗಳ ಸಾಂಸ್ಕೃತಿಕ ಆಚರಣೆಗಳು ಮಹತ್ವ ಪಡೆದು ಇಂದು ಮುಂದುವರೆಸಿಕೊಂಡು ಬರುವುದನ್ನು ಕಾಣಬಹುದಾಗಿದೆ.

ಅನಾದಿಕಾಲದಿಂದಲೂ ಜನರ ಬದುಕಿನ ದೈನಂದಿನ ಲಕ್ಷಣಗಳಲ್ಲಿ ದೈವಕ್ಕೆ ಸಂಬಂಧಿಸಿದ ಆಚರಣೆಗೆ ಬಹುಮುಖ್ಯ ಲಕ್ಷಣವಾಗಿದ್ದು ದೈವದ ಬಗ್ಗೆ ಅಚಲವಾದ ನಂಬಿಕೆಯನ್ನು ಇಟ್ಟಿದ್ದಾರೆ. ಇಂದು ಹಲವು ಪವಾಡ ಮಹಿಮೆಯಿಂದ ಹೇಳಬಹುದು. ಧಾರ್ಮಿಕ ಸಂತರು, ಯೋಗಿಗಳು, ಜೋತಿಷಿಗಳು, ಜೀವನದ ಅವಿಭಾಜ್ಯ ಅಂಗವಾಗಿದ್ದು ಅವರು ಹೇಳುವ ಮಾತು, ಪರಿಹಾರಗಳೇ ಜೀವನಕ್ಕೆ ಆಧಾರವೆಂದು ಭಾವಿಸುತ್ತವೆ. "ಧಾರ್ಮಿಕ ಮಹಾಪುರಷರ ಪವಾಡಗಳು ಸಮಾಜದ ಮೇಲೆ ದುಷ್ಪರಿಣಾಮಕ್ಕಿಂತ ಸಾತ್ವಿಕ ಪರಿಣಾಮಗಳನ್ನುಂಟು ಮಾಡಿರುವುದನ್ನು ಮಹಾಕಾವ್ಯಗಳಲ್ಲಿ ಕಾಣಬಹುದಾಗಿದೆ."[೧೯] ಮೌಖಿಕ ಕಾವ್ಯಗಳಲ್ಲಿ ಸಾಂಸ್ಕೃತಿಕ ವೀರರ ಜನನ ಸಹಜವಾಗಿ ಆಗದೆ ಆಯೋನಿಜವಾಗಿಯೇ ಆಗುತ್ತದೆ. ಅವರು ಗಂಡು ಮತ್ತು ಹೆಣ್ಣಿನ ಸಂಯೋಗದಿಂದ ಜನಿಸುವುದಿಲ್ಲ ಎಂಬುದು ಇಲ್ಲಿ ಗಮನಾರ್ಹ. ಅಂದರೆ ಈ ನಾಯಕರು ಸಾಮಾನ್ಯರ ಹಾಗೆ ತಾಯಿಯ ಜನನಾಂಗದ ಮೂಲಕ ಹೊರಬರುವುದು. ಮೈಲಿಗೆ ಮತ್ತು ಅಶುಚಿಯಿಂದ ಕೂಡಿದುದು ಎಂದು ಭಾವಿಸಿರುವುದರಿಂದ ಈ ರೀತಿಯ ನಾಯಕರ ಜನನವು ದೈವ ಇಚ್ಛೆ ಎಂದೇ ಭಾವಿಸುತ್ತಾರೆ. ಜಗತ್ತಿನ ಎಲ್ಲಾ ಮಹಾಕಾವ್ಯಗಳಲ್ಲಿ ಸಾಂಸ್ಕೃತಿಕ ನಾಯಕನ ಹುಟ್ಟು ವಿಶೇಷ ರೀತಿಯಿಂದ ಕೂಡಿರುತ್ತದೆ. ಹುಟ್ಟಿನಂತೆ ಸಾವೂ ಕೂಡ ದೊಡ್ಡ ವಿಚಾರವಾಗಿದೆ. ಮಹಾಕಾವ್ಯಗಳಲ್ಲಿಯ ನಾಯಕನು ಸಾಮಾನ್ಯರಂತೆ ಹುಟ್ಟದೆ ಅಸಮಾನ್ಯರಾಗಿ ಹುಟ್ಟಿ ವಿಶೇಷ ಪವಾಡ, ಸಂಪ್ರದಾಯ,ಆಚರಣೆಗಳನ್ನು ಹುಟ್ಟುಹಾಕುತ್ತಾರೆ.

ದೈವಸಂಭೂತರಾಗಿ ಜನಿಸಿದ ನಾಯಕರು (ಉದಾಹರಣೆಗೆ ಜುಂಜಪ್ಪನ ಜನನ) ಅವರವರ ತಾಯಿಯ ಬೆನ್ನಿನಿಂದ ಜನಿಸುತ್ತಾರೆ. ಹೀಗೆ ಜನಿಸುವ ಮುನ್ನ ತಮ್ಮ ತಾಯಂದಿರಿಗೆ ಮುನ್ಸೂಚನೆಯನ್ನು ಕೊಡುತ್ತಾರೆ. ತಾವು ಜನಿಸಿದ ಬಳಿಕ ತಾಯಿಯ ಬೆನ್ನನ್ನು ಮೊದಲಿನಂತೆ ಮಾಡುತ್ತಾರೆ. ಇಲ್ಲಿಂದಲೇ ನಾಯಕರ ಪವಾಡಗಳು ಪ್ರಾರಂಭವಾಗುತ್ತವೆ.

**ಮಾದೇಶ್ವರನಿಗೆ ಸಂಬಂಧಿಸಿದ ಆಚರಣೆಗಳು**

ಕರ್ನಾಟಕದ ಮೈಸೂರು ಸೀಮೆಯ ಅತ್ಯಂತ ಪ್ರಮುಖ ಜಾತ್ರೆಗಳಲ್ಲಿ ಒಂದಾದ ಮಾದೇಶ್ವರನ ಪರುಷೆ ಬೆಟ್ಟ, ಗುಡ್ಡಗಳಿಂದ ಆವೃತವಾದ ಮಾದೇಶ್ವರನ ಬೆಟ್ಟದಲ್ಲಿ ನಡೆಯುತ್ತದೆ. ಮಾದೇಶ್ವರನ ಒಕ್ಕಲು ಪಡೆದಿರುವ ಕಂಸಾಳೆ ಗುಡ್ಡರು, ಸೋಲಿಗರು ಬೆಟ್ಟದಲ್ಲಿ ಜಾತ್ರೆ ಸಮಯದಲ್ಲಿ ಮಾದೇಶ್ವರನ ಕಾವ್ಯವನ್ನು ಹಾಡುತ್ತಾರೆ. ಇವರೆಲ್ಲ ಹಿಂದುಳಿದ ಹಾಗೂ ತಳ ಸಮುದಾಯಕ್ಕೆ ಸೇರಿದವರಾಗಿದ್ದಾರೆ.

ಯುಗಾದಿ, ಶಿವರಾತ್ರಿ, ದೀಪಾವಳಿ ಹಬ್ಬದ ಸಮಯದಲ್ಲಿ ವಿಶೇಷ ಪೂಜೆ ಆಚರಣೆಗಳು ನಡೆಯುತ್ತವೆ. ಲಕ್ಷಾಂತರ ಜನರು ಈ ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಹಬ್ಬಗಳನ್ನು ಹೊರತುಪಡಿಸಿ ಪ್ರತಿನಿತ್ಯವು ಮಾದೇಶ್ವರನಿಗೆ ಪೂಜೆ ನಡೆಯುತ್ತಿರುತ್ತದೆ. ಕಂಪಣ ಬೇಡರು ಮಲೆ ಮಾದೇಶ್ವರನ ಪೂಜಾರಿಕೆ ಮಾಡುತ್ತಾರೆ. ಶಿವರಾತ್ರಿ, ಮತ್ತು ಮಹಾಲಯ ಅಮವಾಸ್ಯೆ ದಿನ ಮಾದೇಶ್ವರನಿಗೆ ಕಂಸಾಳೆ ಗುಡ್ಡರು ಮಾದೇಶ್ವರನ ಎಣ್ಣೆ ಮಜ್ಜನಕ್ಕಾಗಿ ಎಣ್ಣೆಯನ್ನು, ನೈವೇದ್ಯಕ್ಕಾಗಿ ಹಾಲು ತುಪ್ಪವನ್ನು ಅರ್ಪಿಸುತ್ತಾರೆ. ಮಾದೇಶ್ವರನ ಕ್ಷೇತ್ರದಲ್ಲಿ ಹೆಣ್ಣು-ಗಂಡಿನ ಸಂಬಂದಕ್ಕಾಗಲೀ, ಮಾಂಸ, ಮದ್ಯ

ಸೇವನೆಗೆ ಅವಕಾಶವಿರುವುದಿಲ್ಲ. ಮಾದೇಶ್ವರನ ಜಾತ್ರೆಯ ಸಮಯದಲ್ಲಿ ಗುಡ್ಡರು ದೀಕ್ಷೆ ಪಡೆಯುತ್ತಾರೆ. ಒಕ್ಕಲಿಗರು, ಹರಿಜನರು, ಕುರುಬಗೌಡರು ಹೆಚ್ಚಾಗಿ ದೀಕ್ಷೆ ಪಡೆಯುತ್ತಾರೆ.

ಕಾರ್ತಿಕ ಮಾಸದಲ್ಲಿ ವಿಶೇಷಪೂಜೆ ನಡೆಯುತ್ತದೆ. ಮಲೆಮಾದಪ್ಪನ ದೇವಸ್ಥಾನದ ಮುಖ್ಯದ್ವಾರ, ಆಲಂಬಾಡಿ ಬಸವಣ್ಣನಿಗೆ ದೀಪಗಳಿಂದ ಅಲಂಕರಿಸುತ್ತಾರೆ. ರಾತ್ರಿಯಿಂದ ಬೆಳಗಿನ ಜಾವದವರೆಗೂ ಪೂಜಾ ಕಾರ್ಯಕ್ರಮಗಳು ನಡೆಯುತ್ತವೆ. ಹರಕೆ ಹೊತ್ತ ಭಕ್ತರಿಂದ ಹುಲಿವಾಹನ ಸೇವೆ, ಬಸವನ ಉತ್ಸವದ ಸೇವೆ, ಬೆಳ್ಳಿ ಕಿರೀಟ. ಮತ್ತು ಬಂಗಾರದ ರಥೋತ್ಸವಗಳು ನಡೆಯುತ್ತವೆ. ಹುಲಿವಾಹನ ಮತ್ತು ಬಸವ ವಾಹನದ ಉತ್ಸವ ಗರ್ಭಗುಡಿಯ ಸುತ್ತಲೂ ಸುತ್ತುತ್ತವೆ. ಹರಕೆ ಹೊತ್ತ ಭಕ್ತಾದಿಗಳು ಕಂಡಾಯವನ್ನು ಹಿಡಿದು ಹುಲಿವಾಹನ ಮತ್ತು ಬಸವನ ವಾಹನದ ಹಿಂದೆ ಗರ್ಭಗುಡಿಯನ್ನು ಸುತ್ತುತ್ತಾರೆ, ಹಾಗೂ ಇವೆರಡು ವಾಹನಗಳನ್ನು ಹರಕೆ ತೀರಿಸಲು ಎಳೆಯುತ್ತಾರೆ. ನಂತರ ಹುಲಿವಾಹನದ ಮೇಲೆ ಮಾದೇಶ್ವರನ ಉತ್ಸವ ಮೂರ್ತಿಯನ್ನಿಟ್ಟು ಮೆರವಣಿಗೆ ಮಾಡುತ್ತಾರೆ. ಹರಕೆ ಹೊತ್ತ ಎಷ್ಟೋ ಭಕ್ತಾದಿಗಳು ಮುಡಿಸೇವೆ, ಧೂಪದ ಸೇವೆ, ಪಂಜಿನ ಸೇವೆ, ಉರುಳು ಸೇವೆ, ಅನ್ನದಾಸೋಹವನ್ನು ನಡೆಸುತ್ತಾರೆ.

ಈ ರೀತಿಯಾಗಿ ಮಾದೇಶ್ವರನಿಗೆ ಸಂಬಂಧಿಸಿದ ಆಚರಣೆಗಳು ಇಂದಿಗೂ ನಡೆದುಕೊಂಡು ಬರುತ್ತವೆ. ಇಲ್ಲಿ ಸೇರುವ ಭಕ್ತರು ಜಾತಿ, ಮತ, ಮೇಲು ಕೀಳು, ಬಡವ, ಶ್ರೀಮಂತ ಎಂಬ ಭೇದಗಳನ್ನು ತೊರೆದು ದಯೆ, ಶಾಂತಿ ಮತ್ತು ಸಮರ್ಪಣಾ ಭಾವವನ್ನು ಹೊಂದಿರುತ್ತಾರೆ. ದೀಕ್ಷೆ ಪಡೆದ ಗುರುಗಳು ಭಿಕ್ಷೆಯನ್ನು ಕೇಳುವವರಾಗಿದ್ದು, ಈ ಸೇವೆಯನ್ನು ಅನೇಕ ಪ್ರತಿಜ್ಞಾ ವಿಧಿಗಳಂತೆ ನಡೆಸಿಕೊಂಡು ಹೋಗುತ್ತಾರೆ. ದೀಕ್ಷೆ ಪಡೆದ ಗುರುಗಳೇ ಮಾದಪ್ಪನ ಶಿಶುಮಗನೆಂದು ಜೀವಿಸುತ್ತಾರೆ.

**ಮಂಟೇಸ್ವಾಮಿಗೆ ಸಂಬಂಧಿಸಿದ ಆಚರಣೆಗಳು**

ಮಳವಳ್ಳಿ ತಾಲ್ಲೂಕು ಬೊಪ್ಪೆಗೌಡನ ಪುರದಲ್ಲಿರುವ ಮಂಟೇಸ್ವಾಮಿಗಳು ಶೂದ್ರ ಸಮುದಾಯಕ್ಕೆ ಸೇರಿದ ಅಲ್ಲಮ ಪ್ರಭುವಿನ ಅವತಾರವಾಗಿ ಹುಟ್ಟಿ ಬಂದ ಬಂಡಾಯಗಾರನೆಂದೆ ಹೇಳಬಹುದು. ಇಂತಹ ಮಹಾ ಪುರುಷನು ಜೀವಂತ ಇರುವಾಗಲೇ ಬೊಪ್ಪೆಗೌಡನ ಪುರದಲ್ಲಿ ಜೀವ ಸಮಾಧಿಯಾದರು ಎಂಬ ಹೇಳಿಕೆಗಳಿವೆ. ಇಲ್ಲೆ ಇವರ ಗದ್ದುಗೆಯು ಇದೆ. ನೀಲಗಾರ ಸಮುದಾಯವು ಮಂಟೇಸ್ವಾಮಿಯನ್ನು ಪೂಜಿಸುತ್ತಾರೆ. ಕಾವ್ಯದಲ್ಲಿ ಹೇಳಿರುವಂತೆ ಕಾಲಜ್ಞಾನದ ಪೂಜೆಯೂ ಇಲ್ಲಿ ನಡೆಯುತ್ತದೆ. ಮಂಟೇಸ್ವಾಮಿಗೆ ದೀಪಾವಳಿ, ಶಿವರಾತ್ರಿಯಂದು ಜಾತ್ರೆ ನಡೆಯುತ್ತದೆ. ಶಿವರಾತ್ರಿಯಿಂದ ಯುಗಾದಿ ಹಬ್ಬದವರೆಗೆ ಜಾತ್ರೆ ನಡೆಯುತ್ತದೆ.

**ಮಂಟೇಸ್ವಾಮಿಯ ಶಿಷ್ಯ ಸಿದ್ದಾಪ್ಪಾಜಿಯ ಚಿಕ್ಕಲೂರು ಜಾತ್ರೆ**

ಸಿದ್ದಾಪ್ಪಾಜಿಯು ಮಂಟೇಸ್ವಾಮಿಯ ಮೊದಲ ಶಿಷ್ಯನಾಗಿದ್ದು ಇವರ ಗದ್ದುಗೆ ಕೊಳ್ಳೆಗಾಲ ತಾಲ್ಲೂಕಿನ ಚಿಕ್ಕಲೂರು ಗ್ರಾಮದಲ್ಲಿದೆ. ಸಿದ್ದಾಪ್ಪಾಜಿಯ ಜಾತ್ರೆ ಒಂದು ವಾರದವರೆಗೂ ವಿಜೃಂಭಣೆಯಿಂದ ನಡೆಯುತ್ತದೆ. ಸಿದ್ದಾಪ್ಪಾಜಿಯ ಜಾತ್ರೆ ಚಂದ್ರಮಂಡಲದಿಂದ ಪ್ರಾರಂಭವಾಗುತ್ತದೆ.

**ಚಂದ್ರಮಂಡಲದ ಪೂಜೆ:** ಸಿದ್ದಾಪ್ಪಜಿಯ ಜಾತ್ರೆ ಚಂದ್ರಮಂಡಲದಿಂದ ಪ್ರಾರಂಭವಾಗುತ್ತದೆ. ಚಂದ್ರಮಂಡಲವನ್ನು ನಿರ್ಮಿಸುವ ಹೊಣೆ ಸುಂದ್ರಳ್ಳಿ, ಶಾಗ್ಯ, ತೆಳ್ಳನೂರು, ಇಕ್ಕಡವಳ್ಳಿ, ಊರಿನ ಹರಿಜನರಿಗೆ ಸೇರಿದ್ದು. ಅದಕ್ಕೆ ಬೇಕಾದ ವಸ್ತುಗಳನ್ನು ಅವರೇ ತರುತ್ತಾರೆ. ಹಸಿಬಿದಿರಿನಿಂದ ನಿರ್ಮಾಣವಾದ ಚಂದ್ರಮಂಡಲದಲ್ಲಿ ಭಕ್ತರು ಎಣ್ಣೆ, ತುಪ್ಪವನ್ನು ಅರ್ಪಿಸುತ್ತಾರೆ. ಮಠದ ಬುದ್ಧಿಗಳು ಚಂದ್ರಮಂಡಲಕ್ಕೆ ಉರಿಯನ್ನು ಕೊಡುತ್ತಾರೆ. ಚಂದ್ರಮಂಡಲ ಉರಿಯುವಾಗ ಭಕ್ತಾದಿಗಳು ದವಸ, ಧಾನ್ಯ, ಎಣ್ಣೆ, ತುಪ್ಪವನ್ನು ಎಸೆಯುತ್ತಾರೆ. ಚಂದ್ರಂಡಲ ಉರಿದು ಬೂದಿಯಾದ ಮೇಲೆ ಭಕ್ತರು ಅದನ್ನು ಮಟ್ಟಿಕಪ್ಪು ಮಾಡಿಕೊಂಡು ತಮ್ಮ ಮನೆಗಳಿಗೆ ತೆಗೆದುಕೊಂಡು ಹೋಗುತ್ತಾರೆ. ಅಂದು ಅಲ್ಲೇ ಬಿಡಾರ ಹಾಕಿ ಸಿಹಿ ಅಡುಗೆ ಮಾಡಿ ಸೇವಿಸುತ್ತಾರೆ.

**ದೊಡ್ಡಮ್ಮತಾಯಿಯ ಪೂಜೆ:** ದೊಡ್ಡಮ್ಮ ತಾಯಿ ಮಂಟೇಸ್ವಾಮಿಯ ಶಿಶುಮಗಳಾಗಿ ಜನಿಸಿದ ಮೇಲೆ ಸಿದ್ದಾಪ್ಪಾಜಿಯ ಜಾತ್ರೆಯಲ್ಲಿ ವಿಶೇಷ ಸ್ಥಾನ ನೀಡಲಾಗಿದೆ. ಜಾತ್ರೆ ಸಂದರ್ಭದಲ್ಲಿ ಭಕ್ತರು ಹರಕೆಯನ್ನು ತೀರಿಸಲು ಮುತ್ತನಳ್ಳಿಗೆ ಬರುತ್ತಾರೆ. ಮುತ್ತನಳ್ಳಿಯಲ್ಲಿ ದೊಡ್ಡಮ್ಮತಾಯಿಯ ಗದ್ದುಗೆಯಿದ್ದು ಒಕ್ಕಲಿನ ಹೆಣ್ಣುಮಕ್ಕಳು ಈ ತಾಯಿಯ ಕುರಿತು ಹಾಡುತ್ತಾರೆ.

**ಮುಡಿಸೇವೆ:** ನೀಲಗಾರ ಪರಂಪರೆಯ ಕುಟುಂಬದ ಮೊದಲ ಮಗನು ತನ್ನ ಮುಡಿ ಕೊಟ್ಟು ದೀಕ್ಷೆ ಸ್ವೀಕರಿಸುತ್ತಾನೆ. ಅವನು ಅಂದಿನಿಂದ ಗುರುವಾಗಿ ಭಿಕ್ಷೆಯನ್ನು ಬೇಡುತ್ತಾ ಸಿದ್ದಾಪ್ಪಾಜಿಯ ಶಿಷ್ಯನಾಗುತ್ತಾನೆ. ಇನ್ನೂ ಅನೇಕ ಸಮುದಾಯದವರು ತಮ್ಮ ಹರಕೆಯನ್ನು ತೀರಿಸಲು ಮುಡಿಯನ್ನು ನೀಡುತ್ತಾರೆ.

**ಪಂತಿಸೇವೆ:** ಈ ಜಾತ್ರೆಯ ಬಿಡದಿಯಲ್ಲಿ ತಂಗಿದ್ದವರಿಗೆ, ತಮ್ಮ ಮಗನಿಗೆ ದೀಕ್ಷೆ ಕೊಟ್ಟವರು, ಕಂಡಾಯ ಹೊತ್ತವರು, ಹರಕೆ ಹೊತ್ತವರು ಪಂತಿಸೇವೆಯನ್ನು ನಡೆಸಿಕೊಡುತ್ತಾರೆ. ಈ ಪಂತಿಸೇವೆಯಲ್ಲಿ ಬಾಡೂಟ, ಸಿಹಿಯೂಟವು ಇರುತ್ತದೆ.

**ಮುತ್ತತ್ತಿರಾಯನ ಸೇವೆ:** ಕಾವ್ಯದಲ್ಲಿ ಇರುವಂತೆ ಸಿದ್ದಾಪ್ಪಾಜಿಯು ಮಾರಿಯರೊಂದಿಗೆ ಹೋರಾಟ ಮಾಡುವಾಗ ಮುತ್ತತ್ತಿಯು ಸಹಾಯ ಮಾಡುತ್ತಾನೆ, ಅದರ ನೆನಪಿಗಾಗಿ ಚಿಕ್ಕಲೂರಿನಲ್ಲಿ ಭಕ್ತರು ದೀಪ ಬೆಳಗಿಸುವುದರ ಮೂಲಕ ಚಿಕ್ಕಲೂರು ಜಾತ್ರೆಯನ್ನು ಮುಕ್ತಾಯಗೊಳಿಸುತ್ತಾರೆ.

**ಮಂಟೇಸ್ವಾಮಿಯ ಶಿಷ್ಯ ರಾಚಪ್ಪಾಜಿಯ ಕಪ್ಪಡಿ ಜಾತ್ರೆ**

ಕಾವೇರಿ ತೀರದಲ್ಲಿರುವ ಕಪ್ಪಡಿಯಲ್ಲಿ ರಾಚಪ್ಪಾಜಿಯ ಗದ್ದುಗೆಯಿದ್ದು ಇಲ್ಲಿ ಶಿವರಾತ್ರಿಯಿಂದ ಜಾತ್ರೆ ಪ್ರಾರಂಭಗೊಂಡು ಯುಗಾದಿಯ ಹಬ್ಬದಲ್ಲಿ ಎದುರು ಸೇವೆ ಆದ ಮೇಲೆ ಜಾತ್ರೆ ಮುಕ್ತಾಯಗೊಳ್ಳುತ್ತದೆ. ಜಾತ್ರೆಯನ್ನು ಗುರುಮಠದವರು ನಡೆಸಿಕೊಡುತ್ತಾರೆ. ಬೊಪ್ಪಗೌಡನಪುರದಲ್ಲಿರುವ ಕಾಲಜ್ಞಾನದ ಕಟ್ಟನ್ನು ಕಪ್ಪಡಿಗೆ ಒಪ್ಪಸುವುದರ ಮೂಲಕ ಬುದ್ಧಿಯವರು ಪೂಜೆ ಪ್ರಾರಂಭಿಸುತ್ತಾರೆ. ಕಪ್ಪಡಿಯಲ್ಲಿ ಪ್ರಾರಂಭವಾದ ಜಾತ್ರೆ ಮುತ್ತನಳ್ಳಿಯಲ್ಲಿ ಕೊನೆಗೊಳ್ಳುತ್ತದೆ. ಬೊಪ್ಪೆಗೌಡನದಲ್ಲಿದ್ದ ಸ್ವಾಮಿಗಳು ಜಾತ್ರೆ ಮುಗಿಸಿ ಬರುವ ಸ್ವಾಮಿಗಳನ್ನು ಎದುರುಗೊಳ್ಳುತ್ತಾರೆ.

ಕಪ್ಪಡಿಯಲ್ಲೇ ಇರುವ ಚೆನ್ನಾಜಮ್ಮನಿಗೂ ರಾಚಪ್ಪಾಜಿಯೊಂದಿಗೆ ಪೂಜೆ ನಡೆಯುತ್ತವೆ. ಚೆನ್ನಾಜಮ್ಮನ ಗದ್ದುಗೆಯು ಕಪ್ಪಡಿಯಲ್ಲೇ ಇದ್ದು ಮಂಟೇಸ್ವಾಮಿಯ ಶಿಶುಮಗಳಾಗಿದ್ದಾಳೆ.

**ಕಂಡಾಯಗಳ ಪೂಜೆ:** ಕಂಡಾಯಗಳ ಪೂಜೆ ಇಲ್ಲಿ ಪ್ರಮುಖವಾಗಿರುತ್ತದೆ. ಮಂಟೇಸ್ವಾಮಿ. ಸಿದ್ದಾಪ್ಪಾಜಿ. ಯವರ ಸಂಕೇತವಾಗಿ ಕಂಡಾಯಗಳನ್ನು ಬಳಸುತ್ತಾರೆ. ಈ ಸಾಂಸ್ಕೃತಿಕ ನಾಯಕರು ಕ್ಷುದ್ರ ದೇವತೆಗಳ ಸಂಹಾರಕ್ಕಾಗಿ ಕಂಡಾಯಗಳನ್ನು ಹೊಂದಿದ್ದರು. ಇದು ದುಷ್ಟ ಶಿಕ್ಷೆ, ಶಿಷ್ಟ ರಕ್ಷಣೆ ಎಂಬ ಸಂಕೇತವಾಗಿ ಕಂಡಾಯಗಳನ್ನು ಸಮುದಾಯದವರು ಪೂಜಿಸುತ್ತಾರೆ.

ಮಂಟೇಸ್ವಾಮಿಗಳು ದಕ್ಷಿಣಕ್ಕೆ ಪ್ರಯಾಣ ಮಾಡಿ ತಳವರ್ಗದವರ ಪರವಾಗಿ ಹೋರಾಡಿದುದರ ಫಲವಾಗಿ ಪ್ರಧಾನವಾದ ಸಂಸ್ಕೃತಿಯೊಂದು ರೂಪಕೊಂಡಿತು. ತಿಂಗಳುಗಳವರೆಗೆ ನಡೆಯುವ ಮಂಟೇಸ್ವಾಮಿ ಆಚರಣೆಗಳು ಸಾಮಾಜಿಕ ಸಂರಚನೆಯ ನಿರ್ಮಾಣಕ್ಕೆ ಕಾರಣವಾಗುತ್ತವೆ.

**ಜುಂಜಪ್ಪನಿಗೆ ಸಂಬಂಧಿಸಿದ ಆಚರಣೆಗಳು**

ಅಲೆಮಾರಿ ಸಮುದಾಯದ ಜುಂಜಪ್ಪ ತಮ್ಮ ಪಶುಗಳ ರಕ್ಷಣೆಗಾಗಿಯೇ ಹೋರಾಡಿ ಕೊನೆಗೆ ಸೋದರಮಾವಂದಿರ ಕುತಂತ್ರಕ್ಕೆ ಬಲಿಯಾಗಿ ಪ್ರಾಣಬಿಟ್ಟ. ಜುಂಪ್ಪನನ ಸಮಾಧಿ ಅವನು ಹುಟ್ಟಿ ಬೆಳೆದ ಕಳುವೋರಳ್ಳಿಯಲ್ಲಿ ಇದೆ. ಹಾಗೂ ಜುಂಜಪ್ಪನ ಸಮಾಧಿ ಎದುರಿಗೆ ಬಡಮೈಲ (ಹಸು) ನ ಸಮಾಧಿಯು ಇದೆ. ಜುಂಜಪ್ಪನ ಸಮಾಧಿಯನ್ನು ಜುಂಜಪ್ಪನ ಗುಡ್ಡೆ ಎಂದು ಕರೆಯುತ್ತಾರೆ. ಜುಂಪ್ಪನ ಸಮಾಧಿಯ ಮೇಲೆ ಕಲ್ಲು ಹಾಸಿ, ಕಲ್ಲು ಗುಡಿಯ ಮೇಲೆ ಬೆನವನ್ನು ಇಟ್ಟು ಪೂಜಿಸುತ್ತಾರೆ. ಜುಂಜಪ್ಪನೊಂದಿಗೆ ಇದ್ದ ಜೂಲುನಾಯಿಯ ಗುಡ್ಡೆಯು ಇದೆ. ದಾರಿಯಲ್ಲಿ ಹೋಗುವವರು ಈ ಗುಡ್ಡೆಯ ಮೇಲೆ ಒಂದು ಕಲ್ಲನ್ನು ಎತ್ತಿ ಹಾಕಿದರೆ ಅವರಿಗೆ ಒಳ್ಳೆಯದಾಗುತ್ತದೆ ಎಂಬ ಪ್ರತೀತಿಯು ಇದೆ. ಈ ಕಲ್ಲು ಗುಡ್ಡೆ ಈಗಲೂ ಇದೆ.

ದೀಪಾವಳಿ ಹಬ್ಬದ ದಿನ ಜುಂಜಪ್ಪನ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ. ಮೇಲುದೀವಿಗೆ, ಮತ್ತು ಕಿರುದೀವಿಗೆ ಎಂದು ಎರಡು ದಿನ ವಿಶಿಷ್ಟ ಆಚರಣೆಗಳೊಂದಿಗೆ ನಡೆಯುತ್ತದೆ ಹಾಗೂ ಯುಗಾದಿಯ ಮರುದಿನ ದೊಡ್ಡ ಜಾತ್ರೆ ನಡೆಯುತ್ತದೆ. ಶಿವರಾತ್ರಿಯಂದು ರಾತ್ರಿಯಿಡೀ ಜುಂಜಪ್ಪನ್ನು ಆರಾಧಿಸುತ್ತಾರೆ. ಊರಿನ ಹಿರಿಯರು ರಾತ್ರಿಯೆಲ್ಲಾ ಜುಂಜಪ್ಪನ ಕಥೆಯನ್ನು ಗಣೆಯೊಂದಿಗೆ ಹಾಡುತ್ತಾರೆ. ಜುಂಜಪ್ಪನ ಪೂಜೆ ಮಾಡುವ ಜವಾಬ್ದಾರಿ ಕುಂಚಿಟಿಗ ಮತ್ತು ಒಕ್ಕಲಿಗರ ಸಮುದಾಯಕ್ಕೆ ಸೇರಿದೆ.

ಜುಂಜಪ್ಪನ ಜೊತೆಗೆ ಇತರೆ ದೇವತೆಗಳ ಜಾತ್ರೆಯು ವಿಜೃಂಭಣೆಯಿಂದ ನಡೆಯುತ್ತದೆ. ಕಾವ್ಯದಲ್ಲಿ ಬರುವ ಕರಿಯಮ್ಮ, ಗೋರಸಂದ್ರ ಮಾರಮ್ಮ, ತಿಮ್ಮಪ್ಪ, ಚಿತ್ರದೇವರು ಮೊದಲಾದ ದೇವರನ್ನು ಬೇವಿನಳ್ಳಿಯಿಂದ ಕಳುವೋರಳ್ಳಿಯ ಜುಂಜಪ್ಪನ ಸನ್ನಿಧಿಗೆ ತಂದು, ಗಂಗಾಸ್ನಾನ ಮಾಡಿಸಿ, ದೀಪೋತ್ಸವ, ಮಣೆವುಸೇವೆ. ಆಚರಣೆಗಳನ್ನು ನಡೆಸುತ್ತಾರೆ. ನಂತರ ಅದೇ ಸಂಜೆ ಪಲ್ಲಕ್ಕಿಯಲ್ಲಿ ದೇವರುಗಳನ್ನು ಬೇವಿನಳ್ಳಿಗೆ ತಂದು ಉತ್ಸವ ನಡೆಸುತ್ತಾರೆ.

ಜುಂಜಪ್ಪನು ಕಾಡುಗೊಲ್ಲ ಸಮುದಾಯದ ಸಂಸ್ಕೃತಿಯನ್ನು ವಿಶಿಷ್ಟವಾಗಿ ಚಿತ್ರಿಸಿದ್ದಾನೆ. ಪಶುಪಾಲಕ ಜೀವನ ಶೈಲಿಯನ್ನು ಹೊಂದಿರುವ ಜುಂಜಪ್ಪನು ಜೀವದಯೆಯಂಬ ತತ್ವವನ್ನು ಪಾಲಿಸುತ್ತಿದ್ದು ಪಶುಗಳ ರಕ್ಷಣೆಗಾಗಿಯೇ ತನ್ನ ಜೀವವನ್ನು ಅರ್ಪಿಸಿದ ಮಹಾನಾಯಕನಾಗಿದ್ದಾನೆ.

**ಮೈಲಾರಲಿಂಗನಿಗೆ ಸಂಬಂಧಿಸಿದ ಆಚರಣೆಗಳು**

ಬಳ್ಳಾರಿ ಜಿಲ್ಲೆಯ ಹೂವಿನಡಗಲಿಯಲ್ಲಿ ನಡೆಯುವ ಮೈಲಾರನ ಜಾತ್ರೆ ವಿಶೇಷತೆಯಿಂದ ಕೂಡಿದ್ದು, ಇಲ್ಲಿ ಯಾವುದೇ ಜಾತಿ, ಜನಾಂಗ, ಸಮುದಾಯದ ಜನರು ಎಂಬ ಭೇದ ಭಾವವಿಲ್ಲದೆ ಎಲ್ಲಾ ಸಮುದಾಯದವರು ಭಾಗವಹಿಸುತ್ತಾರೆ. ಇಲ್ಲಿ ಭಂಡಾರದ ಪೂಜೆಯು ವಿಶೇಷವಾಗಿ ನಡೆಯುತ್ತದೆ. ಮೈಲಾರಲಿಂಗನ ಆಚರಣೆಗಳು ಯುಗಾದಿಯಿಂದ ಆರಂಭವಾಗಿ ಭಾರತ ಹುಣ್ಣಿಮೆಯವರೆಗೆ ನಿರಂತರವಾಗಿ ಜರುಗುತ್ತಿರುತ್ತವೆ. ಇವುಗಳಲ್ಲಿ ಕೆಲವು ಉತ್ಸವಗಳಿವೆ. ಲಕ್ಷಾಂತರ ಸಂಖ್ಯೆಯಲ್ಲಿ ಜನ ಭಾಗವಹಿಸುತ್ತಾರೆ.

**ಮೈಲಾರ ಲಿಂಗನ ಆಚರಣೆಗಳು**

೧ ಯುಗಾದಿ ಹಬ್ಬದ ಆಚರಣೆ

೨ ಅಗೇ ಹುಣ್ಣಿಮೆ

೩ ಅಗಿ ಹೊಯ್ಯುವುದು

೪ ಲಗ್ನದ ಕಾರ್ಯಕ್ರಮ

೫ ಸುರಗಿಯ ಕಾರ್ಯಕ್ರಮ

೬ ಅಕ್ಷತಾರೋಪಂ

೭ ಓಕುಳಿ ಕಾರ್ಯಕ್ರಮ

೮ ಶಯ್ಯ ಪ್ರವೇಶ

೯ ನವರಾತ್ರಿ ಆಚರಣೆ

೧೦ ಖಂಡೆ ಪೂಜೆ

೧೧ ವಿಜಯದಶಮಿ

೧೨ ಕುದುರೆಯ ಹಬ್ಬ

೧೩ ಭಂಡಾರ ಛಟ್ಟ

೧೪ ಧನುರ್ಮಾಸ

೧೫ ಬನದ ಹುಣ್ಣಿಮೆ

೧೬ ಖನದ ಹುಣ್ಣಿಮೆ

೧೭ ರಥಸಪ್ತಮಿ (ಕಾರ್ಣಿಕ)

೧೮ ಗುಗ್ಗರಿಹಬ್ಬ

೧೯ ಕಿಚಡಿಹಬ್ಬ

೨೦ ಭಾರತಹುಣ್ಣಿಮೆ

೨೧ ಮೌನ ಸವಾರಿ

೨೨ ಕಾರಣೀಕೋತ್ಸವ

ಮೈಲಾದಲ್ಲಿ ನಡೆಯುವ ಕಾರ್ಣಿಕವು ವಿಶಿಷ್ಟವಾಗಿ ಜರುಗುತ್ತದೆ. ಕಾರ್ಣಿಕವನ್ನು ಕಾರ್ಣಿಕದ ಗೋರಪ್ಪನು ನಡೆಸಿಕೊಡುತ್ತಾನೆ. ಶಿವಧನಸ್ಸು ಹಿಡಿದ ಗೋರಪ್ಪ ಮೈದಾನಕ್ಕೆ ಪ್ರವೇಶಿಸುತ್ತಿದ್ದಂತೆ ಸದ್ದಲೇಪರಾಕ್ ಎನ್ನುತ್ತಿದ್ದಂತೆ ಜನರೆಲ್ಲ ಸ್ತಬ್ಧವಾಗಿ ನಿಲ್ಲುತ್ತಾರೆ. ಕಾರ್ಣಿಕ ನುಡಿದ ಗೊರವಪ್ಪ ಶಿವಧನಸ್ಸಿನಿಂದ ಕೆಳಗೆ ಬೀಳುತ್ತಾರೆ. ಗೊರಪ್ಪರು ಈ ಕಾರ್ಣಿಕವನ್ನು ಹಾಡಿನ ಮೂಲಕ ಎಲ್ಲರಿಗೂ ತಿಳಿಸುತ್ತಾರೆ. ಕಾರ್ಣಿಕದ ಗೊರವಪ್ಪ ನುಡಿದ ಕಾರ್ಣಿಕವು ನಾಡಿನ ಒಳ್ಳೆಯದು ಕೆಟ್ಟದು, ಮಳೆ. ಬೆಳೆಯ ಕುರಿಯ ಭವಿಷ್ಯವೆಂದು ಜನ ನಂಬುತ್ತಾರೆ. ಮೈಲಾರದಲ್ಲಿ ಗಂಗಿಮಾಳಮ್ಮ ಮತ್ತು ಕೋಮಾಲಿಯ ದೇವಾಸ್ಥಾನಗಳಿದ್ದು ಮೈಲಾರನ ಜಾತ್ರೆ ನಡೆಯುವಾಗ ಈ ಸಾಂಸ್ಕೃತಿಕ ನಾಯಕಿಯರಿಗೂ ಪೂಜೆ, ಆಚರಣೆಗಳು ನಡೆಯುತ್ತವೆ.

ಮೈಲಾರಲಿಂಗನ ಭಕ್ತರು ಭಾನುವಾರದಂದು ಆರಾಧ್ಯದೈವವಾಗಿ ಗಂಗಿಮಾಳಮ್ಮನ ಪೂಜೆಯನ್ನು ಮಾಡುತ್ತಾರೆ. ಕಡೂರು, ತರೀಕೆರೆ, ಚಿತ್ರದುರ್ಗ, ಹೊಸದುರ್ಗ, ಹೊಳಲ್ಕೆರೆ ಭಾಗಗಳಿಂದಲೂ ಬಂದ ಜನರು ಗಂಗಿಮಾಳಮ್ಮನನ್ನು ಪೂಜಿಸುತ್ತಾರೆ. ಮೈಲಾರನ ಪೂಜಾ ವಿಧಿ ವಿಧಾನಗಳನ್ನು ಗಂಗೆಮಾಳಿ ಆರಾಧನೆಗೂ ಅನುಸರಿಸುತ್ತಾರೆ. ಗಂಗಿಮಾಳಿಯ ಆಚರಣೆಯಲ್ಲಿ ಢಮರುಗ ಬಾರಿಸುವುದು, ಮತ್ತು ಗೊರವರ ಸೇವೆ ಇರುತ್ತದೆ. ಉತ್ಸವ ಮೆರವಣಿಗೆಗಳಲ್ಲಿ ಡೊಳ್ಳು ಬಾರಿಸುವ, ಕುಣಿತ ಪ್ರದಶನವೂ ಇರುತ್ತದೆ..

**ಮಾಳಿಂಗರಾಯನಿಗೆ ಸಂಬಂಧಿಸಿದ ಆಚರಣೆಗಳು**

ಮಾಳಿಂಗರಾಯನಿಗೆ ಸಂಬಂಧಿಸಿದ ಆಚರಣೆಯು ತುಂಬಾ ವಿಜೃಂಭಣೆಯಿಂದ ನಡೆಯುತ್ತದೆ. ಕುರುಬ ಸಮುದಾಯದವರು ಮಾಳಿಂಗರಾಯನ ಪೂಜಾ ವಿಧಿ ವಿಧಾನಗಳನ್ನು ನಡೆಸುತ್ತಾರೆ. ಮಾಳಿಂಗರಾಯನ ಪಲ್ಲಕ್ಕಿ ಮೊದಲು ಗುರು ಬೀರೇಶ್ವರರ ಸಮಾಧಿಯನ್ನು ಭೇಟಿಯಾಗಿ ನಂತರ ಮಾಳಿಂಗರಾಯನನ್ನು ಪಲ್ಲಕ್ಕಿಯಲ್ಲಿ ಪ್ರತಿಷ್ಠಾಪಿಸುತ್ತಾರೆ. ಪಲ್ಲಕ್ಕಿಯು ನಗಾರಿ, ಡೊಳ್ಳಿನ ಶಬ್ದದೊಂದಿಗೆ ಬುಹ್ಯಾರದ ಹನುಂತನ ಗುಡಿಗೆ ಹೋಗುತ್ತದೆ. ಅಲ್ಲಿಂದ ಗುಂಡಿ ಗಿಡಕ್ಕೆ ಬಸವಣ್ಣನಿಗೆ ಪ್ರದಕ್ಷಿಣೆ ಹಾಕಿ

ಕರಚಿಮಡದಲ್ಲಿ ಪಲ್ಲಕ್ಕಿ ಇಡುತ್ತಾರೆ. ಇಲ್ಲಿ ಮಾಳಿಂಗರಾಯನಿಗೆ ಪೂಜೆ, ನೈವೇದ್ಯಗಳು ನಡೆಯುತ್ತವೆ. ಇವೆಲ್ಲಾ ಮಾಳಿಂಗರಾಯನ ಜಾತ್ರೆಗೆ ಪ್ರಾರಂಭ ಎಂದು ತಿಳಿಸುತ್ತವೆ.

ಕರಚಿನ ಮಡದಿಂದ ಪಲ್ಲಕ್ಕಿ ಮೊರಿಹಳ್ಳಕ್ಕೆ ಬರುತ್ತದೆ. ಅಲ್ಲಿನ ಭಕ್ತರು ಮಾಳಿಂಗರಾಯನಿಗೆ ಸಿಹಿಯ ನೈವೇದ್ಯ ಮಾಡುತ್ತಾರೆ. ನಂತರ ಪಲ್ಲಕ್ಕಿ ಹುನೂರು ಮಠಲ್ಲಿ ತಂಗುತ್ತದೆ. ಇಲ್ಲಿ ಅಣ್ಣ ತಮ್ಮರ ಭೇಟಿಯಾಗಿ ಮೂರು ದಿನಗಳ ನಂತರ ಪಲ್ಲಕ್ಕಿ ಹನುಮಂತದೇವರ ಗುಡಿ, ಬುಹ್ಯಾರ,ಹುಲಿಜಂತಿಗೆ ಬಂದು ಸೇರುತ್ತದೆ. ನಂತರ ಸಿಡಿಯಾಣ ಮಠದಲ್ಲಿ ಶೀಲವಂತಿ ಮತ್ತು ಬೀರಪ್ಪನ ಜಾತ್ರೆ ಇರುತ್ತದೆ.

ಸುಮಾರು ಲಕ್ಷಾಂತರ ಜನರು ಸೇರುವ ಈ ಜಾತ್ರೆಯಲ್ಲಿ ಡೊಳ್ಳಿನಹಾಡು, ಹುಗ್ಗಿ ನೈವೇದ್ಯ, ಭಂಡಾರ ತೂರುವುದು, ಸಮೂಹ ಊಟ ಮಾಡುವುದು ಇವೆಲ್ಲ ವಿಶಿಷ್ಟ ಸಂಸ್ಕೃತಿಯಿಂದ ಮಾಳಿಂಗ ರಾಯ ಮುಖ್ಯನಾಗುತ್ತಾನೆ.

ಒಟ್ಟಿನಲ್ಲಿ ಆಚರಣೆಗಳು ಒಂದು ಸಮುದಾಯದ ಸಾಂಪ್ರದಾಯಕತೆಯನ್ನು ಮಾದರಿ ಮೂಲಕ ತೋರಿಸುವುದಾಗಿದೆ. ಮೌಖಿಕ ಕಾವ್ಯಗಳು ಜನಜೀವನವನ್ನು ಅರ್ಥಮಾಡಿಕೊಳ್ಳುವ ಸಾಂಸ್ಕೃತಿಕ ನಾಯಕರು ಕೆಳಸ್ತರದಲ್ಲಿ ಹುಟ್ಟಿ ಅವರ ಜೀವನ ನಂಬಿಕೆ, ವೃತ್ತಿ, ಧರ್ಮಗಳ ಮೇಲೆ ಪ್ರಭಾವ ಬೀರಿದರು. ವಮೌಖಿಕ ಕಾವ್ಯಗಳು ಸಂಪ್ರದಾಯು ಆಚರಣೆಗಳು ಶಿಷ್ಟ ಪರಂಪರೆಗೂ ಮುಂದುವರೆದುಕೊಂಡು ಬಂದು ಈ ನಾಯಕರನ್ನು ಪಾಲಿಸುವ ಸಮುದಾಯಗಳು ಹೆಚ್ಚಾಗುತ್ತಿವೆ. ಜನರ ಮೇಲಿನ ಕಾಳಜಿ ಈ ನಾಯಕರಿಗೆ ಒಂದು ಚರಿತ್ರೆಯನ್ನು ತಂದು ಕೊಟ್ಟಿದೆ.

### ಸ್ತ್ರೀ ದೇವತೆಗಳು

ತಾಯಿ ಪ್ರತ್ಯಕ್ಷ ದೇವತೆ. ಆಕೆ ಬರೀ ತಾಯಿಯಾಗಿ ಕಾಣದೆ ಹೆಂಡತಿ, ಸಹೋದರಿ, ಗೆಳತಿಯಾಗಿ ಅನೇಕ ಮುಖಗಳಾಗಿ ಅವಳ ಜೀವನ ಕ್ರಮ ಬೆಳೆದು ಬಂದಿದೆ. ಪುರುಷ ಸಮುದಾಯ ತಾಯಿಯನ್ನು ಪ್ರಕೃತಿಯ ಇನ್ನೊಂದು ರೂಪವೆಂದು ತಿಳಿದಿದ್ದಾನೆ. ಅದು ಕುಟುಂಬದಲ್ಲಿ ಆಗಲಿ, ಸಮುದಾಯದಲ್ಲೆ ಆಗಲಿ ಮಹಿಳೆ ಸೃಷ್ಟಿಯ ಭಾಗವಾಗಿದ್ದಾಳೆ. ಮಾನವ ಸಂಸ್ಕೃತಿಯ ವಿಕಾಸಕ್ಕೆ ನೆಲೆಯಾಗಿ ನಿಂತು ಜಗತ್ತನ್ನೇ ಮುನ್ನಡೆಸುತ್ತಿದ್ದಾಳೆ. ಆದಿ ಕಾಲದಿಂದಲೂ ಸೃಷ್ಟಿಗೆ ಅಗತ್ಯವಾದ ಜೈವಿಕ ಸರಪಳಿ, ಬಂಧುತ್ವ, ನಿಸರ್ಗ ಜೊತೆಗಿನ ಮಾನವ ಸಂಬಂಧವನ್ನು ಉಳಿಸಿಕೊಂಡು ಬೆಳೆಸಿದವಳು ಸ್ತ್ರೀಯಾಗಿದ್ದಾಳೆ.

ಮೌಖಿಕ ಕಾವ್ಯಗಳಲ್ಲಿ ಕಾಡನ್ನೆ ದೈವವೆಂದು ನಂಬಿಕೊಂಡು ವಿಶಿಷ್ಟ ಆಚರಣೆಗಳಲ್ಲಿ ಅಳವಡಿಸಿಕೊಂಡು ಬಂದಿರುವ ಸಮುದಾಯಗಳು ಅನೇಕ. ಮಲೆಮಾದೇಶ್ವರ ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಮಾಳಿಂಗರಾಯ ಕಾವ್ಯಗಳನ್ನು ನೋಡುವುದಾದರೆ ಸೃಷ್ಟಿಯ ಪ್ರಾರಂಭವಾದ ದಿನದಿಂದ ಮಾನವನು ತನ್ನ ಮೂಲಭೂತ ಸೌಕರ್ಯಗಳ ಈಡೇರಿಕೆಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುತ್ತಿದ್ದ ಆ ಕಾಲದಲ್ಲಿ ಅವನ ಬದುಕಿಗೆ ನಿರ್ದಿಷ್ಟ ನೆಲೆಯಾಗಲಿ ಜೀವನವಾಗಲೀ ಇರಲಿಲ್ಲ, ಪರಿಸರದಲ್ಲಿ

ಬೆಳೆಯುವ ವಸ್ತುಗಳು ಪ್ರಾಣಿಗಳು ಇವರ ಜೀವನಾಧಾರವಾಗಿ ಅಲೆಮಾರಿಗಳಾಗಿ ಜೀವನ ನಡೆಸುತ್ತಿದ್ದ ಅನಿವಾರ್ಯತೆ ಇತ್ತು. ಕೆಲವು ವೇಳೆ ಪ್ರಕೃತಿಯ ವಿಕೋಪದಿಂದಾಗಿ ಜೀವನವು ಕಷ್ಟವಾಗದೊಡಗಿದಾಗ ಪ್ರಕೃತಿಯನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡುತೊಡಗಿದುದರ ಫಲವಾಗಿ ಮಾನವನು ನಿಸರ್ಗವನ್ನು ಪೂಜಿಸತೊಡಗಿದನು. ಅಂದಿನಿಂದ ಅಲೆಮಾರಿಯಾಗಿದ್ದ ಮನುಷ್ಯ ಒಂದೆಡೆ ನೆಲ ನಿಂತಾಗ ಅವನ ಬದುಕಿಗಾಗಿ ದೇವರ ಕಲ್ಪನೆ ಮಾಡತೊಡಗಿತು.

ಆಹಾರ ಸಂಗ್ರಹಣೆ, ಪ್ರಕೃತಿ ಪೂಜೆ ಇನ್ನು ಮಾನವನಲ್ಲಿ ಗಂಡು-ಹೆಣ್ಣನ್ನು ಒಟ್ಟಾಗಿ ವಾಸಿಸುವುದರ ಮೂಲಕ ಅವರು ಅಸ್ತಿತ್ವ ಕಂಡುಕೊಳ್ಳತೊಡಗಿದರು. ಸ್ತ್ರೀಯರು ಮಕ್ಕಳನ್ನು ಹೆರುವುದು, ಆಹಾರ ಸಂಗ್ರಹಿಸುವುದು, ಮಕ್ಕಳ ಲಾಲನೆ ಪಾಲನೆಯಲ್ಲಿ ತೊಡಗಿದ್ದರೆ, ಪುರುಷನು ಪಶುಸಂಗೋಪನೆ, ಕೃಷಿಯಲ್ಲಿ ಕಾರ್ಯನಿರತನಾಗಿರುತ್ತಿದ್ದ. ಇದರಿಂದ ಮಹಿಳೆಗೆ ವಿಶೇಷ ಸ್ಥಾನ, ಮಾನ, ಗೌರವಗಳು ದೊರೆತವು. ಕಾಲಕ್ರಮೇಣ ಮಹಿಳೆ ದೈವತ್ವಕ್ಕೇರತೊಡಗಿದಳು.

"ಸ್ತ್ರೀ ಗರ್ಭಧಾರಣಾ ಶಕ್ತಿ ಮತ್ತು ಭೂಮಿಯ ಸಂಸ್ಕರಣಾ ಶಕ್ತಿಯನ್ನು ಗೌರವಿಸಿ ಮಾನ್ಯ ಮಾಡಿದ ಕೃಷಿ ಹಂತದ ಚಟುವಟಿಕೆಗಳು ಸ್ತ್ರೀಯನ್ನು ಮತ್ತೆ ದೇವಸ್ಥಾನಕ್ಕೆ ಏರಿಸಿದವು. ಗ್ರಾಮದೇವತೆಗಳ ಸೃಷ್ಟಿ ಆರಂಭವಾದದ್ದು ಹೀಗೆ ಎನ್ನುತ್ತಾರೆ. ಡಾ॥ ಹಿ.ಚಿ.ಬೋರಲಿಂಗಯ್ಯನವರು"[೨೦] ಅಂದಿನಿಂದ ಮಾತೃದೇವತಾರಧನೆಯು ಜಾರಿಗೆ ಬಂದಿತು. ಇದು ಸಾವಿರ ವರ್ಷಗಳ ಹಿಂದೆ ಇದ್ದಂತಹ "ಸಿಂಧೂ ಕಣಿವೆಯಲ್ಲಿ ದೊರೆತಿರುವ ಅನೇಕ ಸ್ತ್ರೀ ವಿಗ್ರಹಗಳೇ ಇದಕ್ಕೆ ಸಾಕ್ಷಿ ಎನ್ನಬಹುದು. ಸಿಂಧೂ ಸಂಸ್ಕೃತಿಯಲ್ಲಿ ಮಾತೃ ದೇವತೆಯನ್ನು ಭೂಮಿಯ ತಾಯಿಯೆಂದು, ಮಾನವರ ಮಾತೆಯೆಂದೂ ದೇವತೆಗಳ ತಾಯಿ ಎಂದೂ, ಅರಣ್ಯ, ಪ್ರಾಣಿ, ಧ್ಯಾನ, ಪತ್ನಿ ಇವುಗಳ ಮಾತೃವೆಂದು ಪೂಜಿಸಲಾಗಿದೆ."[೨೧] ಇಂದು ಭಾರತದಲ್ಲಿ ಅನೇಕ ಸ್ತೋತ್ರ ಆರಾಧನೆಯನ್ನು ಕಾಣುತ್ತೇವೆ. ಅದರಂತೆ ಅವಳನ್ನು ಮನೆದೇವತೆ ಎಂದು ಪರಂಪರಾಗತವಾಗಿ ಉಲ್ಲೇಖಿಸಿಕೊಂಡು ಆಚರಿಸಿರುವುದನ್ನು ಕಾಣುತ್ತೇವೆ. ತಾಯಿಯನ್ನು ಸಾಕ್ಷತ್ ದೇವತೆ ಎಂಬ ಪರಿಕಲ್ಪನೆಯೇ ಜನರಲ್ಲಿ ಸ್ತ್ರೀದೇವತೆಯ ಕಲ್ಪನೆ ಗಾಢವಾಗಿ ಬೆಳೆಯಲು ಕಾರಣವಾಯಿತು. ಮಾನವ ತನ್ನ ಹಾಗೂ ತನ್ನವರ ರಕ್ಷಣೆಗಾಗಿ ತಾನು ನಿರ್ಧಿಷ್ಟವಾಗಿ ನೆಲೆಸಿದ ಪ್ರದೇಶದಲ್ಲಿ ತನ್ನ ದೇವತೆಯ ಹೆಸರಿನಲ್ಲಿ ಗುಡಿಕಟ್ಟಿಸಿ ತಮ್ಮದೇ ಸಮುದಾಯಗಳ ಆಚರಣೆಗಳೊಂದಿಗೆ ಪೂಜಿಸತೊಡಗಿದರು.

ಕೆಲವು ದೇವತೆಗಳನ್ನು ಸ್ಥಾಪಿಸುವದರ ಹಿಂದೆ ಭಾರತದಲ್ಲಿ ವರ್ಣ, ಜಾತಿ, ಸಂಘರ್ಷಗಳ ನೆರಳು ಇದೆ, "ಯಾವುದೇ ದೇವತೆಗೆ ಕುರಿ, ಕೋಣ ಮುಂತಾದ ಪ್ರಾಣಿಗಳ ಬಲಿ ಕೊಡುವಾಗ ಜನರ ದೃಷ್ಟಿಯಲ್ಲಿ ಇದು ಕೇವಲ ಅರ್ಪಣೆ ಎನ್ನುವ ಭಾವನೆ ಮಾತ್ರ ಇರುವುದಿಲ್ಲ, ಬಲಿ ಪದ್ದತಿಯ ಮೂಲಕ ಒಂದು ವೃಂದ ತನ್ನ ಅಸಂತೃಪ್ತ ದೇವತೆಯನ್ನು ಸಂತೃಪ್ತಗೊಳಿಸಿ ಆ ದೇವರೊಂದಿಗೆ ತಾನು ಬಂದಿದೇನೆ ಎಂದು ಭಾವಿಸುತ್ತಾ ಬಂದಿತು. ಬಲಿ ಪದ್ದತಿಯಿಂದ ರಕ್ತವನ್ನು ಚೆಲ್ಲಿದಾಗ ಆ ದೇವತೆಗೂ ತಮಗೂ ಒಂದು ಅವಿನಾಭದ ರಕ್ತ ಸಂಬಂಧ ಏರ್ಪಡುತ್ತದೆ ಎನ್ನುವುದು ಇವರ

ಆಳವಾದ ತಿಳಿವಳಿಕೆ"[೨೨] ಡಾ. ವೈ.ಸಿ ಭಾನುಮತಿಯವರು ತಿಳಿಸುವಂತೆ "ಚಾಮರಾಜಗರ ಜಿಲ್ಲೆಯ ಕೆಲವು ದಲಿತ ಸಮುದಾಯದಲ್ಲಿ ದೊಡ್ಡಮ್ಮ ತಾಯಿ ಮತ್ತು ಮಂಟೇಸ್ವಾಮಿಯನ್ನು ಪೂಜಿಸಿ ಬೀದಿ ಬೀದಿಯಲ್ಲಿ ಉತ್ಸವ ಮಾಡುತ್ತಾರೆ. ಇವರು ಊರಿನ ರಕ್ಷಕ ದೇವತೆಗಳು ಈ ಸಂದರ್ಭದಲ್ಲಿ ಪಾರ್ವತಿ ದೇವರ ಗುಡ್ಡರು, ಮಾದೇಶ್ವರ ದೇವರ ಗುಡ್ಡರು, ಕಂಡಾಯ ಹೊತ್ತು ಸಂಚರಿಸುವರು, ತಮ್ಮಟ್ಟೆಗಳು ರೋಗವನ್ನು ಹೊರಗೆ ಅಟ್ಟುವ ರೀತಿಯಲ್ಲಿ ಜೋರಾಗಿ ಕೂಗುತ್ತಾ ಕೇಳುಗರಲ್ಲಿ ಭಯ ಮೂಡಿಸುವರು, ಮನೆಗಳಲ್ಲಿ ಮಡಕೆ ಇಕ್ಕುವುದು ಎಂದು ಮನೆ ಶುಚಿಗೊಳಿಸಿ ಹಳೆಯದನ್ನೆಲ್ಲ ಹೊರಹಾಕಿ ಹೊಸ ಮಡಕೆ ಇಟ್ಟು ಪುನರಾಂಭಿಸುತ್ತಾರೆ, ಮಡಕೆ ತೆಗೆಯುವ ಸಂದರ್ಭದಲ್ಲಿ ದಾಸಯ್ಯನನ್ನು ಕರೆಸಿ ಮನೆಗೆ ಪುಣ್ಯಾರ್ಚನೆ ಮಾಡಿಸುವುದುಂಟು"[೨೩]

ಮಂಟೇ ಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿಯು ಗದ್ದುಗೆ ಏರಲು ತನ್ನ ಭಕ್ತ ಕೆಂಪಣ್ಣನನ್ನು ಶಿಶುಮಗನಾಗಿ ಪಡೆಯಲು ನಿಡುಘಟ್ಟ ಗ್ರಾಮದ ಬಸವಾಚಾರಿ ಮತ್ತು ಮುದ್ದಮ್ಮರ ಮನೆಗೆ ಹೋಗುತ್ತಾನೆ, ಆಗ ಆ ದಂಪತಿಗಳು ಮಗನನ್ನು ನೀಡಲು ಒಪ್ಪದಿದ್ದಾಗ ಮಂಟೇಸ್ವಾಮಿ ಮಾರಿಯರು ಕೂಗುವ ಸನ್ನಿವೇಶವು ರೋಮಾಂಚಕವಾಗಿವೆ.

"ಬನ್ರವ್ವ ಮಾರೀರೇ,
ಬನ್ರವ್ವ ದುರ್ಗಿರೇ,
ಬನ್ರವ್ವ ಚೌಡೀರೇ,
ನನ್ನ ಶಿವ ಸಮುದ್ರದ ಮಾರವ್ವ
ಓಡು ಬಮ್ಮ ಎಂದಾರಲ್ಲ
ನನ್ನ ಶಿವ ಸಮುದ್ರದ ಮಾರಿ
ಎದ್ದು ಬಾವ್ವ ನನ್ನ ಕಂದಾ
ನನ್ನ ಹೆಬ್ಬೆಟ್ಟಿರಿಯಾ ದೇವತಿ
ಓಡು ಬಾವ್ವ ನನ್ನ ಕಂದಾ"

ಮಾರಿಗಿಂತ ಮಂಟೇಸ್ವಾಮಿ ಕಾವ್ಯದಲ್ಲಿ ಕಾಳಮ್ಮನ ಇರುವಿಕೆ ತುಂಬಾ ಸೊಗಸಾಗಿ ಕಂಡು ಬರುತ್ತದೆ.

"ಅವಳ ಬೆಟ್ಟದ ಗಾತ್ರ ಮಾರೀ"
ಹೊಟ್ಟೆಯ ಬುಟ್ಟಗಂಡು
ಗುಡ್ಡೇ ಗಾತ್ರ ಮಾರಿ
ತಲೆಯನ್ನು ಬುಟ್ಟುಗಂಡು

ತೊಂಡೆ ಗಾತ್ರ ಮಾರಿ
ಮೂಗನ್ನು ಬುಟ್ಟಗಂಡು
ಎರಡು ವಂದ್ರೀಯಗಲ ಮಾರಿ
ಕಣ್ಣನ್ನೇ ಬುಡ್ಗಂಡು
ಗವಿಅಗಲ ಮಾರವ್ವ
ಬಾಯನ್ನೇ ಬುಟುಕೊಂಡು
ಅವಳು ಎಪ್ಪತ್ತುಮೊಳದ ಸೀರೆ
ಒಂದೆ ಸುತ್ತಿಗೆ ಸುತ್ತಿಗುಂಡು
ಸುತ್ತುಗಂಡು ಮಾರಮ್ಮ
ಅವಳು ಒಂದ್ಕಂಡ್ಗ ಕುಂಕುಮವಾ
ಹಣೆಗಚ್ಚಿಕೊಂಡು

..

..

..

ವದಿ ಕಂಡು ಮಲಗವಳೆ.
ಅವಳ ಹನ್ನೆರಡಂಕಳ ಗುಡಿವಳಗೆ
ಒಬ್ಬಳೆ ಒಳ್ಳಾಡುತ್ತಾಳೆ ॥೨॥
ಕಾಳಮ್ಮ ದೇವತೆ ಮಂಟೇಸ್ವಾಮಿ ಕೂಗಿದ ಶಬ್ದ ಕೇಳಿ
ಅಮ್ಮ ಬಿಚ್ಚಿದ ಮಂಡೆ ತಾಯಿ
ಅವಳು ಕಟ್ಟಿನಿಲ್ಲ ಮಾರವ್ವ
ಅವಳ ಧರೆಗೆ ದೊಡ್ಡವರ ಕೂಗ
ಕಿವಿಯಾರ ಕೇಳಕ್ಕಂಡು
ನನ್ನ ಗುರು ಕೂಗುತಾರೆ
ಮುಟೇದ ಲಿಂಗಪ್ಪ ಇವತ್ತು ಕರೆತಾರೆ
ಅಯ್ಯಾ ಗುರುಕಟ್ಟೆ ಮಾತುಗೆ
ನಾ ಹೇಗಬೇಕು ಎಂತ
ಆಚಾರ್ರು ಮನೆದೇವತೆ ಕುಲುಮೆ ಕಾಳಮ್ಮ

ನನ್ನ ಧರೆಗೆ ದೊಡ್ಡವರ ಒಳಗೆ

ಒದ್ದು ಕೆಡದು ಬರುವುತಾಳೆ ॥[೨೫]

ಕಾಳಮ್ಮ ಎದ್ದು ಬರುವ ರೀತಿಯು ಮಂಟೇಸ್ವಾಮಿ ಸಾಂಸ್ಕೃತಿಕ ನಾಯಕನಾಗಿ ಅನೇಕ ಪವಾಡ, ಮಾಟ, ಮಂತ್ರಗಳನ್ನು ಮಾಡಿದ್ದರೂ ಸಹ ಗ್ರಾಮದೇವತೆಗಳಲ್ಲಿ ಹೆಸರಾದ ಕಾಳಮ್ಮ ಮಂಟೇಸ್ವಾಮಿಯದುರು ಭಕ್ತಿಯಿಂದ ನಡೆದುಕೊಳ್ಳುವುದನ್ನು ನೋಡಬಹುದು.

ಜುಂಜಪ್ಪನ ಕಾವ್ಯದಲ್ಲಿ ಸ್ತ್ರೀದೇವತೆಗಳ ಪಾತ್ರ ತುಂಬಾ ಪ್ರಮುಖವಾದದ್ದು, ಈ ಕಾವ್ಯದಲ್ಲಿ ಬರುವ ಗೌರಸಂದ್ರದ ಮಾರಿಯ ಪಾತ್ರ, ಅನೇಕ ಸಂದರ್ಭದಲ್ಲಿ ಜುಂಜಪ್ಪನ ರಕ್ಷಣೆಗಾಗಿಯೇ ಬರುತ್ತದೆ. ಗೌರಸಂದ್ರ ಮಾರಮ್ಮ ಜುಂಜಪ್ಪನ ಮೂರು ತಲೆ ಮಾರಿನವರೆಗೂ ನಡೆದುಕೊಂಡು ಕಾಪಾಡಿಕೊಂಡು ಬಂದಿರುವನ್ನು ಕಾಣಬಹುದು. ಗೌರಸಂದ್ರ ಮಾರಮ್ಮನ ಕತೆ ಬೇರೆ ಸ್ತ್ರೀ ದೇವತೆಗಳಿಗಿಂತ ವಿಭಿನ್ನವಾಗಿದ್ದು ಈಕೆಯನ್ನು ಹುತ್ತದ ರೂಪದಲ್ಲಿ ಪೂಜಿಸುತ್ತಾರೆ. "ಈಕೆಯ ಮೂಲ ವಸ್ತುಗಳು ಇರುವ ಪೆಟ್ಟಿಗೆಯನ್ನು ದೇವರೆಂದು ಪೂಜಿಸುತ್ತಾರೆ, ಹೀಗಾಗಿ ಇದೊಂದು ಪೆಟ್ಟಿಗೆ ದೇವರು, ಈ ಪೆಟ್ಟಿಗೆಯೊಳಗಿರುವ ಮೂಲ ವಸ್ತುಗಳನ್ನು ಇದುರವೆಗೂ ಯಾರು ನೋಡಿಲ್ಲ, ಹಬ್ಬದ ಹಿಂದಿನ ದಿನ (ಸಾಮಾನ್ಯವಾಗಿ ಗುಗ್ಗರಿ ಹಬ್ಬದ ಹಿಂದಿನ ದಿನ) ಗರ್ಭಗುಡಿಯೊಳಗೆ ಸ್ವತಃ ಪೂಜಾರಿಯೊಬ್ಬನೇ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಈ ಮೂಲ ವಸ್ತುಗಳನ್ನು ಶುಚಿ ಮಾಡುವ ಸಂಪ್ರದಾಯ ರೋಚಕವಾಗಿದೆ."[೨೬]

ಈ ಕಾವ್ಯದಲ್ಲಿ ಗೌರಸಂದ್ರ ಮಾರಮ್ಮನನ್ನು ಕಣಿ ಹೇಳುವ ಕೊರವಂಜಿಯಾಗಿ ರೂಪ ತಾಳಿದಾಗ ಅವಳ ವೇಶಭೂಷಣವನ್ನು ಈ ರೀತಿ ವರ್ಣಿಸುತ್ತಾರೆ.

"ಮೂಗಿತಿ ಮುಂಬಾರ

ಉಣಿಗಂಟು ಹಿಂಬಾರ

ತಲೆನೋರೆ ಪುಟ್ಟಗೆಮ್ಮ

ಕೈಯೊಳಗೆ ನಾಗುದು ಬೆತ್ತ

ತೊಳಿಗೂ ಬಂಧಿಯೂ

ಬುಗುಡಿಸಿಯಾಕುದು ಕೊರಳೊಳು

ಗೌರಸಂದ್ರ ಮಾರಮ್ಮ

ಕಣಿ ಹೇಳುವ ಕೊರವಂಜಿ

ಬರುತಾಳೋ ಶಂಕರನೆ

ಕಾಡಿನೊಳಗಯ್ಯೋ ಗಳಿಗಾಗೋ"[೧೭]

ಜುಂಜಪ್ಪನು ಹುಟ್ಟಿದಾಗ ಅವನಿಗೆ ಜನ್ನಿಗೆ ಹಾಕಿಸುವ ಸಂದರ್ಭದಲ್ಲಿ ಪೂಜಾರಿಯ ಸಿದ್ದಯ್ಯನ ಮಗಳು ಸೀತಮ್ಮ ಮಗುವನ್ನು ನೋಡಿದಾಗ ಕಣ್ಣುಗಳು ಹೋಗುತ್ತವೆ. ಆಗ ಊರಿನ ಜನರು ಸಿನ್ನಮ್ಮ ಅವಳ ಮಾವ ಆಲೇಗೌಡನನ್ನು ಊರಿನಿಂದ ಓಡಿಸುವರು. ಆಗ ತಾಯಿ ಸಿನ್ನಮ್ಮ ತೊಟ್ಟಿಲನ್ನು ಹೊತ್ತು ಊರಿನ ಹೊರಗೆ ದಿಣ್ಣೆಯ ಬಳಿ ಬರುವಾಗ ಜುಂಜಪ್ಪ ತೊಟ್ಟಿಲನ್ನು ಇಳಿಸಲು ಕೇಳಿಕೊಳ್ಳಲು ಸಿನ್ನಮ್ಮ ತೊಟ್ಟಿಲನ್ನು ಇಳಿಸಿದ ಕೂಡಲೇ ತೊಟ್ಟಿಲೊಳಗಿದ್ದ ಜುಂಜಪ್ಪ ೭ ವರ್ಷದ ಮಗುವಾಗಿ ನಿಂತು ತನ್ನ ಇಡೀ ಊರಿನ ಮಾರಮ್ಮಗಳನ್ನೆಲ್ಲಾ ಕರೆದನು.

"ಕರದ್ರಂಬ್ರಳಿಮಾರಿ

ಕರಿಬೇವಿನಹಳ್ಳಿ ಮಾರಿ

ಗೌರುಸಂದುರುದಮ್ಮ

ಶೀರೆದುಸಿರುವಂತಿ

ಗಾದಿನ ಗೂಡಿನಾಗ್ ಹುಟ್ಟಿದವಳೆ

ಸ್ವಾರೆ ಕುಂಟೆ ಕರಿಯಮ್ಮ

ಬೇವಿನಹಳ್ಳಿ ಕರಿಯಮ್ಮ

ಆಗಲುವಾಡಿ ಕರಿಯಮ್ಮ

ದಂಡಿನ ಮಾರಮ್ಮ

ಮನೆದೇವುಲೆ ಗೌರುಸುಂದುರದಮ್ಮ

ಏಳಟ್ಟಿ ಸುಟ್ಟಂತ

ಹಟ್ಟಿ ಮಾರಮ್ಮ

ಸಿಕ್ಕನಹಳ್ಳಿ ಕರಿಯಮ್ಮ

ಶಿಟ್ಟಹಳ್ಳಿ ಮಾರಮ್ಮ

ನೂರೇಳು ಮಂದಿ ಮಾರೇರೆ

ಬರಬೇಕು ಅಂದನು ಜುಂಜಪ್ಪ ॥ಶಿವನಿಗೋ॥"[೨೮]

ಈ ಮೇಲಿನ ಪದ್ಯವನ್ನು ಗಮನಿಸಿದರೆ ಊರಿನ ಮಾರಮ್ಮರಿಗೆ ಜುಂಜಪ್ಪನೇ ಅಧಿಪತಿಯಾಗಿದ್ದಾನೆ. ಅವರೆಲ್ಲರೂ ಅವನ ಆಜ್ಞೆಯಂತೆ ವರ್ತಿಸುತ್ತಾರೆ. ಜುಂಜಪ್ಪ ಎಲ್ಲ ಮಾರಿಯರನ್ನು ಕರೆದು ಊರಿಗೆ ಸಿಡುಬು, ವಾಂತಿ, ಭೇದಿಯಿಂದ ನಾಶಮಾಡುವಂತೆ ಆಜ್ಞೆ ಮಾಡುತ್ತಾನೊ ಎಂಬ ಭಯ ಉಂಟಾಗುತ್ತದೆ. ಆದ್ದರಿಂದಲೇ ಎಲ್ಲಾ ಮಾರಿಯರು ಜುಂಜಪ್ಪನ ಆದೇಶದಂತೆ ನಾಶಮಾಡಿದ್ದನ್ನು ಕಾಣಬಹುದು.

ಇಷ್ಟೆ ಅಲ್ಲದೆ ಜುಂಜಪ್ಪನ ಕಾವ್ಯದಲ್ಲಿ ಬೇವಿನಹಳ್ಳಿ ಕರಿಯಮ್ಮ, ಕರೇ ಒಬೇನಹಳ್ಳಿ ಅಮ್ಮ ಮೊದಲಾದ ಮಾರಿದೇವತೆಗಳನ್ನು ಪೂಜಿಸುತ್ತಾರೆ. ಈ ಎಲ್ಲಾ ಮಾರಿಯರು ಸ್ತ್ರೀ ದೇವತೆಗಳು. ಜುಂಜಪ್ಪ ಎತ್ತಪ್ಪ ಮೊದಲಾದ ಕಾಡುಗೊಲ್ಲರ ಪ್ರಧಾನ ದೇವತೆಗಳ ಸಹಕಾರದಂತೆ ಕಾರ್ಯನಿರ್ವಹಿಸುತ್ತಾರೆ.

ಮಾದೇಶ್ವರನ ಕಾವ್ಯದಲ್ಲಿ ಮಾದೇಶ್ವರ ನೂಕಳ್ಳಿ ಮಾರಮ್ಮ, ಕಾಳಿ ಕಂಕಾಳಿಯರನ್ನು ಅವರ ಸೊಕ್ಕನ್ನು ಮುರಿದು ತಾನು ಹೇಳಿದಂತೆ ನಡೆದುಕೊಳ್ಳುವಂತೆ ಮಾಡುತ್ತಾನೆ. "ಕಾಳಿ ಕಂಕಾಳಿ ಮಾರಿಯರು ಶ್ರವಣ ದೊರೆಗೆ ಹುಲಿಯ ಹಾಲು, ಕರಡಿಯ ಹಾಲನ್ನು ಕರೆದು ಗಡಿಗೆಗಳಲ್ಲಿ ತುಂಬಿಕೊಂಡು ಹೋಗುತ್ತಿದುದ್ದನ್ನು ನೋಡಿ ಮಾದಯ್ಯ ತನಗೂ ಸ್ವಲ್ಪ ಹಾಲನ್ನು ಕೊಡುವಂತೆ ಅವರನ್ನು ಕೇಳಿದ. ಕೊಡದೆ ಬಿಂಕದಿಂದ ಹೋಗುತ್ತಿದ್ದ ಅವರನ್ನು ಹಿಡಿದು ಎಡಕಟ್ಟು ಕಟ್ಟಿ ಅವರು ಹೊತ್ತ ಬಿಂದಿಗೆಯನ್ನು ಜಾಡಿಸಿದನು"[೨೮] ಮಾದೇಶ್ವರನು ತನ್ನ ಒಕ್ಕಲುಗಳನ್ನು ಹೆಚ್ಚಿಸಿಕೊಳ್ಳುವ ಸಂದರ್ಭದಲ್ಲಿ ಹಾಗೂ ಅರಣ್ಯದಲ್ಲಿ ಇದ್ದ ಮಾರಿಯರನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಯಾವುದಾದರು ಸಮುದಾಯ ತನಗೆ ಒಕ್ಕಲಾಗಲೂ ಒಪ್ಪದಿದ್ದರೆ ಅವರ ಸರ್ವನಾಶಕ್ಕೆ ಮತ್ತು ಬುದ್ದಿ ಕಲಿಸಲು ಈ ಮಾರಿಯರನ್ನು ಕರೆಯುತ್ತಿದ್ದನು.

ಮೌಖಿಕ ಕಾವ್ಯಗಳ ನಾಯಕರು ಶಿಷ್ಟ ಪರಂಪರೆಗಿಂತ ತಮ್ಮದೇ ಹೊಸ ಪರಂಪರೆಯನ್ನು ಕಟ್ಟಬಯಸಿದರು. ಅದಕ್ಕಾಗಿ ಅಗತ್ಯವಾದ ಸಮುದಾಯಗಳನ್ನು, ಶಿಶು ಮಕ್ಕಳನ್ನು ಪಡೆಯುವಲ್ಲಿ ವಿವಿಧ ರೀತಿಯ ಆಚರಣೆಗಳನ್ನು ಜಾರಿಗೆ ತಂದರು. ಈ ನಾಯಕರು ಸಾಮಾಜಿಕ ಕಾಳಜಿಯಿಂದ ತಮ್ಮದೇ ಆದ ಪಂಥಗಳನ್ನು ನಿರ್ಮಾಣ ಮಾಡಿದರು. ಹೋರಾಟ. ಸಂಘರ್ಷ, ದ್ವಂದ್ವ, ಸ್ತ್ರೀ ದೇವತೆಗಳೊಂದಿಗಿನ ಕಾದಾಟ, ಸಹಕಾರ ಇವೆಲ್ಲವುಗಳು ಒಂದು ಪ್ರತಿ ಸಂಸ್ಕೃತಿಯನ್ನು ಪ್ರಶ್ನಿಸುವಂತೆ ನಾಯಕರು ಆಚರಣೆಗಳ ಮೂಲಕ ತಮ್ಮ ಅನನ್ಯತೆಯನ್ನು ಉಳಿಸಿಕೊಂಡು ಬಂದಿದ್ದಾರೆ.

ಆಚರಣೆಗಳಲ್ಲಿ ನಾಯಕರದೆ ಮೇಲುಗೈ ಆಗಿದ್ದು ಸ್ತ್ರೀ ದೇವತೆಗಳು ಅವರ ಪ್ರಭುತ್ವವನ್ನು ಒಪ್ಪಿಕೊಂಡು ತಮ್ಮ ಅಸ್ತಿತ್ವವನ್ನು ಬಿಟ್ಟುಕೊಟ್ಟಿದ್ದಾರೆ. ಇದು ಶಿಷ್ಟ ಮತ್ತು ಮೌಖಿಕ ಪರಂಪರೆಗಳ ಮಧ್ಯೆ ನಡೆಯುವ ರಾಜಕಾರಣದಂತೆ ಕಂಡರೂ ನಾಯಕರು ತಳ ಸಮುದಾಯಗಳ ಪರವಾಗಿ ನಿಂತು ಮೇಲ್ವರ್ಗದ ಪರಂಪರೆಯನ್ನು ಪ್ರಶ್ನಿಸುತ್ತಾರೆ.

**೫.೩. ಮಹಾಕಾವ್ಯಗಳಲ್ಲಿನ ನಾಯಕಿಯರು**

ಮಾತೃದೇವೋಭವ– ಉಪನಿಷತ್ತು

ಗೃಹಿಣಿ ಗೃಹ ಮುಚ್ಛತೆ– ಸುಭಾಷಿತ

ಜನನೀ ಜನ್ಮಭೂಮಿಶ್ಚ ಸ್ವಾರ್ಗಾದಪಿ ಗರೀಯಸಿ– ರಾಮಾಯಣ

ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ– ಶಿಕ್ಷಣತಜ್ಞರು

ಹೆಣ್ಣು ಸಂಸಾರದ ಕಣ್ಣು – ನಾಣ್ಣುಡಿ

ದೇವರು ಎಲ್ಲಾ ಕಡೆಗಳಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ತಾಯಂದಿರನ್ನು ಸೃಷ್ಟಿಸಿದ್ದಾನೆ. ತನ್ನ ಸೃಷ್ಟಿಶೀಲತೆ ಒಂದು ಭಾಗವನ್ನು ತನ್ನ ಪ್ರತಿನಿಧಿಗಳಾದ ಮಾತೆಯರಿಗೆ ಅವನು ನೀಡಿದ್ದಾನೆ ಎನ್ನುವಲ್ಲಿ ಹೆಣ್ಣಿನ ಫಲವಂತಿಕೆಯ ದೇವಸೃಷ್ಟಿಗೆ ಸಮಾನವೆನ್ನುವ ಗೌರವ ವ್ಯಕ್ತವಾಗಿದೆ. ಇವೆಲ್ಲವೂ

ಸಮಾಜ ಹೆಣ್ಣಿಗೆ ಕೊಟ್ಟಿರುವ ಗೌರವಯುತ ಸ್ಥಾನಗಳಾಗಿವೆ. ಪುರಷರ ಜೀವನಕ್ಕೆ ಸ್ತ್ರೀ/ಮಹಿಳೆ ಕಳಶಪ್ರಾಯವಿದ್ದಂತೆ.

ವೇದ ಕಾಲದ ಸಾಮಾಜದಲ್ಲಿ ಸ್ತ್ರೀ ಸ್ಮೃತಿಗಳ ಕಾಲದಲ್ಲಿ ಸ್ವಾತಂತ್ರ್ಯ ಕಳೆದುಕೊಳ್ಳುತ್ತಾ ಹೋದಳು. ಮನು ಧರ್ಮಶಾಸ್ತ್ರದಲ್ಲಿ ಹೆಣ್ಣಿನ ಬಗೆಗೆ ಯತ್ರನಾರ್ಯಸ್ತು ಪೂಜ್ಯಂತೆ ರಮಂತೆ ತತ್ರದೇವತಾ ಎಂದು ಒಂದು ಕಡೆ ಹೇಳಿದ್ದಾರೆ. ಈ ಶ್ಲೋಕ ಹೆಣ್ಣಿನ ಪೂಜ್ಯ ಸ್ಥಾನವನ್ನು ಪರಿಚಯಿಸುತ್ತದೆಯಾದರೂ, ಮತ್ತೊಂಡೆಗೆ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಹೇಳುವ ಮೂಲಕ ಹೆಣ್ಣಿನ ಬಗೆಗೆ ದ್ವಂದ್ವ ಅಭಿಪ್ರಾಯಗಳು ಮೂಡಿದೆ"[೩೦]

ಅನಾದಿಕಾಲದಲ್ಲಿ ಸ್ತ್ರೀಗೆ ಅನೇಕ ನಿಷಿದ್ಧ ಕಟ್ಟಳೆಗಳನ್ನು ರೂಪಿಸಲಾಗಿತ್ತು ಮಹಿಳೆ ದೇವರ ಪೂಜೆ ಮಾಡಬಾರದು, ವೇದ ಮಂತ್ರ ಪಠಿಸಬಾರದು. ವೇದವನ್ನು ಓದಬಾರದು ಎಂಬ ಕಟ್ಟಪ್ಪಣೆಗಳಿಂದ ಸ್ತ್ರೀಯ ಕೇವಲ ನಾಲ್ಕುಗೋಡಗೆ ಸೀಮಿತವಾಗಿದ್ದಳು

"ಪಿತಾ ರಕ್ಷತಿ ಕೌಮಾರೇ, ಭರ್ತಾರಕ್ಷತಿ ಯೌವನೇ

ರಕ್ಷಂತಿ ಸಾದಿಕೇ ಪುತ್ರಾ: ಸ್ಥಾವರೇ ನ ಸ್ತ್ರೀ ಸ್ವಾತಂತ್ರಮರ್ಹತಿ"

ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ, ಯವ್ವನದಲ್ಲಿ ಗಂಡನ ಆಶ್ರಯದಲ್ಲಿ, ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿ ಇರುವ ಸ್ತ್ರೀ ಸ್ವಾತಂತ್ರ್ಯಕ್ಕೆ ಅನರ್ಹಳು ಎಂಬುದು ಸ್ಮೃತಿಕಾರನ ಮಾತು, ಜನ್ಮದಾತೆಯಾದ ಸ್ತ್ರೀಯನ್ನು ಗರ್ಭದಿಂದ ಗೋರಿಯವರೆಗೂ ಪಾರತಂತ್ರ್ಯದಲ್ಲಿಯೇ ಬದುಕಲು ಸೂಚಿಸಲಾಗಿದೆ"[೩೧] ಸಮಾಜ ಪರಿವರ್ತನಾಶೀಲವಾದದ್ದು. ಹಾಗೂ ಸಮಾಜದಲ್ಲಿರುವ ಸಮೂಹ, ಸಂಸ್ಥೆ, ವಿಭಾಗಗಳನ್ನು ಮೌಲ್ಯಗಳು, ನೀತಿ, ನಿಯಮ, ಸಂಪ್ರದಾಯಗಳು ಆವರಿಸಿಕೊಂಡಿವೆ, ಸಮಾಜದಲ್ಲಿ ಒಂದು ಭಾಗವಾಗಿರುವ ಮಹಿಳೆ ಪುರುಷ ಪ್ರಧಾನ ಸಾಮಾಜಿಕ ಸಂಬಂಧಗಳ ಬಲೆಯಲ್ಲಿ ಸಿಲುಕಿದ್ದಾಳೆ. ಅಲ್ಲದೆ ತನ್ನದೇ ಮೂಲಭೂತ ಅಗತ್ಯತೆಗಳನ್ನು ಈಡೇರಿಸಿಕೊಳ್ಳಲು ಸಮಾಜದ ನೀತಿ ನಿಯಮಗಳಿಗೆ ಬದ್ಧವಾಗಿದ್ದಾಳೆ. ಸ್ತ್ರೀಯು ಯಾವಾಗಲೂ ಪುರುಷನ ಅಧೀನದಲ್ಲಿರುವಂತೆ ಅವಳ ಸುತ್ತಲೂ ನಿರ್ಮಿತ ವ್ಯವಸ್ಥೆ ರೂಪುಗೊಂಡಿದೆ. ಮಹಿಳೆಯನ್ನು ಅನಾದಿಕಾಲದಿಂದಲೂ ತುಂಬಾ ಕೀಳಾಗಿ ಕಾಣಲಾಗುತ್ತಿದೆ ಅವಳನ್ನು ತುಚ್ಛ ಸ್ಥಾನದಲ್ಲಿಟ್ಟು ಹೀನಾಯವಾಗಿ ನಡೆಸಿಕೊಳ್ಳಲಾಗುತ್ತಿತ್ತು ಎಂಬುದನ್ನು ಮೇಲಿನ ವಾಕ್ಯದಲ್ಲಿ ನೋಡಬಹುದಾಗಿದೆ. ಇಂತಹ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಅನುಭವಿಸುತ್ತಿರುವ ನೋವು ಕಷ್ಟ ನಿರಾಶೆಗಳು ತುಂಬಾ ಶೋಚನೀಯವಾಗಿದೆ. ಮಹಿಳೆಯು ಪುರುಷರ ಹಿತಾಸಕ್ತಿಗೆ ಅನುಗುಣವಾಗಿಯೇ ತನ್ನ ಜೀವನವನ್ನು ರೂಪಿಸಿಕೊಳ್ಳಬೇಕಾಗುತ್ತದೆ, ಸಾಮಾಜಿಕ ಧಾರ್ಮಿಕ, ಸಾಂಸ್ಕೃತಿಕ ಮೌಲ್ಯಗಳನ್ನು ಹೆಣ್ಣಿನ ಸುತ್ತಲೂ ಹೆಣೆಯಲಾಗಿದೆ.

ಸಮಾಜ, ವ್ಯಕ್ತಿ, ಕುಟುಂಬಗಳು ಪುರುಷ ಅಧಿಕಾರದಿಂದಲೇ ಸಾಗಿ ಬಂದಿದೆ. ಆದ್ದರಿಂದಲೇ ಸ್ತ್ರೀ ಮೇಲಿನ ಎಲ್ಲಾ ಅಧಿಕಾರ ಪುರುಷನಿಗೆ ಸೇರಿದ್ದಾಗಿದೆ. ಹಾಗಾಗಿ ಎಲ್ಲದನ್ನು ತನಗೆ ಅನುಕೂಲವಾಗುವಂತೆ ನಿರ್ವಹಿಸುವ ಮತ್ತು ರೂಪಿಸುವ ಅವಕಾಶ ಪುರುಷ ಸಮಾಜಕ್ಕಿದೆ.

ಮಹಿಳೆಯನ್ನು ಕೇಂದ್ರವಾಗಿಟ್ಟುಕೊಂಡು ಲೈಂಗಿಕ ತೃಪ್ತಿ, ದಾಂಪತ್ಯ, ವಿಮುಖತೆ, ಹಿಂಸೆ, ತಾಯ್ತನ, ಪುತ್ರ ಸಂತಾನ ಮದುವೆ, ಇತ್ಯಾದಿ ಸಾಮಾಜಿಕ ಸಂಸ್ಥೆಗಳಲ್ಲಿ ಪುರುಷ ತನ್ನ ಒಳ ಹುನ್ನಾರಗಳನ್ನು ಹಾಕಿಕೊಳ್ಳುತ್ತಾನೆ. ಕಾಲ ಬದಲಾದಂತೆ ಸಾಂಸ್ಕೃತಿಕ ಸ್ಥಿತ್ಯಂತರಗಳ ಬದಲಾಗತೊಡಗಿದಾಗ ಸ್ತ್ರೀ ಸ್ಥಾನಮಾನಗಳು ಬದಲಾಗತೊಡಗಿದವು.

ಸಮಾಜವು ಸಮಾಜೀಕರಣಗೊಳ್ಳುವ ವ್ಯವಸ್ಥೆಯಲ್ಲಿ ಮಹಿಳೆಯು ಒತ್ತಡಗಳಲ್ಲಿ ಸಿಲುಕಿ ತನ್ನ ಅಸ್ತಿತ್ವ ಕಳೆದುಕೊಳ್ಳುತ್ತಾ ಬಂದಳು. ಈ ವ್ಯವಸ್ಥೆ ಮೌಖಿಕ ಕಾವ್ಯಗಳ ಮಹಿಳೆಯರ ಕಾವ್ಯಗಳಲ್ಲಿಯೂ ಜೀವನದಲ್ಲೂ ಕಾಣಬಹುದಾಗಿದೆ. ಮೌಖಿಕ ಸಹ ಮಹಿಳೆಯನ್ನು ಪುರುಷರ ಅಧೀನಕ್ಕೆ ಒಳಪಡಿಸಿರುವುದನ್ನು ಕಾಣಬಹುದು.

ಸಮಾಜದ ಒಂದು ಭಾಗವಾಗಿರುವ ಮಹಿಳೆ ನಿಷೇಧ, ನಡಾವಳಿ ಸಂಪ್ರದಾಯ, ಜೀವನ, ಕ್ರಮ, ಸ್ಥಿತಿಗತಿಗಳು ಮೌಖಿಕ ಸಾಹಿತ್ಯದಲ್ಲಿ ಗೀತೆಗಳ ಮೂಲಕ ಅಭಿವ್ಯಕ್ತಿಗೊಂಡಿವೆ. ಹಾಗೆಯೇ ಪುರುಷರೂ ಮಹಿಳೆಗೆ ಸಂಬಂಧಿಸಿದ ಜೀವನವನ್ನು ಹಾಡಿನ ಮೂಲಕವೇ ದಾಖಲಿಸುತ್ತಾರೆ. ಮಹಿಳೆಯ ಬದುಕಿಗೆ ಅವಿನಾಭಾವದ ಸಂಬಂಧ ಹೊಂದಿರುವ ಒಗಟು, ಗಾದೆ, ಅವರ ಅಭಿವ್ಯಕ್ತಿ ರೂಪಗಳಾಗಿವೆ, ಇವರ ಜೀವನ ಕ್ರಮದಲ್ಲಿ ಆಗುವ ಸ್ಥಿತ್ಯಂತರಗಳು ಒಟ್ಟು ಮೊತ್ತ ಮೌಖಿಕ ಕಾವ್ಯದಲ್ಲಿ ಕಂಡುಬರುತ್ತದೆ. ಮೌಖಿಕ ಸಾಹಿತ್ಯದಲ್ಲಿ ಮಹಿಳೆಯರ ಜೀವನ ವೈಯಕ್ತಿಕ ನೆಲೆಯಲ್ಲಿ ನಿಲ್ಲದೆ ಸಾಮಾಜಿಕ ನೆಲೆಯಲ್ಲಿ ನಿರ್ಧಾರವಾಗುತ್ತದೆ. ಅವಳ ಮದುವೆ, ಸೋಬಾನ, ತಾಯ್ತಿನ ಮುಂತಾದವು ಹೆಣ್ಣಿಗೆ ಜೀವನದ ಮೌಲ್ಯಗಳಾಗಿವೆ, ಇದರಿಂದಾಗಿಯೇ ಅವಳ ಶೀಲ, ಬಂಜೆತನ, ಪಾತಿವ್ರತ್ಯ ಎಲ್ಲವೂ ಸಮಾಜದಲ್ಲಿ ಅವಳ ಘನತೆಯನ್ನು ಹೆಚ್ಚಿಸುವ ವಿಚಾರಗಳಾಗಿವೆ.

ಮೌಖಿಕ ಸಾಹಿತ್ಯಕ್ಕೂ ಮಹಿಳೆಗೂ ಅತ್ಯಂತ ನಿಕಟ ಸಂಬಂಧವಿದೆ ಎಂದೇ ಹೇಳಬಹುದು. ಮಹಿಳೆಯರು ಸಹ ಸಾಹಿತ್ಯ ರಚಿಸಿದ್ದಾರೆ ಕಾವ್ಯ ಹಾಡಿದ್ದಾರೆ. ಈ ಹಾಡಿನಲ್ಲಿ ಅವರ ಬದುಕು ಬವಣೆಯೇ ತುಂಬಿದೆ. ಯಾರಾದರೂ ಭಾರತೀಯ ಮಹಿಳೆಯರನ್ನು ಕುರಿತು ಅಧ್ಯಯನ ಮಾಡಬೇಕೆಂದಿದ್ದರೆ...... ಅವರು ಹೆಂಗಸರು ಹೇಳುವ ಕಥೆಗಳು, ಹಾಡುವ ಹಾಡುಗಳು, ಒಡಪುಗಳು ಮತ್ತು ತೊಂಡಿ ಸಂಪ್ರದಾಯದಲ್ಲಿ ಜೀವಂತವಾಗಿ ಉಳಿದುಕೊಂಡಿರುವ ಜಾಣ್ನುಡಿ, ಆಟಗಳು ಮತ್ತು ಜಾನಪದ ಪರಂಪರೆಯ ದೇವತೆಗಳ ಪೌರಾಣಿಕತೆ ಇವೆಲ್ಲವುಗಳತ್ತ ತಮ್ಮ ಗಮನಹರಿಸಬೇಕಾಗುತ್ತದೆ”[೩] ಎನ್ನುವ ಎ.ಕೆ.ರಾಮಾನುಜನ್ ಅವರ ಮಾತುಗಳು ಸಾಹಿತ್ಯಕ್ಕು ಮಹಿಳೆಗೂ ಇರುವ ನಂಟನ್ನು ಸ್ಪಷ್ಟಡಿಸುತ್ತದೆ.

ಮೌಖಿಕ ಸಾಹಿತ್ಯ ಅಕ್ಷರ ಲೋಕದಿಂದ ದೂರಸರಿಸಲ್ಪಟ್ಟಿದ್ದ ಅನಕ್ಷರಸ್ಥ ಮಹಿಳೆಯರ ಕೈಸೇರಿದೆ. ಅದರಂತೆ ಶಿಷ್ಟ ಲಿಖಿತ ಸಾಹಿತ್ಯ ಚರಿತ್ರೆಯಲ್ಲಿ ಬೆರಳಣಿಕೆಯಷ್ಟು ಮಹಿಳಾ ಕವಯತ್ರಿಯರು ಸಿಗುತ್ತಾರೆ. ಆದರೆ ಮೌಖಿಕ ಸಾಹಿತ್ಯದಲ್ಲಿ ಮಹಿಳಾ ಸಂಕಥನ ಕಾರ್ತಿಯರು ಹೆಚ್ಚಾಗಿ ಇದ್ದರೂ ಅವರನ್ನು ಬೆಳಕಿಗೆ ತರುವಲ್ಲಿ ಪುರುಷ ಸಮಾಜ ಕೆಲವು ಕಟ್ಟು ಪಾಡುಗಳನ್ನು ವಿಧಿಸಿದೆ. ಆದ್ದರಿಂದ ಸ್ವಲ್ಪ

ಪ್ರಮಾಣದಲ್ಲಿ ಸ್ತ್ರೀಯರಿಂದಲೂ ಸ್ವಲ್ಪ ಪ್ರಮಾಣದಲ್ಲಿ ಪುರುಷರಿಂದಲೂ ಕಾವ್ಯ ರಚನೆ ಆಗಿರುವುದನ್ನು ಕಾಣಬಹುದಾಗಿದೆ. ಕಥೆ, ಕಾವ್ಯ, ತ್ರಿಪದಿ, ಕಥನ ಗೀತೆ, ಲಾವಣಿಗಳಲ್ಲಿ ಒಂದೊಂದು ಪ್ರಧಾನ ಸಂಸ್ಕೃತಿ ಒಳಗೊಂಡಿದೆ. ಕೆಲವು ಪ್ರಕಾರಗಳಲ್ಲಿ ರಾಜ, ರಾಣಿ, ಮಕ್ಕಳು, ಯುದ್ಧ, ಪ್ರಧಾನವಾಗಿ ಕಂಡು ಬಂದರೆ ಮತ್ತೆ ಕೆಲವು ಪ್ರಕಾರಗಳಲ್ಲಿ ತ್ಯಾಗ, ಬಲಿದಾನ, ದೈವ, ದೇವರು ಪ್ರಧಾನವಾಗಿ ಕಂಡು ಬರುತ್ತದೆ. ಈ ಎಲ್ಲಾ ಪ್ರಕಾರಗಳಲ್ಲಿ ಮಹಿಳೆಯನ್ನು ಕಾಣುವ ದೃಷ್ಟಿ ಗಮನಾರ್ಹವಾದುದಾಗಿದೆ. ಮೌಖಿಕ ಸಾಹಿತ್ಯದಲ್ಲಿ ಮಾತ್ರವಲ್ಲ ಕೆಳವರ್ಗದ ಸಮುದಾಯ ಸಂಪ್ರದಾಯ ಆಚರಣೆಗಳಿಂದಲೂ ಮಹಿಳೆಯರ ಸ್ಥಾನಮಾನವನ್ನು ನಿರ್ಧರಿಸುತ್ತಾರೆ. ಮೇಲ್ವರ್ಗ, ಕೆಳವರ್ಗಗಳ ಮಹಿಳೆಯರು ತಮ್ಮ ಸಮುದಾಯದ ಪರವಾಗಿ ಹೋರಾಡಿ ದೈವತ್ವಕ್ಕೇರಿದವರು ಇದ್ದಾರೆ.

"ಮಹಿಳೆಯ ಬದುಕಿನ ಸಫಲತೆಯನ್ನು ಪರಾಧೀನತೆ ನೆಲೆಯಲ್ಲಿಯೇ ನಿರ್ಧರಿಸುವ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಎಲ್ಲಾ ಕೆಡಕುಗಳಿಗೆ ಹೆಣ್ಣೇ ಹೊಣೆಯಾಗಿರುತ್ತಾಳೆ. ಹುಟ್ಟು(ಬಂಜೆ), ಸಾವು (ವಿಧವೆ) ಅತಿಯಾದ ಹೆಣ್ಣು ಶಿಶು ಜನನಕ್ಕೂ ಹೆಣ್ಣನ್ನು ಅಪರಾಧಿಯನ್ನಾಗಿಸುತ್ತದೆ."೪ ಇದು ಮೌಖಿಕ ಕಾವ್ಯಗಳ ಕಂಡುಬರುತ್ತದೆ. ಮೌಖಿಕ ಕಾವ್ಯಗಳಲ್ಲಿ ಕಂಡು ಬರುವ ಮಹಿಳೆ ದೇವತೆಯಾಗಿ ಮಗಳಾಗಿ, ತಂಗಿಯಾಗಿ, ಹೆಂಡತಿಯಾಗಿ, ತಾಯಿಯಾಗಿ, ಸೊಸೆಯಾಗಿ, ಶಿಷ್ಯಳಾಗಿ ವ್ಯವಸ್ಥೆಗಳ ವಿರುದ್ಧ ಪ್ರಶ್ನಿಸುವರು ಆಗಿದ್ದಾರೆ, ಮೌನವಾಗಿ ಸಹಿಸುವವರೂ ಅಗಿದ್ದಾರೆ. ಈ ಎರಡೂ ಭಿನ್ನತೆಗಳಿಂದ ಮಹಿಳೆಯು ದೇವತೆ ಎಂಬ ಪಟ್ಟ ಪಡೆಯುತ್ತಾಳೆ, ಮಹಿಳೆ ದೇವರಾಗುವುದು ತನ್ನ ತಾಳ್ಮೆ ಬಲಿದಾನ, ತ್ಯಾಗದಿಂದ, ಎಂದೇ ಹೇಳಬಹುದು. ಮೌಖಿಕ ಕಾವ್ಯಗಳಲ್ಲಿ ಇದು ಹೇರಳವಾಗಿ ಕಂಡುಬರುತ್ತದೆ. ಮಹಿಳೆ ದೇವತೆ/ದೈವವಾಗುವುದನ್ನು ಸಮುದಾಯ ಸಮಾಜ ತಮ್ಮ ವ್ಯವಸ್ಥೆಯ ನಾಯಕಿಯಾಗಿ ಗುರುತಿಸುತ್ತದೆ. ಅವಳನ್ನು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ನಾಯಕಿಯಾಗಿ ಸಂಪ್ರದಾಯ ಆಚರಣೆಗಳನ್ನು ರೂಢಿಸಿಕೊಂಡು ವಿಶೇಷವಾದ ಸ್ಥಾನಮಾನವನ್ನು ನೀಡುತ್ತಾ ಬಂದಿದ್ದಾರೆ.

ಅವಿದ್ಯಾವಂತರಿಂದ ಸೃಷ್ಟಿಯಾದ ಮೌಖಿಕ ಕಾವ್ಯಗಳು ಸ್ತ್ರೀಗೆ ಸಂಬಂಧಿಸಿದ ವಿಚಾರಗಳು ಹೇರಳವಾಗಿವೆ, ಇಲ್ಲಿ ಸ್ತ್ರೀ ಪಾತ್ರಗಳು ಪ್ರಧಾನವಾಗಿದ್ದು ಸ್ತ್ರೀ ಸಂವೇದನೆಯನ್ನು ಪ್ರತಿಬಿಂಬಿಸುವ ನಾಯಕಿಯರು ಇದ್ದಾರೆ, ಈ ಕಾವ್ಯಗಳಲ್ಲಿ ಹೆಣ್ಣು ಮಕ್ಕಳಲ್ಲಿ ತ್ಯಾಗ ಬಲಿದಾನಗಳನ್ನು ಕಾಣುತ್ತೇವೆ. ಸ್ತ್ರೀಯು ಗಂಡನಿಲ್ಲದೆ ಪರದಾಡುವ ಸ್ಥಿತಿ ಮಕ್ಕಳ ಸಂತಾನಕ್ಕಾಗಿ ಪರಿತಪಿಸುವ ರೀತಿ-ಗಂಡನಿಲ್ಲದೆ ಗರ್ಭಿಣಿಯಾಗಿ ಅನುಭವಿಸುವ ನೋವುಗಳು, ಬಂಜೆತನದಿಂದ ಪಡುವ ಯಾತನೆಗಳು, ಜೀವನವನ್ನು ಕಷ್ಟಪಟ್ಟು ಸಾಗಿಸುವ ಸಂದರ್ಭಗಳು ಹೆಚ್ಚಾಗಿವೆ. ಮೌಖಿಕ ಕಾವ್ಯದ ನಾಯಕರು ಹೆಣ್ಣಿಗೆ ಹೆಚ್ಚಿನ ಮಾನ್ಯತೆಯನ್ನು ನೀಡಿದ್ದಾರೆ, ಹಾಗಾಗಿಯೇ ಮಾಹಾಕಾವ್ಯಗಳಲ್ಲಿನ ನಾಯಕಿಯರೂ ಇಂದಿಗೂ ಪ್ರಸ್ತುತವಾಗಿರುವ ಆಚರಣೆಗಳನ್ನು ಕಾಣಬಹುದಾಗಿದೆ.

ಮೌಖಿಕ ಕಾವ್ಯಗಳಲ್ಲಿ ಬರುವ ಮಲೆಮಾದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗ, ಜುಂಜಪ್ಪ, ಮಾಳಿಂಗರಾಯ ಮೊದಲಾದ ಸಾಂಸ್ಕೃತಿಕ ನಾಯಕರು ತಮ್ಮ ಸಮುದಾಯಗಳ ಪಂಥಗಳಲ್ಲಿ

ವಿಶೇಷ ಸ್ಥಾನಮಾನ ನೀಡಿದ್ದಾರೆ. ಅವರಿಗಾಗಿ ಸೃಷ್ಟಿಸಿದ ಆಚರಣೆ ಸಂಪ್ರದಾಯಗಳು ಸಹ ವಿಭಿನ್ನವಾಗಿ ರೂಪಿಸಿದ್ದಾರೆ. ಈ ಕಾವ್ಯಗಳಲ್ಲಿ ಬರುವ ಉತ್ರಾಜಮ್ಮ, ಸಂಕಮ್ಮ, ಬೇವಿನಟ್ಟಿ ಕಾಳಮ್ಮ, ರಾಮವ್ವ, ದೊಡ್ಡಮ್ಮತಾಯಿ, ಚೆನ್ನಾಜಮ್ಮ, ಸಿನ್ನಮ್ಮ, ಮುದ್ದಮ್ಮ, ಕೋಮಾಲಿ, ಗಂಗಿಮಾಳಮ್ಮ, ಎಂಬ ನಾಯಕಿಯರು ಪ್ರಮುಖರಾಗಿದ್ದಾರೆ. ಈ ಪಾತ್ರಗಳು ಕಾವ್ಯಗಳಲ್ಲಿ ವಿಭಿನ್ನ ನೆಲೆಯಲ್ಲಿ ಕಾಣಿಸಿಕೊಂಡಿದ್ದಾರೆ. ಮೌಖಿಕ ಕಾವ್ಯಗಳಲ್ಲಿ ನಾಯಕರೇನಾದರೂ ಸ್ತ್ರೀ ವಿರುದ್ಧ ಧ್ವನಿ ಎತ್ತಿದಾಗಲೂ ಅದನ್ನು ಪ್ರತಿಭಟಿಸುವ ಮೂಲಕ ತಮ್ಮ ಅಸ್ತಿತ್ವವನ್ನು ಎತ್ತಿ ತೋರಿಸಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಸ್ತ್ರೀಯರು ಸಮಾಜ ಒಡ್ಡುವ ಪರೀಕ್ಷೆಗಳಿಗೆ ಒಳಗಾದರೂ ತಮ್ಮ ಶೀಲವನ್ನು ಪಾತಿವ್ರತ್ಯವನ್ನು ಗೆಲ್ಲುವ ಮೂಲಕ ಸಾಧಿಸಿ ತೋರಿದ್ದಾರೆ.

ಕೆಲವೆಡೆ ನಾಯಕರು ಸ್ತ್ರೀ ಪರವಾಗಿ ನಿಂತು ನ್ಯಾಯವನ್ನು ಒದಗಿಸುವ ಸನ್ನಿವೇಶಗಳೂ ಇವೆ. ಕಾವ್ಯಗಳಲ್ಲಿನ ಸ್ತ್ರೀಯರು ಅಸಮಾನ್ಯರಾಗದೇ ಸಾಮಾನ್ಯ ಸ್ತ್ರೀಯರಂತೆ ಕಂಡುಬರುತ್ತಾರೆ. ಅವರು ಹೊಟ್ಟೆಪಾಡಿಗಾಗಿ ನಡೆಸುವ ಅಲೆದಾಟ, ಗೌಡರ ಮನೆಗಳಲ್ಲಿ ಕೂಲಿ ಮಾಡುವುದು, ಸೊಪ್ಪು ಕಾಳುಗಳನ್ನು ಮಾರಾಟ ಮಾಡುವುದು ಹಾಗೂ ಇರುವುದರಲ್ಲಿ ಬಾಳು ನಡೆಸುವ ಹಂಬಲ ಹೊಂದಿದ್ದಾರೆ. ಅವರಿಗೆ ಬದುಕುವುದು ಮುಖ್ಯ. ಇಲ್ಲಿನ ನಾಯಕಿಯರು ಯಾವುದೇ ಅಕ್ರಮ ಸಂಬಂಧವನ್ನು ಇಟ್ಟುಕೊಂಡಿಲ್ಲ. ಬದಲಾಗಿ ಪತಿಯೇ ಪರದೈವವೆಂದು ನಂಬಿ ಕಷ್ಟ ಕಾರ್ಪಣ್ಯಗಳನ್ನು, ಸಂಕಷ್ಟಗಳನ್ನು ಎದುರಿಸಿದ್ದಾರೆ.

ಮಲೆಮಾದೇಶ್ವರ, ಮಂಟೇಸ್ವಾಮಿ, ಜಂಜಪ್ಪ, ಮೈಲಾರಲಿಂಗ, ಮಾಳಿಂಗರಾಯ ಎಲ್ಲ ಮಹಾಕಾವ್ಯಗಳು ಶೋಷಿತ ಜನವರ್ಗದ ಸಂವೇದನೆಗಳ ಜೊತೆಗೆ ಸ್ತ್ರೀ ಸಂಸ್ಕೃತಿಯನ್ನು ಬಿತ್ತರಿಸುತ್ತವೆ, ಸಾಂಸ್ಕೃತಿಕ ನಾಯಕರ ಸರ್ವಾಧಿಕಾರದ ನಡುವೆಯು ಸ್ತ್ರೀಯ ತನ್ನ ಅನನ್ಯತೆಯನ್ನು ಎತ್ತಿ ಹಿಡಿಯುತ್ತಾಳೆ, ಹೆಣ್ಣಿನ ಬದುಕು ಆದರ್ಶವಾಗಿ ಯಜಮಾನ ಸಂಸ್ಕೃತಿಗೆ ಸರಿಸಮಾನವಾಗಿ ನಿಲ್ಲುತ್ತಾಳೆ.

ಮಾದೇಶ್ವರನ ಕಾವ್ಯ ಇಡೀ ಮೌಖಿಕ ಕಾವ್ಯಗಳಲ್ಲಿ ಮನಗೆಲ್ಲುವ ಕಾವ್ಯವಾಗಿದ್ದು, ತನ್ನ ಚಾಣಾಕ್ಷತನ, ಪವಾಡ, ಮಾಟದ ಮೂಲಕವೇ ಒಕ್ಕಲುಗಳನ್ನು ನಿರ್ಮಿಸಿಕೊಳ್ಳುವ ಸಾಂಸ್ಕೃತಿಕ ವೀರ ಮಾದೇಶ್ವರನಾಗಿದ್ದಾನೆ. ಮಾದೇಶ್ವರನು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳ ಮೂಲಕ ಸೋಲಿಗರ ಸಮುದಾಯದಲ್ಲಿ ವೀರನಾಯಕನಾಗಿ ಉಳಿದರೆ ಅದೇ ಕಾವ್ಯಗಳಲ್ಲಿ ಬರುವ ಕೆಲವು ನಾಯಕಿಯರು ಸಹ ವೀರನಾಯಕಿಯರಾಗಿ ಉಳಿಯುತ್ತಾರೆ ಅವರುಗಳೆಂದರೆ ಉತ್ರಾಜಮ್ಮ, ಸಂಕಮ್ಮ, ಬೇವಿನಟ್ಟಿ ಕಾಳಮ್ಮ, ಮೊದಲಾದವರು ತಮ್ಮ ಶೀಲ, ಪಾತಿವ್ರತ್ಯ, ತಾಳ್ಮೆ ಹಠಮಾರಿತನ, ಸಾಧ್ವಿಗುಣಗಳಿಂದಲೇ ಮಹಾನಾಯಕಿಯರಾಗಿ ನಿಲ್ಲುತ್ತಾರೆ.

**ಉತ್ರಾಜಮ್ಮ**

ಮಲೆಮಾದೇಶ್ವರ ಕಾವ್ಯದಲ್ಲಿ ಇರುವ ಉತ್ತುಮಾಪುರದಲ್ಲಿ ಭದ್ರಕಾಳಿ ವರದಲ್ಲುಟ್ಟಿದ್ದ ಉತ್ರಾಜಮ್ಮ ಶಿವಭಕ್ತೆಯಾಗಿದ್ದಾಳೆ, ಶಂಕರ ಪ್ರಿಯ ಮತ್ತು ಪತಿಶೀಲೆಗೆ ಮಗನಾದ ಶಿವದಾಸ ಉತ್ರಾಜಮ್ಮನ ಪತಿಯಾಗಿದ್ದಾನೆ. ಉತ್ರಾಜಮ್ಮಳ ಭಕ್ತಿ ಅಪಾರವಾದದ್ದು

"ಉತ್ರಾಜಮ್ಮ ಅಂದ್ರೆ

ಬಹಳ ಶಿವನ ಭಕ್ತಿಯವಳು

ಬೆಳಗಾಗಲೆದ್ದು ಪತಿಪಾದಕ್ಕೆ ಪೂಜೆಮಾಡ್ಕಂಡು

ಗಂಗೆಯೊಳಗ್ಹೋಗಿ ಕಲ್ಯಾಣಿವೊಳಗೆ

ಸ್ನಾನ ಮಡಿಯನ್ನು ಮಾಡಿ ಆತ್ಮಲಿಂಗ ಪೂಜೆ ಮಾಡ್ಕಂಡು

ಕುನ್ನೀರು ಚೆಂಬ್ನಲ್ಲಿ ನೀರ್ತಕ್ಕೊಂಡ್ಬುಂದು

ನೂರೊಂದು ಲಿಂಗಕ್ಕೂ ಪೂಜೆ ಮಾಡ್ಬುಟ್ಟು

ಉತ್ರಾಜಮ್ಮ ದಂಪತಿಗಳು ಒಂದು ಮಂಚದಲ್ಲಿ ಮಲಾಗ್ತಾಯಿರಲಿಲ್ಲ

ಏಳು ತಲೆ ಕಾಳಿಂಗ ಸರ್ಪನನ್ನು ಕರ್ದು ತಲೆದಿಂಬಲ ಮಾಡ್ಕಂಡು

ಅವರು ನಿದ್ರೆಮಾಡಿ ಮಲಗವರೆ ಉತ್ರಾಜಮ್ಮ"[೩೩]

ಇಂತಹ ಮಹಾನ್ ಶಿವಭಕ್ತೆಯಾದ ಉತ್ರಾಜಮ್ಮನು ಮಕ್ಕಳಿಲ್ಲದ ಬಂಜೆ ಪಟ್ಟವನ್ನು ಹೊತ್ತು ಅನೇಕ ಅವಮಾನಗಳಿಗೆ ಈಡಾದವಳು. ಅಂತಹ ಸಂದರ್ಭದಲ್ಲೂ ಶಿವನ ಪೂಜೆ ಬಿಡದೆ ಪ್ರತಿದಿನ ಶಿವನ ನೆನಪಲ್ಲೆ ಬದುಕಿದ್ದಳು, ಇವಳು ಮಹದೇವನಿಗೆ ತಾಯಿಯಾಗಬೇಕೆಂದು ಶಿವನ ಅಪ್ಪಣೆಯಾಗುತ್ತದೆ.

"ಉತ್ರಾಜಮ್ಮನಿಗೆ ನಲವತ್ತು ಮಯಸ್ಸು ನಡೀತಾಯಿತಿ

ಆದರೂ ಕೂಡ ಮಕ್ಕಳ ಫಲವಿಲ್ಲ

ನಾವು ಶಿವನ ಭಕ್ತರಾಗಿ

ನಮ್ಮ ರಾಜ್ಯಕ್ಕೆ ತಕ್ಕಂತ ಮಗನಿಲ್ಲ ಅಂತ್ಹೇಳಿ"[೩೪]

ಮಕ್ಕಳಿಲ್ಲದೇ ಕೊರಗುತ್ತಿದ್ದ ಉತ್ರಾಜಮ್ಮ ಪರಮೇಶ್ವರನನ್ನು ಕುರಿತು ತಪಸ್ಸು ಮಾಡುತ್ತಿದ್ದಾಗ ಶಿವದಾಸರಿಗೆ ಅವರ ಗುರುಗಳಾದ ವ್ಯಾಘ್ರಾನಂದ ಸ್ವಾಮಿಗಳು ಮಾಯ್ಕಾರನೇ ಅವಳಲ್ಲಿ ಜನಿಸುವುದಾಗಿ ಅಶೀರ್ವಾದಿಸುತ್ತಾರೆ.

ಮಾದೇಶ್ವರ ಮಗುವಾಗಿ ಉತ್ರಾಜಮ್ಮನ ಬಳಿ ಸೇರುವುದನ್ನು ತುಂಬ ಸೊಗಸಾಗಿ ಹಾಡಿದ್ದಾರೆ.

"ಕೆಂದಾವರೆ ಕಮಲವಾಗಿ ನಡುಕಲ್ಯಾಣಿವೂಳಗೆ

ಆ ತಾವರೆ ಹೂವಿನ ಮಧ್ಯದಲ್ಲಿ ಪುಟ್ಟುಲಿಂಗವಾಗಿ

ಈವಾಗ ನಾಗಲಿಂಗ ಪುಸುಮ ಇದಿಯಲ್ಲ

ಅದೇ ರೀತಿಯಾಗಿ ತೇಲಾಡ್ತಾಯಿದ್ರು

ಉತ್ರಾಜಮ್ಮ ಕಲ್ಯಾಣಿ ಕಡೆಗೆ ನೋಡಿದ್ದು

ಓ ಪರಮಾತ್ಮ

ಈ ಕಲ್ಯಾಣಿವೂಳುಗೆ ಮಾವುದೋ ಒಂಟು ತಾವರೆ ಕಮಲ ಇದೆ

ಇದನ್ನಾದರೂ ಎತ್ಕೋಂಡ್ಹೋಗಿ

ನಾನು ಲಿಂಗಪೂಜೆ ಮಾಡಬೇಕು ಅಂತ್ಹೇಳಿ

ಕಲ್ಯಾಣಿಗೆ ಇಳೀತಾಯಿದ್ದಾರೆ ಉತ್ರಾಜಮ್ಮ"[೩೫]

ಉತ್ರಜಮ್ಮ ಬಂಜೆಯಾಗಿದ್ದರು ಅವಳಲ್ಲಿಯ ತಾಯಿ ವಾತ್ಸಲ್ಯವು ಒಂದು ಹೂವಿನಲ್ಲಿ ನೋಡುತ್ತಿದ್ದಂತೆ ವ್ಯಕ್ತವಾಗುತ್ತದೆ. ಇದು ಮಾದೇಶ್ವರ ಹುಟ್ಟಲು ಕೊಟ್ಟ ಮುನ್ಸೂಚನೆಯೆಂದು ತಿಳಿಯಬಹುದು.

"ಗುರು ಕೊಟ್ಟಂಥ ಲಿಂಗದಲ್ಲಿ ಗಂಧದ ಕರಡಿಯೊಳಗೆ ಇರಿಸಕೊಂಡು

ತಾಯಿ ನಿದ್ರೆ ಮಾಡ್ತಾ ಮಲಕ್ಕೊಂಡುರು

ಬೆಳ್ಳಿ ಮೂಡಿ ಬೆಳಗಾಗುವ ಹೊತ್ತಿಗೆ

ಆ ಗಂಧದ ಕರಡಿಗೆಯಲ್ಲಿದ್ದ ಪ್ರಭುಲಿಂಗವು

ಉತ್ರಾಜಮ್ಮನ ಮಗ್ಗುಲಲ್ಲಿ

ಸಣ್ಣ ಬಾಲಕನಾಗಿ ಮಲಗವರೇ ಮಾಯ್ಕಾರ"[೩೬]

ಈ ರೀತಿಯಾಗಿ ಮಾದೇಶ್ವರ ಉತ್ರಾಜಮ್ಮನನ್ನು ತಾಯಿಯಾಗಿ, ಶಿವದಾಸನನ್ನು ತಂದೆಯಾಗಿ ಪಡೆದು ಅವಳ ಬಂಜೆತನವನ್ನು ನೀಗಿಸುವುದರೊಂದಿಗೆ ಸಮಾಜದಲ್ಲಿ ಸ್ಥಾನಮಾನವನ್ನು ತಂದು ಕೊಡುತ್ತಾನೆ. ಉತ್ರಾಜಮ್ಮನ ತಾಯ್ತನದ ಹಂಬಲ ಎಷ್ಟಿತೆಂದರೆ ಮಾದೇವ ಹುಟ್ಟಿದ್ದು ಅವನನ್ನು ಪಾಲಿಸುವ ರೀತಿ ಸೊಗಸಾಗಿದೆ

' ಆ ಬಾಲಕನ ಅಂದಾಚಂದಾ. ನೋಡಿ ಎತ್ತಿ

ತನ್ನ ತೊಡೆ ಮೇಲಿಟ್ಟುಕೊಂಡು

ಆವಾಗ ಜೋಗಳ ಪಾಡಿ ಮುದಾಡ್ತಿದ್ರು'[೩೭]

ತಾಯಿ ತನ್ನ ತಾಯ್ತನದ ಸುಖ ಅನುಭವಿಸುವಾಗ ವ್ಯಾಘ್ರನಂದ ಸ್ವಾಮಿಗಳು ಮಾಯ್ಕಾರನನ್ನು ಕಾಣಿಕೆ ಕೇಳುತ್ತಾರೆ. ಆಗ ಅವಳ ದು:ಖ ಹೇಳತೀರದ್ದು

'ಉತ್ರಾಜಮ್ಮ ದು:ಖ ಮಾಡಾಕೆ ಸುರು ಮಾಡ್ಡಳು

ಗುರುದೇವಾ

ನನ್ನ ಮಗನ ಕಾಣ್ಕೆ ತಕ್ಕೊಂಡೋದ್ರೆ

ನಾವು ಯಾರ ಸೇರಬೇಕು ಎಂದು ಗೋಳಿಡುವಾಗ ಗುರುಗಳು

ನೀವು ಸೂರ್ಯ ಚಂದ್ರಾಂದಿಗಳು ಇರೂವರ್ಗೂವೆ

ಲಿಂಗೈಕ್ಯವಾಗಿ ಬಾಳಿರಮ್ಮ"೩೮

ಎಂದು ಹೇಳಿ ಆಶೀರ್ವಾದಿಸಿ ಮಾದೇವನನ್ನು ಕರೆದುಕೊಂಡು ಹೊರಟು ಹೋದರು.

ಇಲ್ಲಿ "ಉತ್ರಾಜಮ್ಮನ ಕತೆ ಮಾದೇಶ್ವರನ ಕಾವ್ಯದ ಎಲ್ಲ ಪಾಠಗಳಲ್ಲೂ ಅತ್ಯಂತ ಆಕರ್ಷಕ ಭಾಗಗಳಲ್ಲಿ ಒಂದಾಗಿದೆ. ಉತ್ರಾಜಮ್ಮನ ಭಕ್ತಿಯ ನೈಜತೆ, ತಾಯ್ತನದ ಹಂಬಲ, ಮಗುವಿನ ಲಾಲನೆ, ಅಂಜಿ ನಡೆಯುವ ಸದ್ಗುಣ, ಮನಮುಟ್ಟುವಂತೆ ಚಿತ್ರಿತವಾಗಿದೆ."೧೧ಇಂತಹ ಸದ್ಗುಣಗಳಿಂದಲೇ ಉತ್ರಾಜಮ್ಮ ಸಮಾಜದಲ್ಲಿ ಸಾಧ್ವಿಯಾಗಿ ಮಹಾನಾಯಕಿಯಾಗಿ ಕಾವ್ಯದಲ್ಲಿ ಉಳಿಯುತ್ತಾಳೆ.

**ಸಂಕಮ್ಮ**

ಮೌಖಿಕ ಕಾವ್ಯಗಳಲ್ಲಿ ಹೆಚ್ಚು ಹೃದಯಸ್ಪರ್ಶಿ ಹಾಗೂ ಎಲ್ಲರ ಮನಸ್ಸನ್ನು ತಲುಪುವ ಸಾಲೇ ಸಂಕಮ್ಮನ ಸಾಲು ಆಗಿದೆ. ಇದು ಸೋಲಿಗರ ಆಹಾರ ಸಂಗ್ರಹಣೆಯ ವಿಧಾನಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಕಾಡಿನ ಜೀವಿಗಳ ಸೋಲಿಗರ ದಂಪತಿಗಳ ಕಥೆ ಇದು. ಸೋಲಿಗರ ನೀಲಯ್ಯ ಪಶುಪಾಲಕ. ಈತನ ಮಡದಿಯೇ ಸಂಕಮ್ಮ ಬಂಜೆಯಾಗಿದ್ದಾಳೆ. ಇವರಿಬ್ಬರ ನಡುವೆ ಮಾದೇಶ್ವರನ ಪ್ರವೇಶವಾಗುತ್ತದೆ. ಈ ಮೂರು ಪಾತ್ರಗಳ ನಡುವೆ ಕಥೆ ಬೆಳೆಯುತ್ತಾ ಹೋಗುತ್ತದೆ. ಈ ಮಲೆಮಾದೇಶ್ವರ ಕಾವ್ಯದಲ್ಲಿ ಸಂಕಮ್ಮನ ಕಥೆಯಷ್ಟು ಜನಪ್ರಿಯವಾದ ಕಥಾ ಭಾಗ ಬೇರೆ ಯಾವುದು ಇಲ್ಲವೆಂದು ಹೇಳಬಹುದು.

ಸೋಲಿಗರ ನೀಲೇಗೌಡ ಜುಂಜೇಗೌಡನ ಕಿರಿಯ ಮಗನಾಗಿದ್ದು ಸತ್ಯಶರಣೆ ಸಂಕಮ್ಮನನ್ನು ನೋಡಿ ಮದುವೆಯಾಗಿ ೧೨ ವರ್ಷವಾದರೂ ಮಕ್ಕಳಾಗಿರುವುದಿಲ್ಲ, ಇವಳ ಓರಗಿತ್ತಿಯರು ಅತ್ತಿಗೆ ನಾದಿನಿಯರು ಎಲ್ಲರೂ ಇವಳನ್ನು ಬಂಜೆ ಎಂದು ಹಿಯಾಳಿಸುತ್ತಿರುತ್ತಾರೆ.

"ಇವಳು ಹುಟ್ಟಿ ಬಂದ ಮೂವತ್ತು
ಮಂಡೇ ಮಾರಿ ಹನ್ನೆರಡು
ಮೈಯಾನ ಬಣ್ಣ ಕೆಡಲಿಲ್ಲ
ಮೊಖದ ಕಲೆಯೇ ತಪ್ಪಲಿಲ್ಲ
ದಟ್ಟಾ ಧರಣಿ ಸಂಕೆಣ್ಣು
ಮಕ್ಕಳ ಫಲವೇ ಮೊದಲಿಲ್ಲ
ಎದ್ದು ಮುಖದ ನೋಡಿದರೆ
ನಾವು ಬಂಜೆರಾಗುವೆವು
ಸಂಗಡ ದನಗಳು ಕಾದರೆ
ದನಗಳು ಬಂಜೇರಾಗುವೆವು
ಮಾಡಿದ ಅಡಿಗೆ ಉಂಡಾರೆ

ನಾವು ಬಂಜೆರಾಗುವೆವು
ಮೀದ ನೀರ ದಾಡಿದರೆ
ನಾವು ಬಂಜೇರಾಯ್ತಿವಿ
ನಮ್ಮ ಮಕ್ಕಳು ಬಂಜೇಲಾಗುವರು॥೧೨

ಎಂದು ತನ್ನ ವಾರಗಿತ್ತಿಯರು ದೂಷಿಸುತ್ತಾರೆ. ಇದರಿಂದ ಬೇಸತ್ತ ನೀಲಯ್ಯ ಸಂಕಮ್ಮನನ್ನು ಕರೆದುಕೊಂಡು ಹೋಗಿ ಬೇರೆ ಸಂಸಾರ ಹೂಡುತ್ತಾನೆ. ಆಗ ಸೋಲಿಗ ಸಂಸ್ಕೃತಿಯ ಪ್ರಕಾರ ಬೇಟೆಗೆ ಹೋಗುವ ಸಂದರ್ಭ ಬಂದಾಗ ಅವಳನ್ನು ಒಬ್ಬಳೇ ಬಿಟ್ಟು ಹೋಗಲು ಆತಂಕ ಪಟ್ಟು ಸಂಕಮ್ಮನ ಶೀಲವನ್ನು ಅನುಮಾನಿಸುತ್ತಾನೆ.

"ಅತ್ತೆಯ ಮಕ್ಕಳು ಬರುವಾರು
ಮಾವನ ಮಕ್ಕಳು ಬರುವಾರು
ಭಾವ-ಮೈದ ಬರುವಾರು
ಬೆಂಕಿ ಎಣೆಯಲ್ಲಿ ಬತ್ತವರೆ
ಬನ್ನೀರ ಎಣೆಯಲ್ಲಿ ಬತ್ತವರೆ
ಗೇಲೀನ ಮಾತ ಆಡುವರು
ಗಂಧದ ಮಾತ ಆಡುವರು
ರೂಪು ರೇಖೆ ನೋಡುವರು
ಅಂದ ಚೆಂದ ನೋಡುವರು
ನಿನ್ನ ಮೇಲೆ ಕಣ್ಣ ಇಡುವರು
ಮಡದಿ ಒಲುಮೆಯ ಮದ್ದ ಕೊಡುವಾರು
ನಿನ್ನವಾಲಿಸಿಕೊಂಡು ಹೋಗುವರು"[೩೯]

"ಅತ್ತೀಯ ಹೂವ ನೋಡಬಹುದು
ಕೊತ್ತೀಯ ಮಾಸ ಕಾಣಬಹುದು
ಬಿಳೀ ಕಾಗೆಯ ನೋಡಬಹುದು
ವೀರ ಹೆಜ್ಜೆಯ ನೋಡುವುದು
ನಿಮ್ಮ ಹೆಣ್ಣು ಅಂಬೋ ಏಳ್ ಜಾತ್ಯ ನಂಬೋದು ಹ್ಯಾಗೆ ಸಂಕೆಣ್ಣೆ"[೪೦]

ಹೀಗೆ ವಿಧ ವಿಧವಾಗಿ ಸಂಕಮ್ಮನನ್ನು ಅನುಮಾನಿಸಿ ತನ್ನ ಒಂದು ಅನುಮಾನದ ಪರಿಹಾರಕ್ಕೆ ಸಂಕಮ್ಮನಿಂದ ಭಾಷೆ ಕೇಳುತ್ತಾನೆ. ಸಂಕಮ್ಮ ಕೈ ಭಾಷೆ ನೀಡಿಲು ನಿರಾಕರಿಸುತ್ತಾಳೆ. ಇಲ್ಲಿ ಸಂಕಮ್ಮನಿಗೆ

"ಕೈ ಭಾಷೆ ಕೊಡುವುದು ಬರಿಯ ಮಾತಿನ ಭಾಷೆಯ ಪ್ರಶ್ನೆಯಲ್ಲ. ಅದು ಅವಳ ಅಸ್ತಿತ್ವವನ್ನು ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಪ್ರಶ್ನೆ. ಕೈ ಭಾಷೆ ಕೊಡುವುದು ತನ್ನ ಸ್ವಾಭಿಮಾನಕ್ಕೆ ಅವಮಾನ ಎನ್ನುವುದರ ಜೊತೆಗೆ ಅದು ತನ್ನ ಸತ್ಯಕ್ಕೆ ಅಂತ:ಶಕ್ತಿಗೆ ಮಾಡುವ ಅಪಚಾರ ಎಂದು ಆಕೆ ಭಾವಿಸುತ್ತಾಳೆ, ಬಲಗೈ ಭಾಷೆ ಕೊಟ್ಟದ್ದೆ ಆದರೆ ಅಲ್ಲಿಗೆ ನನ್ನ ಸತ್ಯವೇ ಹುಸಿಯಾದಂಗಾಯ್ತು, ಬಂಜೆಗೈ ಭಾಷೆ ಕೊಡುವುದಿಲ್ಲ ಎನ್ನುವ ಮಾತುಗಳಲ್ಲಿ ಬಂಜೆತನವನ್ನು ಮೀರುವ ಸಂಕಮ್ಮನ ತೀವ್ರ ಬಯಕೆಯು ವ್ಯಕ್ತವಾಗುತ್ತದೆ. ಇಲ್ಲಿ ನೀಲೇಗೌಡ ಪಾತಿವ್ರತ್ಯವನ್ನು ಬಂದು ಮೌಲ್ಯವಾಗಿ ಪ್ರತಿಪಾದಿಸಿದರೆ ಸಂಕಮ್ಮ ಹೆಣ್ಣಿನ ಸ್ವಾಭಿಮಾನವನ್ನು, ಆತ್ಮಸಾಕ್ಷಿಯನ್ನ ಒಂದು ಮೌಲ್ಯವಾಗಿ ಮಂಡಿಸುತ್ತಾಳೆ"೧೫

ಸಂಕಮ್ಮ ನೀಲೆಗೌಡನ ಅನುಮಾನಕ್ಕೆ ಪ್ರತಿಭಟಿಸುತ್ತಾ

"ನೀನು ಕಟ್ಟಿದ ತೆರುವ ತಕ್ಕಯ್ಯ  
ನನ್ನ ಹಟ್ಟಿಯಿಂದಾಚೆ ಕಳುವಯ್ಯ  
ನಿನ್ನ ದಾರಿಯ ನೀನು ನೋಡಯ್ಯ  
ನನ್ನ ದಾರಿಯ ನಾನು ನೋಡ್ತೀನಿ  
ನಾನು ಬಲಗೈ ಮುಟ್ಟಿ ಭಾಷೆ ಕೊಡುವಂತ  
ಮಗಳಲ್ಲ ಹೋಗೋ ಯಜಮಾನ"[೪೧]............ ಎಂದು ಸವಾಲು ಒಡ್ಡುತ್ತಾಳೆ, ಮೌಖಿಕ ಕಾವ್ಯಗಳಲ್ಲಿ ಸಂಕಮ್ಮನಂತಹ ಹೆಣ್ಣಿಗೆ ಗಂಡ ತನ್ನ ಸಂತಾನಕ್ಕೆ ಮಾತ್ರ ಒಪ್ಪಿರುತ್ತಾನೆ ಹೊರತು ಯಾವುದೇ ಬೇರೆ ಸಂಬಂಧಕ್ಕೆ ಒಪ್ಪಿಗೆ ನೀಡುವುದಿಲ್ಲ. ಹೀಗಾಗಿ ಸಂಕಮ್ಮ ಪತಿವ್ರತೆಯಾದ್ದರಿಂದ ಕೈ ಹಿಡಿದ ಗಂಡನನ್ನು ಬೇಕಾದರೂ ಬಿಡುತ್ತಾಳೆ ಆತ್ಮವಂಚನೆ ಮಾಡಿಕೊಳ್ಳುವುದಿಲ್ಲ,

"ಸಂಕಮ್ಮ ಸ್ಥಾಪಿತ ಸಮಾಜದಲ್ಲಿಯ ಪುರುಷ ಪ್ರಾಧಾನವನ್ನು ಮತ್ತು ಅದು ಅಸಾಹಯಕ ಸಮುದಾಯವನ್ನು ನಿಯಂತ್ರಿಸಲು ಹೆಣೆದ ನಿರ್ಭಂದ ರೂಪಿತ ಸಾಮಾಜಿಕ ಸಾಮಾನುಗಳನ್ನು ಏಕಕಾಲಕ್ಕೆ ಉಲ್ಲಂಘಿಸುತ್ತಾಳೆ. ಈ ಉಲ್ಲಂಘನೆ ಕೇವಲ ಕ್ಷುದ್ರ ಕಾರಣಗಳಿಗಾಗಿ ನಡೆದದ್ದಲ್ಲಿ, ಒಂದು ಪ್ರಬಲ ಸಮುದಾಯವೊಂದು ದುರ್ಬಲರನ್ನು ಆಳುವ ಸಲುವಾಗಿ ಸೃಷ್ಟಿಸಿದ ಹುಸಿ ಮೌಲ್ಯಗಳನ್ನು ಧ್ವಂಸ ಮಾಡುವ ಛಲಗಾರಿಕೆಯಾಗಿದೆ"[೪೨]ಮಲೆಮಾದೇಶ್ವರನ ಕಾವ್ಯದಲ್ಲಿ ಬರುವ ಸಂಕಮ್ಮ ಸ್ತ್ರಿ ಸಮುದಾಯಕ್ಕೆ ಪಾತಿವ್ರತ್ಯ, ಸ್ವಾಭಿಮಾನ ಮತ್ತು ಮಾನಸಿಕ ಸ್ಥೈರ್ಯವನ್ನು ತುಂಬುವ ಹೆಣ್ಣಾಗಿ ಮೌಖಿಕ ಮಹಾಕಾವ್ಯಗಳಲ್ಲಿ ಇಂದಿಗೂ ಮಹಾನಾಯಕಿಯಾಗಿ ಉಳಿದಿದ್ದಾಳೆ.

**ಬೇವಿನಟ್ಟಿ ಕಾಳಮ್ಮ**

ಮಲೆಮಾದೇಶ್ವರ ಕಾವ್ಯದಲ್ಲಿ ಬರುವ ಬೇವಿನಟ್ಟಿ ಕಾಳಮ್ಮನ ಸಾಲು ಸಂಕಮ್ಮನ ಸಾಲಿಗಿಂತ ಭಿನ್ನವಾದದ್ದು. ಬೇವಿನಟ್ಟಿ ಕಾಳಮ್ಮ ಒಬ್ಬ ಲೌಖಿಕ ವ್ಯಕ್ತಿ, ಕೃಷಿ ಕುಟುಂಬಕ್ಕೆ ಸೇರಿದವಳು, ತನ್ನ ಹಠ, ದರ್ಪ, ಅಟ್ಟಹಾಸ, ಠೇಂಕಾರಗಳಿಂದ ಹೆಸರಾದವಳು ಯಾರಿಗೂ ಲೆಕ್ಕಿಸದೆ, ಯಾರನ್ನು ಪುರಸ್ಕರಿಸದೆ, ಯಾವುದರ ಹರವೂ ಇಲ್ಲದ ಗಯ್ಯಾಳಿ ಮಹಿಳೆಯಾಗಿದ್ದಾಳೆ. ಮೊದಲು ದೀನಳಾಗಿ

ಬಡವೆಯಾಗಿದ್ದವಳು. ಮಾದೇಶ್ವರನ ಕರುಣೆಯಿಂದ ಐಶ್ವರ್ಯವನ್ನು ದಕ್ಕಿಸಿಕೊಂಡು ಸೊಕ್ಕಿನಿಂದ ಬದುಕುತ್ತಿದ್ದವಳು. ಮಾದೇಶ್ವರ ಇವಳ ಸೊಕ್ಕನ್ನು ಮುರಿದು ಒಕ್ಕಲಾಗಿ ಪಡೆಯುವುದೇ ಬೇವಿನಟ್ಟಿ ಕಾಳಮ್ಮನ ಕಥಾ ಭಾಗದ ಸಾಲಿನಲ್ಲಿ ಕಾಣುತ್ತೇವೆ.

ಮಾದೇಶ್ವರನಿಗೆ ಎಣ್ಣೆ ಮಜ್ಜನಕ್ಕೆ ಒಕ್ಕಲು ಬೇಕಾದಾಗ ಬಡವಳಾದ ಕಾಳಮ್ಮನಿಗೆ ಶ್ರೀಮಂತಿಕೆಯನ್ನು ನೀಡಿದ ನೆನಪಾಗಿ ಅವಳಲ್ಲಿ ಎಳ್ಳು ಭಿಕ್ಷೆ ಬೇಡಲು ಹೋಗುತ್ತಾನೆ, ಆದರೆ ಕಾಳಮ್ಮನ ಐಶ್ವರ್ಯ ಸಾಮಾನ್ಯವಾಗಿರಲಿಲ್ಲ

"ಏಳೇಳು ಹದಿನಾಲ್ಕು ಹಟ್ಟಿ
ಹನ್ನೆರಡು ಕುಂಬದ ಹಟ್ಟಿ
ಹನ್ನೆರಡು ಕಂಬದ ಹಟ್ಟಿ ಮುಂದ್ಗಡ
ಬೇವಿನ ಮರದ ಜಗಲಿ
ಏಳೇಳು ಹದ್ನಾಕಟ್ಟಿ
ಗಂಧ ತೊಟ್ಟಿ ಗಾರೆತೊಟ್ಟಿ ಚಿನ್ನತೊಟ್ಟಿ
ರನ್ನ ತೊಟ್ಟಿ ಮುತ್ತಿನ ತೊಟ್ಟಿ ಕಬ್ಬಿಣ ತೊಟ್ಟಿ
ಇದೇ ರೀತಿಯಾಗಿ ತೊಟ್ಟಿ ಕಟ್ಟಿಸಿಕೊಂಡು
ಕಾಳಮ್ಮ"[೪೩]

ಇಂತಹ ಐಬೋಗದಿಂದ ಬಾಳುತ್ತಿದ್ದ ಕಾಳಮ್ಮನ ಮನೆಗೆ ಎಳ್ಳು ಭಿಕ್ಷೆಗೆ ಬಂದು ತನಗೆ ಒಕ್ಕಲಾಗ್ತಳೆ ಎಂದು ಮನೆ ಬಾಗಿಲಿಗೆ ಬಂದು ನಿಲ್ಲುತ್ತಾನೆ. ನಾನು ಮಾದಪ್ಪ ಎಳ್ಳು ಮಜ್ಜನಕ್ಕೆ ಬಂದಿದ್ದೀನಿ ಮೂರು ಕೊಳ್ಗಾ ಎಳ್ಳು ತಂದು ನನ್ನ ಮುತ್ತಿನ ಜೋಳಿಗೆ ನೀಡು.... ಎಂದಾಗ ಬೇವಿನಟ್ಟಿ ಕಾಳಮ್ಮನಿಗೆ ಕೋಪ ಬಂದು ಮಾದಪ್ಪನೋ ಮಾರಪ್ಪನೋ ನನಗೆ ಒಂದು ಗೊತ್ತಿಲ್ಲ ನಾನು ಕೊಡುವುದಿಲ್ಲ ಎಂದು ಹೇಳುತ್ತಾಳೆ.

"ಲೇ ಮಂಡೇ ಮಗನೇ ಜಂಗುಮಯ್ಯ
ಏನು ಈ ರೀತಿ ಕೂ ಗ್ತಾಯಿದ್ದೀಯಲ್ಲ
ಎಳ್ಳು ಕೊಡು ಕಾಳಮ್ಮ
ಎಳ್ಳು ಕೊಡು ಕಾಳಮ್ಮ ಅಂತೇಳಿ
ನೀನೇನಾದ್ರು ಮುಂಗಾರ್ನಲ್ಲಿ ಚಂದು
ನನ್ನ ಬಾಣಗಾರ ಕೆಟ್ಟ ಹೊಲದಲ್ಲಿ
ಏರ್ ಕಟ್ಕಂಡು
ಹೊಲ ಉತ್ತು ಇಂಟ್ಗೆ ಒಂದು ಮೊಗೆ

ನೀರು ಊದು ಸಾಕಾಗಿತ್ತು
ಇಲ್ಲಿ ನಿಮ್ಮ ಅಪ್ಪ ಅಮ್ಮ
ನಿಮ್ಮ ತಾಯಿ ತಂದೆರು ಬಂದು
ಏನಾದ್ರು ನನ್ನ ಆಳುಗಳಿಗೆಲ್ಲ
ಅಂಬಲಿ ಕಾಯ್ಸಿ ವತ್ತು ಸಾಕಾಗಿತ್ತ
ಅದಕ್ಕಾಗಿ ಕೊಡು ಇದ್ದೀಯಾ ಅಂತಕೇಳ್ತಾ
ಒಂದು ಕೊಳಗ ಕೇಳ್ತಾಯಿದ್ಯಲ್ಲ
ಒಂದು ಕಾಳು ಕೊಡುವಂತ ಮಗಳಲ್ಲ
ಜಂಗುಮಯ್ಯ"[೪೪]

ಎನ್ನುವ ಮಾತು ಕೇಳಿ ಮಾದಯ್ಯನಿಗೆ ಆಶ್ಚರ್ಯವಾಯಿತು ಆಗ ಕಾಳಮ್ಮ

"ನನ್ ಎಳ್ಳಿನ ರಾಶಿ ಬೂದಿಯ ಗೋಡ್ರು ಸರಿಯೇ
ಏಳು ಜನ ಗಂಡು ಮಕ್ಳು
ನಿಂತಾಗೆ ಕೊಟಾರದ ಸುತ್ತಾ
ಗೋಗಲ್ಲಾಗೀ ನಿಂತ್ಕಂಡ್ರು ಸರಿಯೇ
ಎಳ್ಳುದಾನ ಕೊಡುವುದಿಲ್ಲ ಎನ್ನುತ್ತಾಳೆ"[೪೫]

ಈ ಕಾವ್ಯದ ಕಾಳಮ್ಮನ ಸಾಲಿನಲ್ಲಿ ಕೃಷಿಯ ಕಾಯಕವನ್ನು ದೈವ ಎಂದು ನಂಬಿದ ಸ್ವಾಭಿಮಾನ ಮತ್ತು ಸ್ತ್ರೀ ಪ್ರಧಾನ ವ್ಯವಸ್ಥೆಯ ಪ್ರತಿರೂಪವಾಗಿ ಕಾಳಮ್ಮನು ಮಾದೇಶ್ವರನ ಎಳ್ಳು ಭಿಕ್ಷೆ ನೀಡದೆ ಧಿಕ್ಕರಿಸುತ್ತಾಳೆ. ಕಾಳಮ್ಮನ ಸ್ವಾಭಿಮಾನ ಮಾದೇಶ್ವರನಿಗೆ ಅಹಂಕಾರವಾಗಿ ಸೊಕ್ಕಾಗಿ ಕಾಣುತ್ತದೆ.

"ಕಾಳಮ್ಮನ ಪ್ರಸಂಗ ಪುರುಷ ಪ್ರಧಾನ ಸಂಸ್ಕೃತಿ ಮಾತೃ ಪ್ರಧಾನ ಸಮಾಜದ ಮೇಲೆ ಸಾಧಿಸಿದ ಗೆಲುವಿನ ಸಂಕೇತವಾಗಿ ಉಳಿಯುತ್ತದೆ"[೪೬]ಇಲ್ಲಿ ಕಾಳಮ್ಮ ಗಂಡನಾದ ಕೆಂಪೇಗೌಡನ ಪ್ರಾಮುಖ್ಯತೆಯಾಗಲಿ ಹಾಗೆಯೇ ಕಾಳಮ್ಮನ ಮಕ್ಕಳ ಪಾತ್ರವಾಗಲೀ ನೇರವಾಗಿ ಪಾತ್ರವಾಗಿ ಗೋಚರಿಸುವುದೇ ಇಲ್ಲ, ಕಾಳಮ್ಮನ ಸೊಸೆಯರ ಪಾತ್ರ ಮುಖ್ಯವಾಗಿದ್ದು, ಹೆಂಗಸರದೆ ವಹಿವಾಟು, ಗಂಡಸರು ಬೇಟೆ ಆಹಾರ ಸಂಗ್ರಹಣೆ ಹಾಗೂ ಪಶುಸಂಗೋಪನೆಯಲ್ಲಿ ತೊಡಗುತ್ತಿದ್ದರೆ, ಹೆಣ್ಣು ಮಕ್ಕಳು ಮರಿಗಳ ಪಾಲನೆ ಮಾಡಿಕೊಂಡು ತನ್ನ ಬಿಡುವಿನ ಸಮಯದಲ್ಲಿ ಬಿತ್ತಿ ಬೆಳೆಯುವ ಮೂಲಕ ಕೃಷಿಯ ಉಪಯುಕ್ತತೆಯನ್ನು ಸಾಧಿಸಿ ಆರ್ಥಿಕ ಸಬಲತೆಯನ್ನು ಸಾಧಿಸಿದ ನಾಯಕಿಯಾಗಿ ಕಂಡು ಬಂದಿದ್ದಾರೆ ಆದರ್ಶ ಸ್ತ್ರೀಗೆ ವಿರುದ್ದವಾದ ಪ್ರತಿ ನಾಯಕಿಯಾಗಿ ಕಾವ್ಯದಲ್ಲಿ ಕಾಣಬಹುದಾಗಿದೆ.

ಮೌಖಿಕ ಕಾವ್ಯಗಳ ಸಾಲಿನಲ್ಲಿ ಮಂಟೇಸ್ವಾಮಿ ಕಾವ್ಯ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ೧೫ನೇ ಶತಮಾನದಲ್ಲಿದ್ದ ಮಹಾಪುರುಷ ಮಾನವತ್ವದಿಂದ ದೈವತ್ವಕ್ಕೇರಿದ ಮಂಟೇಸ್ವಾಮಿ ಒಂದು ಪೀಳಿಗೆಯ ಕಥೆಯಾಗಿ ವಿಸ್ತಾರವಾಗಿ ಹುಟ್ಟಿದೆ. ಈ ಕಾವ್ಯದಲ್ಲಿ ಬರುವ ಮುದ್ದಮ್ಮ, ನೀಲಮ್ಮ, ಮೊದಲಾದ ಸ್ತ್ರೀಯರು ಬರುತ್ತಾರೆ ಆದರೆ ಸಾಂಸ್ಕೃತಿಕ ನಾಯಕಿಯರೆಂದರೆ ದೊಡ್ಡಮ್ಮ ತಾಯಿ ಮತ್ತು ಚನ್ನಾಜಮ್ಮ ಎಂದೇ ಹೇಳುಬಹುದು ಕಪ್ಪಡಿ, ಮುತ್ತನಳ್ಳಿಯಲ್ಲಿ ಇವರ ಗದ್ದುಗೆಗಳಿದ್ದು ವಿಶೇಷವಾದ ಪೂಜೆ, ಆಚರಣೆ ಸಂಪ್ರದಾಯಗಳು ಇಂದಿಗೂ ಪ್ರಸಿದ್ಧಿ ಪಡೆದಿವೆ.

**ದೊಡ್ಡಮ್ಮ ತಾಯಿ**

ದೊಡ್ಡಮ್ಮ ತಾಯಿ ಮಹಿಳಾ ನಾಯಕಿಯರಲ್ಲಿ ಪ್ರಮುಖಳು. ಇವಳ ಗದ್ದುಗೆ ಮುಟ್ಟಿನಹಳ್ಳಿಯಲ್ಲಿದೆ. ಇವಳನ್ನು ಮಂಟೇಸ್ವಾಮಿ ಮೈಸೂರು ಮನೆತನದಿಂದ ಪಡೆದರು ಎಂದು ಒಂದು ಪಠ್ಯ ಹೇಳಿದರೆ ಕಾಗಿನೆಲೆ ಇವಳ ಹುಟ್ಟಿನ ಕತೆಯನ್ನು ಹೇಳುತ್ತದೆ ಎಂದು ಮತ್ತೊಂದು ಪಠ್ಯವಿದೆ. ಮಂಟೇಸ್ವಾಮಿ ಕಾವ್ಯದಲ್ಲಿ ತಾಯಿಯ ಕತೆಯ ಹೃದಯಂಗಮವಾಗಿ ಚಿತ್ರಿಸಲಾಗಿದೆ,

"ಹಾಲು ಗುರು ನಿಂಗಮ್ಮನ
ಮಗಳು ಎಂದರೆ ಗುರುವೆ ಮಟ್ಟ ಮಂಗಳವಾರ
ಸುಟ್ಟು ಸುಕ್ರವಾರ ತುಂಬಿದ ಸೋಮವಾರ
ತುಂಬಿದಮವಾಸ್ಯೆ ಗುರುವೆ ಗುರುದೇವ
ಅವಳು ಒಂದು ಮನೆ ಒಳಗೆ
ಒಬ್ಬಳೆ ಪ್ರಾಣಬಿಟ್ಟಳಂತೆ ॥ ಸಿದ್ದಯ್ಯ॥
ಹಾಲು ಗುರು ನಿಂಗಮ್ಮನ ಮಗಳು ದೇವಾ
ಮಟ್ಟು ಮಂಗಳವಾರ ಸುಟ್ಟು ಶುಕ್ರವಾರ
ತುಂಬಿದ ಸೋಮವಾರ ಸೂರ್ಯ ಮೂಡುವಂತ ಟೈಮಿನಲ್ಲಿ
ತುಂಬಿದ ಅಮವಾಸ್ಯೆ ದಿಸ ತಾಸ್ವತಃ ಪ್ರಾಣ ಬಿಟ್ಟದ್ರಂತೆ
ಹಾಲು ಗುರು ಪಟ್ಟಣದ ಜನಗಳೆಲ್ಲಾ ಕೂಡಿ
ಸತ್ತ ಶವಾನ ಒಪ್ಪಮಾಡಿ ಬಿಟ್ಟು ಹಿಂದುರುಗಿ ಹೊಗುತ್ತಿದ್ದರು"[೪೭]

ಈ ರೀತಿ ದೊಡ್ಡಮ್ಮ ತಾಯಿ ನಿಂಗಮ್ಮನ ಮಗಳಾಗಿ ಪ್ರಾಣ ಬಿಟ್ಟರೂ ಸಹ ರಾಚಪ್ಪಾಜಿ, ಚನ್ನಾಜಮ್ಮ ಸಮೇತ ಬರುತ್ತಿದ್ದರು.

**ಮಂಟೇಸ್ವಾಮಿಗಳು:**

"ಸತ್ತಾ ಶವದಾ ಮುಂಭಾಗದಲ್ಲಿ ಕೂತಗೊಂಡು
ಆರುಶಾಸ್ತ್ರ ಹದಿನೆಂಟು ಪುರಾಣ ಪಾರಾಯಣ ಓದಿ

ಕಪ್ಪು ಧೂಳತನೆ ತಗದು ಸತ್ತಾ ಸಮಾಧಿ ಮೇಲೆ
ಕಪ್ಪು ಧೂಳ್ತಾ ಪಿಡಿದರಂತೆ" ॥ಸಿದ್ದಯ್ಯ॥[೪೮]

ಆಗ ದೊಡ್ಡಮ್ಮ ತಾಯಿಗೆ ಪ್ರಾಣ ಬಂದು ಭೂಮಿಯಿಂದ ಗುರುವೆ ಎನುತ್ತಾ ನಗುತ್ತಾ ಮೇಲಕ್ಕೆ ಎದ್ದು ನಿಂತು "ನನ್ನ ಸತ್ತಾಂತ ಪ್ರಾಣಿಯಾ

ಪಡೆದೆಯಲ್ಲೋ ನನ ತಂದೆ
ಅಪ್ಪಾ ನಿಮಗೆ ಮಗಳು ಆಗುತೀನಿ
ನಿಮಗೆ ಶಿಷ್ಯಳಾಗತೀನಿ ॥ ಸಿದ್ದಯ್ಯ॥ ಎಂದಾಗ
ಧರೆಗೆ ದೊಡ್ಡವರ ಶಿಶು ಮಗಳು
ನಿನ್ನ ದೊಡ್ಡಮ್ಮ ತಾಯಿ ಎಂತ
ನಾಮಕರಣ ಆಗಲವ್ವ"[೪೯]

ಎಂದು ತನ್ನ ಶಿಶುಮಗಳಾಗಿ ಮಾಡಿಕೊಂಡು ನಂತರ ರಾಚಪ್ಪಾಜಿ ಮತ್ತು ದೊಡ್ಡಮ್ಮ ತಾಯಿಗೆ ಮಂಟೇಸ್ವಾಮಿ ಮದುವೆ ಮಾಡಿಸುತ್ತಾರೆ.

'ರಾಚಪ್ಪಾಜಿಗೂ ತೋಪುನ ದೊಡ್ಡಮ್ಮನಿಗು
ಕೈಯಿಡಿಸಿ ಕನ್ಯಾದಾನ ಮಾಡಿಕೊಂಡು ಗುರುದೇವಾ
ಎಲ್ಲಾ ದೈವ ದೇವ ಮಾನವರ್‍ರ ಕೈಲಿ
ಕಿಡುಗಣ್ಣು ರಾಚಪ್ಪಾಜಿ ತೋಪುನ ದೊಡ್ಡಮ್ಮ
ಧರ್ಮ ಪತ್ನಿ ಆದರೂ"[೫೦]

ಈ ರೀತಿಯಾಗಿ ಧರೆಗೆ ದೊಡ್ಡವರ ಜೊತೆ ಚನ್ನಾಜಮ್ಮ, ರಾಚಪ್ಪಾಜಿ, ದೊಡ್ಡಮ್ಮ ತಾಯಿ ಶಿಶುಮಕ್ಕಳಾಗಿ ಹೊರಡುತ್ತಾರೆ. ಇಲ್ಲಿ ದೊಡ್ಡಮ್ಮ ತಾಯಿ ಸಾಂಸ್ಕೃತಿಕ ನಾಯಕಿಯಾಗಲು ಇವೆಲ್ಲಾ ಘಟನೆಗಳು ಬುನಾದಿಯಾದಂತಿವೆ, ಸಾಮಾನ್ಯ ಮಾನವರಂತೆ ಸಂಸಾರಸ್ಥಳಾಗಿ ವಿಶಿಷ್ಟ ಸಂಪ್ರದಾಯ ಆಚರಣೆಗಳಿಂದ ಮಂಟೇಸ್ವಾಮಿಗೆ ಪ್ರಿಯವಾದ ಶಿಶು ಮಗಳಾಗುತ್ತಾಳೆ.

"ದೊಡ್ಡಮ್ಮ ತಾಯಿ ಸ್ತ್ರೀ ಕುಲದ ಸಂಕೇತವಾಗಿ ನೀಲಗಾರ ಪರಂಪರೆಯ ಸ್ತ್ರೀ ಪರವಾದ ಆಚರಣೆಗಳಲ್ಲಿ ದೊಡ್ಡಮ್ಮನ ಪಾತ್ರ ಹಿರಿದಾಗಿದೆ: ಸಿದ್ದಾಪ್ಪಾಜಿಗೆ ನೀಲಗಾರ ದೀಕ್ಷೆ ಕೊಡುವಾಗ ಇವರಿಬ್ಬರು ದಂಪತಿಗಳು ತಂದೆ-ತಾಯಿಯ ಸ್ಥಾನದಲ್ಲಿ ನಿಂತು ಧಾರೆಯರೆದು ಕೊಡುತ್ತಾರೆ. ಕೌಟುಂಬಿಕ ಕಷ್ಟಗಳ ಭಾಗದಲ್ಲಿ ದೊಡ್ಡಮ್ಮನ ಪಾತ್ರ ತಾಯ್ತನದಿಂದ ಸಂತೈಸುತ್ತದೆ"[೫೧] ಸ್ತ್ರಿ ಸಹಜವಾದ ಪ್ರಕ್ರಿಯೆಗಳು ದೊಡ್ಡಮ್ಮ ತಾಯಿಯ ವಿಷಯದಲ್ಲಿ ಸಾಂಸ್ಕೃತಿಕ ಆಚರಣೆಗಳಲ್ಲಿ ಸೇರಿಕೊಳ್ಳುತ್ತದೆ ಎಂಬುದಕ್ಕೆ ಸಾಕ್ಷಿಯಾಗಿದೆ.

"ರಾಚಪ್ಪಾಜಿಯವರು ಗುರುವು
ಚಿಂತೆ ಮಾಡಿಕೊಂಡು ಬರುತ್ತಿದ್ದು
ಈಗಲೀಗಾ ಪತಿ ಹಿಂಬಾಗಲಿ
ತೋದಿನ ದೊಡ್ಡಮ್ಮ ಕೂಡ ಬರುತಿದ್ದು
ಆಗಲೀಗಾ ಮುತ್ತಿನಳ್ಳಿ ತೋಪಿಗೆ ಬಂದುರ
ಆಗ ದುಡುವುಳ್ಳ ದೊಡ್ಡಮ್ಮ
ಮುಟ್ಟುತಟ್ಟಿಗೊಳಗಾಗಿಬುಟ್ಟಿ ಸ್ವಾಮಿ ಎಂದರು
ಹಾಗೆ ಆದ ಮೇಲೆ
ನೀನು ಇಲ್ಲೆ ಮುತ್ತಿನಳ್ಳಿ ತೋಪಿನಲ್ಲಿ ವಾಸಮಾಡು ಅಂತೇಳಿ
ಕೈಹಿಡಿದ ಮಡದಿಯ
ಮುತ್ತಿನಳ್ಳಿ ತೋಪಿನಲ್ಲಿ ಬಿಟ್ಟುರು"[೫೨]

"ನೀಲಗಾರರ ಪರಂಪರೆಯಲ್ಲಿ ಸ್ತ್ರೀ ಪರವಾದ ಆಚರಣೆಗಳಲ್ಲಿ ಇವಳ ಪಾತ್ರ ಗಮನಾರ್ಹವಾಗಿ ಬೆಳೆಯುತ್ತದೆ. ಗಾಯಕ ಸಮೂಹ ಅವಳ ತಾಯ್ತನದ ಅಗತ್ಯವನ್ನು ಎತ್ತಿ ಹಿಡಿಯುವ ಜೊತೆಯಲ್ಲೇ ಅವಳ ಪ್ರಕೃತಿ ಸಹಜವಾದ ಕ್ರಿಯೆಯಾಗಿ ಈ ಕತೆಗಳು ಸೇರಿಕೊಳ್ಳುತ್ತವೆ. ಒಬ್ಬ ಶಿಷ್ಯವರ್ಗ ಚಿತ್ರಿಸಿಸುವ ನಾಯಕಿಗೂ ಜನಪದ ಪರಂಪರೆಯ ನಾಯಕಿಯಾಗಿ ದೊಡ್ಡಮ್ಮನನ್ನು ಸೃಷ್ಟಿಸಿದ್ದಾರೆ"[೫೩] ದೊಡ್ಡಮ್ಮ ತಾಯಿಯಲ್ಲಿನ ಅನನ್ಯವಾದ ಭಕ್ತಿ, ಭಾವುಕತೆ ಆಕೆಯ ಜೀವ ಜೀವಾಳ ಧಾರ್ಮಿಕ ಕಾರ್ಯಗಳಲ್ಲಿ ದೊಡ್ಡಮ್ಮ ತಾಯಿಯ ಪಾತ್ರ ಹಿರಿದು. ಮಂಟೇಸ್ವಾಮಿಯವರ ವ್ಯಕ್ತಿತ್ವದ ಬಹುಮುಖ್ಯವಾದ ಭಾಗವಾಗಿ ದೊಡ್ಡಮ್ಮತಾಯಿ ಇದ್ದರೂ ಹಾಗೂ ಅವರ ಒಟ್ಟು ಸಾಧನೆಯ ಹಿಂದಿರುವ ಅದರ ಸ್ಪೂರ್ತಿ ಅಪೂರ್ವವಾದುದು ಎನ್ನುವುದನ್ನು ಕಾವ್ಯದಲ್ಲಿ ಕಾಣಬಹುದಾಗಿದೆ. ಹಲಗೂರಿನ ಪವಾಡದಲ್ಲಿ ಧರೆಗೆ ದೊಡ್ಡವರು ಸಿದ್ದಾಪ್ಪಾಜಿಯ ಮೂಲಕ ಬಲಿಷ್ಟ ಪಾಂಚಾಳರನ್ನು ಗೆಲ್ಲುವ ಕಾರ್ಯದಲ್ಲಿ ದೊಡ್ಡಮ್ಮ ತಾಯಿ ನಿರ್ವಹಿಸುವ ಪಾತ್ರ ಹಿರಿದಾಗಿದೆ.

ಮಂಟೇಸ್ವಾಮಿ ಕಾವ್ಯದಲ್ಲಿ ದೊಡ್ಡಮ್ಮ ತಾಯಿ ಸ್ತ್ರೀ ದೈವದ ನೆಲೆಯಲ್ಲಿ ನಿಂತು ತನ್ನ ಸ್ತ್ರೀ ವೌಲ್ಯಗಳಾದ ವಾತ್ಸಲ್ಯ ತಾಯ್ತನ, ಸಹನೆ, ಕರುಣೆ, ನಯ, ವಿನಯಗಳ ಸಂಕೇತವಾಗಿ ಅಭಿವ್ಯಕ್ತಿಗೊಳ್ಳುವುದರೊಂದಿಗೆ ಈ ಕಾವ್ಯದಲ್ಲಿ ನಾಯಕಿಯಾಗಿ ನಿಲ್ಲುತ್ತಾರೆ.

**ಚನ್ನಾಜಮ್ಮ**

ಚೆನ್ನಾಜಮ್ಮ ನೀಲಗಾರ ಪರಂಪರೆಯಲ್ಲಿ ಮತ್ತೊಬ್ಬ ನಾಯಕಿಯಾಗಿದ್ದಾರೆ. ಇವರ ಗದ್ದುಗೆ ಕಪ್ಪಡಿಯಲ್ಲಿದೆ. ಮಂಟೇಸ್ವಾಮಿ ಕಾವ್ಯದಲ್ಲಿ ರಾಚಪ್ಪಾಜಿ ಉತ್ತರ ದೇಶದಲ್ಲಿ ವಿಜಯನಗರದ ಗಾರುಡಿಗರನ್ನು ಗೆದ್ದು ಚನ್ನಾಜಮ್ಮನನ್ನು ಪಡೆಯುತ್ತಾರೆ. ವಿಜಯನಗರದ ರಣಗಾರುಡಿಗರು ಹಾಕುವ

ಮೋಡಿಗೆ ತಿರುಮಂತ್ರವಾಗಿ ರಾಚಪ್ಪಾಜಿ ಗಾರುಡಿಗರನ್ನು ಸೋಲಿಸಿ ಚನ್ನಾಜಮ್ಮನನ್ನು ಶಿಶುಮಗಳಾಗಿ ಪಡೆಯುತ್ತಾರೆ.

ಅರಳೀಕಟ್ಟೆ ಜಗಲೀಮ್ಯಾಲೆ
ಜಗತ್ತು ಗುರುಧರೆಗೆ ದೊಡ್ಡವು
ನಿದ್ರೆ ತಿಳಿದು ಮೇಲಕ್ಕೆ ಎದ್ದಿದ್ರು
ಮೋಡಿ ಆಟದಲ್ಲಿ ಕಿಡುಗಣ್ಣ ರಾಚಪ್ಪಾಜಿಯವರು
ಮೋಡಿಕಾರರನ್ನು ಸೋಲಿಸಿಬುಟ್ಟು
ಈಗಲೀಗ ಸತ್ತೀ ಸತ್ತೀ ಬಿದ್ದಿರುವ
ಮೋಡಿಕಾರರನ್ನು ಕಣ್ಣಿಂದ ನೋಡ್ಬುಟ್ಟು
ಈಗ ಸತ್ತಾ ಪ್ರಾಣಿಗಳೆಲ್ಲ
ದೇವಲೋಕ ಸೇರುಬಿಟ್ಟರು
ಈ ಸತ್ತು ಬಿದ್ದಿರ್ತಕ್ಕಂಥ
ಮೋಡಿಕಾರರನ್ನು ಎಚ್ಚರಗೊಳಿಸ್ಬುಟ್ಟು
ಇವರತ್ರ ನಮ್ಮ ಗುರೂಗೆ
ಒಬ್ಬ ಮಗಳ ಪಡುಕೊಂಡ್ಹೋಗಿ
ಗುರುವಿನ ಪಾದಕ್ಕೆ ಒಪ್ಪಿಬೇಕು ಅಂತ್ಹೇಳಿ"[೫೪] ಗುರಿವಿನ

ಪಾದಕ್ಕೆ ಬಿದ್ದರು ಆಗ ರಾಚಪ್ಪಾಜಿ ಅವರನ್ನೆಲ್ಲಾ ಕಪ್ಪು ಧೂಳ್ತವನ್ನು ಹಾಕಿ ಮೋಡಿಕಾರರನ್ನೆಲ್ಲ ಮೇಲಕ್ಕೇಳುವಂತೆ ಮಾಡಿ ಚೆನ್ನಾಜಮ್ಮನನ್ನು ಶಿಶುಮಗಳಾಗಿ ಪಡೆದರು.

"ಗುರುದೇವ ನಮ್ಮ ಮೋಡಿಕಾರ್ರು ನಿಮಗೇನಾಗಬೇಕು ಸ್ವಾಮಿ
ಏನು ಬಿಕುಸ ಏನು ಧರ್ಮ ಕೊಡಬೇಕಪ್ಪ
ತಾಯಿ, ತಂದೆ, ಅಣ್ಣ, ತಮ್ಮ ಸರ್ವಿಷ್ಟು
ಬಂಧು ಬಳಗ ಇಲ್ಲದಿದ್ದಂತ ಶಿಶು ಮಗಳು
ನಮ್ಮ ಪಟ್ಟಣದದಲ್ಲವೈ ಕಣ್ಣಪ್ಪ
ಆ ಮಗಳ ತಂದು ನಿಮಗೆ
ಶಿಶುಮಗಳ ಮಾಡುತೀನಿ ॥ ಸಿದ್ದಯ್ಯ॥ ಎಂದು
ಗೋಗರೆದರು ಅದರಂತೆ ಚನ್ನಾಜಮ್ಮಗಳನ್ನು ಕರೆತಂದು

ಗುರುದೇವಾ ಇವಳ ಹೆಸರು ಹಿರೇ ಚೆನ್ನಾಜಮ್ಮ ಕಣ್ಣಪ್ಪ

ಯಾರೂ ಇಲ್ಲದ ಮಗಳಾ ನೀವೆ ಕರಕಂಡೋಗಿ

ಶಿಶುಮಗಳನ್ನಾಗಿ ಮಾಡಿಕೊಂಡು ಈ ದಿಕ್ಕಿಲ್ಲದ ಮಗಳಿಗೆ

ನೀವೇ ಕಾವಲು ಗುರುವೆ ಎನುತೇಳಿ

ಕಿಡಗಣ್ಣು ರಾಚಪ್ಪಾಜಿ ಬಳಿಗೆ ತಾನಾಗಿ ಬಾರವ್ವ ಮಗಳೆ

ಬಾರೋ ಕಂದಾ ಈ ದೇವರಿಗೆ ಮಗಳಾಗಿ

ಈ ಗುರುವಿಗೆ ಮಗಳಾಗಿ ಹೋಗಪ್ಪಾ ಎನುತೇಳಿ

ರಾಚಪ್ಪಾಜಿಯವರಿಗೆ ಮಗಳಾಗಿ

ಚನ್ನಾಜಮ್ಮ ಕರತಂದು

ಅವರು ಒಂದಾಗಾದರೆ ಕಳುಗುತ್ತಾರೆ ॥ ಸಿದ್ದಯ್ಯ ॥೫೫

ಹೀಗೆ ಚನ್ನಾಜಮ್ಮ ರಾಚಪ್ಪಾಜಿಯವರ ಶಿಶು ಮಗಳಾಗಿ ಕಪ್ಪಡಿ ಹತ್ತಿರ ಹೋಗಿ ರಾಚಪ್ಪಾಜಿ ಗುಡಿಯ ಪಕ್ಕದಲ್ಲೆ ಗದ್ದುಗೆಯಾಗುತ್ತಾಳೆ,

ನೀಲಗಾರ ಸಮುದಾಯದವರು ಚೆನ್ನಾಜಮ್ಮನನ್ನು ಆರಾಧಿಸುವುದನ್ನು ಕಾಣಬಹುದು. ದೊಡ್ಡಮ್ಮತಾಯಿ ರಾಚಪ್ಪಾಜಿ ಜಾತ್ರೆಯ ಸಂದರ್ಭದಲ್ಲಿ ಚನ್ನಾಜಮ್ಮಳಿಗೂ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಇಲ್ಲಿ ಪ್ರತಿದಿನ ಪೂಜೆ ಸಲ್ಲಿಸುವುದಿಲ್ಲ, "ಮಂಟೇಸ್ವಾಮಿ ಪರಂಪರೆಯವರಿಗೆ ಮುಚ್ಚು ಪೂಜೆ ಮಾತ್ರ ಕಾಣಬಹುದಾಗಿದೆ, ಧಾರ್ಮಿಕ ಆಚರಣೆ ಸಂದರ್ಭದಲ್ಲಿ ಮಾತ್ರ ಈ ದೈವಗಳಿಗೆ ಹಣ್ಣು, ಕಾಯಿ ಇಟ್ಟು ಪೂಜಿಸುತ್ತಾರೆ"[೫೬] ಎಂದು ಹೇಳುಬಹುದು. ಈ ರೀತಿಯಾಗಿ ಕೆಲಸಂದರ್ಭಗಳಲ್ಲಿ ಮಾತ್ರ ಪೂಜೆಗೊಳ್ಳುವ ಚೆನ್ನಾಜಮ್ಮ ಮಂಟೇಸ್ವಾಮಿಯ ಕಾವ್ಯದಲ್ಲಿ ನಾಯಕಿಯಾಗಿ ನೆಲೆಗೊಳ್ಳುವುದನ್ನು ಕಾಣಬಹುದು.

ಕಾಡುಗೊಲ್ಲರ ಜೀವನದಲ್ಲಿ ಹಾಸುಹೊಕ್ಕಾಗಿರುವ ಜಂಜಪ್ಪನ ಕಾವ್ಯವು ತುಂಬಾ ಕುತೂಹಲಕರವಾಗಿದೆ. ಒಂದು ಕಾಲದಲ್ಲಿ ಸದಾ ಅಲೆಮಾರಿಗಳಾಗಿಯೇ ಬದುಕು ಸಾಗಿಸುತ್ತಿದ್ದ ಕಾಡುಗೊಲ್ಲರು ಈಗ ಊರಿನಾಚೆಯ ಪ್ರತ್ಯೇಕ ಪ್ರದೇಶಗಳಲ್ಲಿ ತಮ್ಮ ಹಟ್ಟಿಗಳನ್ನು ಕಟ್ಟಿಕೊಂಡು ಬದುಕುತ್ತಿದ್ದಾರೆ. ಎಲ್ಲಾ ಮಹಾಕಾವ್ಯಗಳಿಗಿಂತ ಈ ಮಹಾಕಾವ್ಯಗಳಲ್ಲಿರುವ ಸಂಪ್ರದಾಯ ಆಚರಣೆಗಳು ಇತರೆ ಸಮುದಾಯವನ್ನು ಎದುರುಗೊಳ್ಳುವಾಗ ತೀರಾ ಭಿನ್ನಾವಾಗಿಯೇ ಇವೆ. ಇಲ್ಲಿ ಮಹಿಳೆಯರಿಗೆ ಬೇರೆಯದ ಆದ ಕಟ್ಟಳೆಗಳನ್ನು ವಿಧಿಸಿ ಧಾರ್ಮಿಕತೆಯ ರೂಪವನ್ನು ಕೊಡಲಾಗಿದೆ. ಜುಂಜಪ್ಪನ ಮೂಲಕ ಮಹಿಳಾ ಸಮಾಜಕ್ಕೆ ಅನನ್ಯತೆಯನ್ನು ನೀಡುವುದರ ಜೊತೆಗೆ ಅವಳಿಗೆ ಸಾಂಸ್ಕೃತಿಕ ಬಿಕ್ಕಟ್ಟುಗಳಿಗೆ ಹೊಳವು ಮೂಡಿರುವುದನ್ನು ನೋಡಬಹುದಾಗಿದೆ.

ಜುಂಜಪ್ಪನ ಕಾವ್ಯದಲ್ಲಿ ಮಹಾನಾಯಕಿಯರ ಪಾಲಿಗೆ ಸಿನ್ನಮ್ಮನ ಪಾತ್ರ ಅತ್ಯಂತ ಪ್ರಮುಖ ಪಾತ್ರವಾಗಿದೆ. ಸಿನ್ನಮ್ಮನ ಗಂಡ ಕೆಂಗರು ಮಲ್ಲೆಗೌಡ ಪಶುಪಾಲನೆಯನ್ನು ವೃತ್ತಿಯಾಗಿಸಿಕೊಂಡಿರುವ ಕಾಡುಗೊಲ್ಲರ ಪಶುಗಳ ಜೊತೆಯಲ್ಲಿ ಪಶುಪಾಲನೆಯಲ್ಲಿ ಸದಾ ಕಾಲ ಕಳೆಯುತ್ತಾ ಇರುತ್ತಾನೆ, ಕುಬೇರಗೊಲ್ಲರ ಸಿನ್ನಮ್ಮರೊಡನೆ ಇವನ ವಿವಾಹವಾಗುತ್ತದೆ. ಮದುವೆಯಾದ ಕೂಡಲೇ ಸಿನ್ನಮ್ಮನನ್ನು ಬಿಟ್ಟು ದನಗಳನ್ನು ಕರೆದುಕೊಂಡು ಕೊಂಕಿ ಜರಿಮಲೆ ಸೀಮೆಗೆ ಹೊರಟು ಹೋಗುತ್ತಾನೆ. ಮದುವೆಯಾಗಿ ಹನ್ನೆರೆಡು ವರ್ಷ ಕಳೆದರೂ ಗಂಡ ಮನೆಗೆ ಬರಲಿಲ್ಲ. ಊರಿನ ಜನ ಎಲ್ಲರೂ

"ಬಂಜೆ ಮುಂಡ ಅವುಳಣ್ಣ
ಹೆಣ್ಣೆತ್ತವುಳಲ್ಲ
ಗಂಡು ಹೆತ್ತವುಳಲ್ಲ
ಬಂಜೆ ಅವಳೆಂದು
ಊರುಗಳು ಜನುರೆಲ್ಲ
ಅಡುಕಂತರೆ ಸಿನ್ನಮ್ಮನ ಗಳಿಗಾಗೊ"[೫೭]

ಸಿನ್ನಮ್ಮನ ಅತ್ತಿಗೆಯರು ಸಹ ಎದ್ದು ಬಂಜೆಯರ ನೋಡಬಾರದು. ಬಂಜೇರನ್ನು ಆದಿಶಕ್ತಿ ಹೊರೊದಿಲ್ಲ, ಭೂದೇವತೆ ಹೊರೊದಿಲ್ಲ, ಎಂದು ಹೀಯಾಳಿಸುತ್ತಾರೆ, ಒಮ್ಮೆ ಭಿಕ್ಷೆಗೆ ಬಂದಂತಹ ಜೋಗಪ್ಪನು ಸಹ ಬಂಜೆ ಕೈಯ ಭಿಕ್ಷೆ ನಾನು ತೆಗೆದುಕೊಳ್ಳುವುದಿಲ್ಲ ಎಂದು ಹೇಳಿ ಭಿಕ್ಷೆ ಸ್ವೀಕರಿಸದೆ ಹೊರಟು ಹೋಗುತ್ತಾನೆ.

ಸಿನ್ನಮ್ಮನು ಎಲ್ಲರಿಂದಲೂ ಬಂಜೆ ಎಂಬ ಹೀಯಾಳಿಕೆಗೆ ಒಳಗಾಗಿ ಆ ದು:ಖವನ್ನು ತಾಳಲಾರದೆ ಶಿವನನ್ನ ನೆನೆಸಿಕೊಂಡು ಕಾಡಿನಲ್ಲಿನ ಮಡುವಿಗೆ ಬಿದ್ದು ಪ್ರಾಣವನ್ನು ಕಳೆದುಕೊಳ್ಳಲು ಹೋಗುತ್ತಾಳೆ, ಆದರೆ ಸತ್ಯವಂತೆಗೆ ಅಪಾಯ ಮಾಡಬಾರದೆಂದು ಗಂಗಮ್ಮ ಇಂಗಿ ಹೋಗುತ್ತಾಳೆ, ಹೀಗೆ ಯಾವ ತೆರನಾಗಿಯೂ ಪ್ರಾಣ ಕಳೆದುಕೊಳ್ಳುಲು ಸಾಧ್ಯವಾಗದೆ ಇರುವಾಗ ಗೌರಸಂದ್ರದ ಮಾರಮ್ಮ ಸಿನ್ನಮ್ಮನ ಸಹಾಯಕ್ಕೆ ಬರುತ್ತಾಳೆ. ಗೌರಸಂದ್ರದ ಮಾರಮ್ಮ ನೀನು ಪತಿವ್ರತೆ. ನಿನಗೆ ಕೈಲಾಸದ ಪದವಿ ಇದೆ. ಮಕ್ಕಳ ಫಲವು ಬೇಕಾದಲ್ಲಿ ಈಶ್ವರನ ಕುರಿತು ತಪಸ್ಸು ಮಾಡಲು ಹೇಳಿದಳು, ತಪಸ್ಸು ಮಾಡಿದ್ದು ಪಾರ್ವತಿ ಪರಮೇಶ್ವರರು ನರಲೋಕಕ್ಕೆ ಬರುತ್ತಾರೆ ಆಗ ಸಿನ್ನಮ್ಮ

'ನನಗೆ ಮಕ್ಕಳ ಸಂತಾನ ಕೊಡುಸ್ವಾಮಿ ಇಲ್ಲದಿದ್ದರೆ ನಾಲಿಗೆ
ಇರಿದುಕೊಂಡು ಪ್ರಾಣ ಬಿಡುತ್ತೆನೆ, ಎನ್ನುತ್ತಾ
ಆಗಲೆ ಹುಟ್ಟಲಿ ಸ್ವಾಮಿ
ಈಗಲೇ ಸಾಯಲಿ ಸ್ವಾಮಿ
ಬಂಜೆ ಎಂಬ ಸೊಲ್ಲ

ಇಂಗುಸಯ್ಯೊ

ಎಂದು ಸಿನ್ನಮ್ಮ ಬೇಡಿದಾಗ ಅದಕ್ಕೆ ಈಶ್ವರನು

"ಅತ್ತಿ ಹೂವಿನಂಗೆ

ನೆತ್ತೆಗೊ ನೆರಿ ಬಂದಾನ

ಇನ್ನೂ ಬೇಕೇನೆ ಸಿನ್ನಮ್ಮ

ಮಕ್ಕಳ ಫಲುಗಳು"[೫೮]

ಇಲ್ಲಿ ಅಭಿವ್ಯಕ್ತಗೊಂಡಿರುವ ಸಿನ್ನಮ್ಮನ ತಾಯ್ತನದ ಹಂಬಲ ಎಷ್ಟಿದೆ ಎಂದರೆ ಸಂಜೆ ಹುಟ್ಟಿ ಬೆಳಗ್ಗೆ ಸತ್ತರು ಸರಿಯೇ ಒಟ್ಟಿನಲ್ಲಿ ಬಂಜೆ ಎಂಬ ಚುಚ್ಚುಮಾತಿನಿಂದ ದೂರಾಗಬೇಕು ಎಂಬುದನ್ನು ಗಮನಿಸಿದರೆ ಬಂಜೆಯ ದು:ಖ ವೇದನೆ ತುಡಿತ ಎಷ್ಟೆಂಬುದನ್ನು ಕಾಣಬಹುದು.

ಕೊನೆಗೆ ಶಂಕರನು ಮೂರುಗಂಡುಗಳ ಹಿಂದೆ ಒಂದು ಹೆಣ್ಣು ಹುಟ್ಲಿ ಎಂದು ಆಶೀರ್ವದಿಸಿದ, ಸಿನ್ನಮ್ಮನು ಗರ್ಭಿಣಿಯಾದಳು ಜುಂಜಪ್ಪ ಸಿನ್ನಮ್ಮನ ಬೆನ್ನಿನಿಂದ ಜನಿಸುತ್ತಾನೆ "ಇಲ್ಲಿ ಜುಂಜಪ್ಪಾ ತಾಯಿಯ ಗರ್ಭದಲ್ಲಿದ್ದಾಗಲೇ ಮಾತನಾಡಿ ಕಾರಣಿಕ ಶಿಶುವೆಂಬ ಹಾಗೆ ವರ್ಣಿತವಾಗಿದ್ದಾನೆ.೩೪

"ಆ ಕಡೆ ಗುಡುಸಲಿಗೆ ಹೋಗೇವುಳೋ ನಿನ್ನಮ್ಮ

ಹೋಗುತ್ತಿದ್ದಂತೆ

ಮಾರಣ್ಣ, ಮೈಲಣ್ಣರೆಂಬೆರಡು

ಜವುಳಿ ಮಕ್ಕಳುಟ್ಟಿದುರಣ್ಣ"[೫೯]

ಸಿನ್ನಮ್ಮ ೩ ಜನ ಗಂಡು ಮಕ್ಕಳನ್ನು ಹೆತ್ತು ಅಲೇಗೌಡನ ಹಟ್ಟಿ ಮನೆ ಗೌಡನ ಹತ್ತಿರ ಹೋಗಿ ಸೂತಕ ಕಳೆದು ಜನಿಗೆ ಹಾರ ಮಕ್ಕಳಿಗೆ ನಾಮಕರಣ ಮಾಡಬೇಕೆಂದು ಕೇಳಿಕೊಂಡಾಗ, ಊರಿನ ಜನರು ಗಂಡ ಇಲ್ಲದೆ ಮಕ್ಕಳನ್ನ ಪಡೆದವಳು ಎಂದು ಹೀಯಾಳಿಸುತ್ತಾರೆ. ಆಗ ಊರಗೌಡ ನನ್ನ ಸೊಸೆ ಪತಿವ್ರತೆ ಪರಮೇಶ್ವರನ ವರದಿಂದ ಮಕ್ಕಳನ್ನು ಪಡೆದಿದ್ದಾಳೆ ಜನಿಗೆ ಹಾಕಬೇಕು ಎಂದು ಅಲೇಗೌಡ ಕೇಳಿದಾಗ

"ಗಂಡ ಮುಟ್ಟದ್ದು

ಗರ್ಭಿಣಿಯಾಗದುಂಟೇನಯ್ಯ

ಅವುಳು ಏನು ಇಲ್ಲದೆ

ಗರ್ಭಿಣಿಯಾಗುಬೇಕಾದ್ರೆ

ತಾಯಿಕಳುವರಳ್ಳಿ

ಹಾಗಲೇ ಊರೊಳುಗೆ

ತುರಕರಿಗೊ ತುಂಡ್ರನಿಗೊ

ಮ್ಯಾಸ ಬೇಡರನಿಗೂ

ಹುಟ್ಟಿಸಿಕ್ಕುಂಡಿರುವ ಮಕ್ಕಳಿಗೆ

ಜನಿಗೆ ಹಾಕಿರೆಂದು

ಬಂದಿದ್ದೇರೆನಯ್ಯ ಗಳಿಗಾಗೋ"[60]

ಎಂದು ಗೌಡ ಪೂಜರಪ್ಪಾ ದಳವಾಯಿಗಳು ಬೈದರು

"ಪವಾಡ ಪುರುಷರಿಗೆ ಜನ್ಮವಿತ್ತ ತಾಯಂದಿರಿಗೆ ಲೋಕಾಪವಾದ ತಪ್ಪುವುದಿಲ್ಲ, ಜುಂಜಪ್ಪ ದೈವಾಂಶ ಸಂಭೂತ ಎಂಬುದು ಸಾಮಾನ್ಯ ಜನಕ್ಕೆ ಅರ್ಥವಾಗುವುದು ಅವನು ಎಸಗುವ ಪವಾಡಗಳಿಂದ ಈ ವೀರ ಪುರುಷ ಬಾಲ್ಯದಲ್ಲಿ ತೋರಿಸಿದ ಶಕ್ತಿ ಪರಾಕ್ರಮಗಳೂ ಹಾಗೂ ಅತಿವಿಸ್ಮಯಕಾರಕ ಪವಾಡಗಳೂ ಕಾವ್ಯದುದ್ದಕ್ಕೂ ಹರಡಿಕೊಂಡಿದೆ"[61]

"ಅವರುಟ್ಟಿ ಊದಿಬಾಗಿಲೊಳುಗೆ

ಮೂರು ತಾವು ಕುಂಡಿರಿಸಿ

ಮೂರು ತಾವೆಬ್ಬುರಿಸಿ

ಜನಿಗೆ ಹಾಲನ್ನು ಕುಡಿಸಿ

ಜನಿಗೆ ಗಂಜನು ಕುಡಿಸಿ

ಸೂತ್ಗವೇ ಕಳುದವುರಣ್ಣ"[62]

ಸಿತ್ತುರ ದೇವರು ಪ್ರತ್ಯಕ್ಷಾಗಿ ಪರಮ ಪತಿವ್ರತೆ ನೀನು ಮಾರಣ್ಣ ಮೈಲಣ್ಣ ಜೋಡಿಲಿ ಜುಂಜಪ್ಪ ಎಂದು ಹೆಸರಿಕ್ಕಮ್ಮ ಎಂದರು

"ಮಾತನಾಡುವ ಅಲೌಖಿಕ ಶಿಶುವಾಗಿ ಜನಿಸುವ ಜುಂಜಪ್ಪ ತಾಯಿಯನ್ನು ಹಿರಿಯಟ್ಟಿಗೆ ಜನನಿಗೆ ಕರೆದುಕೊಂಡು ಹೋಗುವ ಸನ್ನಿವೇಶ ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳಿಗೆ ಕೈಗನ್ನಡಿಯಾಗಿದೆ. ಹಟ್ಟಿಯಿಂದ ಹೊರಗಿದ್ದು ಸೂತಕ ನೀಗಿಸುವ ನಡಾವಳಿಗಳನ್ನೆಲ್ಲಾ ಗಮನಿಸಿದರೆ ಜುಂಜಪ್ಪನ ಕಾವ್ಯ ಕಾಡುಗೊಲ್ಲರ ಜೀವನದ ಆಚಾರ-ವಿಚಾರಗಳು ವಿಶ್ವಕೋಶದಂತಿದೆ"[63]

೩ ಗಂಡು ಮಕ್ಕಳು ಹುಟ್ಟಿದ ಮೂರು ವರುಷಕ್ಕೆ ಒಂದು ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಸಿನ್ನಮ್ಮ ಹುಟ್ಟಿದಂತಹ ಹೆಣ್ಣು ಮಗುವಿಗೆ ಮಾರಕ್ಕ ಎಂದು ಹೆಸರಿಟ್ಟರು "ಕಾಳೇಗೌಡ ನಾಗವರರವರು ಸಂಗ್ರಹಿಸಿರುವ ಪಾಠದಲ್ಲಿ ಜುಂಜಪ್ಪನ ತಂದೆ ಮಾರಕ್ಕನ ಮುಖ ನೋಡಿದಾಗ ತಲೆಸಿಡಿದು ಸಾಯುತ್ತಾನೆ, ಆನಂತರ ಶ್ರೀಮಂತಿಕೆ ಹೋಗುತ್ತದೆ. ಮನೆಗೆ ಕಡು ಬಡತನ ಆವರಿಸುತ್ತದೆ ಅವರೆಲ್ಲ ಅರಮನೆಯನ್ನು ಬಿಟ್ಟು ಅರಣ್ಯ ಸೇರುತ್ತಾರೆ."[64]ಎಂದು ಉಲ್ಲೇಖ ಮಾಡಿದ್ದಾರೆ.

ಸಿನ್ನಮ್ಮ ತನ್ನ ೪ ಜನ ಮಕ್ಕಳನ್ನು ಸಾಕಲು ಕಟ್ಟಿಗೆ ಮಾರಲು ತೊಡಗುತ್ತಾಳೆ, ಒಮ್ಮೆ ಕಟ್ಟಿಗೆ ಮಾರಲು ಕ್ವಾಮಟಿಗೆ ಹೋಗಲು ಸೌದೆ ಕಡಿದು ಹೊರೆ ಕಟ್ಟುವಾಗ, ಸುಂಟರ ಗಾಳಿ ಬಂದು ಅವಳ ಏಳು ಮಾರುದ್ದಾ ಮುಂಡೆ ಕಿತ್ತೊದವು ನಂತರ ಕಟ್ಟಿಗೆ ಮಾರಿ ಬರುತ್ತಾಳೆ.

ಒಮ್ಮೆ ಸೌದೆಯನ್ನು ತರಲು ಕಾಡಿಗೆ ಹೋಗಿ ಅವಸರದಿಂದ ಏಳುಲು ಹೋದಾಗ ಸಿನ್ನಮ್ಮನ ಸೀರೆ ಹರಿದು ಹೋಗುತ್ತದೆ. ಅಲ್ಲಿಂದ ತ್ಯಾಗದೆಲೆಯ ರಕ್ಷಣೆಯಲ್ಲಿದ್ದಾಗ ತನ್ನ ಅಣ್ಣಂದಿರ ಕಣ್ಣಿಗೆ ಬಿದ್ದು ತವರು ಮನೆಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಸೀರೆ ಉಡಿಸಿ ಮಡ್ಲಕ್ಕಿ ಕಟ್ಟಿ ಆಕೆಯನ್ನು ಕಳುಹಿಸುತ್ತಾರೆ. ಜುಂಜಪ್ಪ ಹಿಂದೆಯೇ ತಾಯಿಗೆ ಹೇಳಿರುತ್ತಾನೆ. ಊರೊಳಗೆ ಒಂದೇ ಒಂದು ರಾತ್ರಿ ನಿಂತವಳೆ ಅಂದ್ರೆ ಕೆಟ್ಟೋಗವ್ಳ ಅಂತ ಅಲ್ಲಿಗೆ ಬ್ಯಾರೆ ಜಾತಿಯವಳಾದ್ದು ಅಂತ ಮನೆಯೊಳಗೆ ಬಿಟ್ಟುಕೊಂಬುದಿಲ್ಲ ಕಣ್ಣಮ್ಮ ಭೂಮಿ ಚಂದ್ರ ಇರೊವರ್ಗೋ ಇದೇ ನಡ್ದೊಗಲಿ ಎಂದಿದ್ದ. ಪ್ರಾಯಶ: ಜುಂಜಪ್ಪ ಊರಿನಲ್ಲಿ ಹೊಸ ಸಂಪ್ರದಾಯಗಳ ಹುಟ್ಟಿಗೆ ಇಲ್ಲಿ ಬುನಾದಿ ಹಾಕಿರುತ್ತಾನೆ.

ಅಣ್ಣಂದಿರ ಮನೆಯಲ್ಲಿ ಇದ್ದು ಬಂದ ಸಿನ್ನಮ್ಮರ ಬಗ್ಗೆ ಜುಂಜಪ್ಪ ಶಂಕೆ ವ್ಯಕ್ತಪಡಿಸಿದ ಸಿನ್ನಮ್ಮನು ಜುಂಜಪ್ಪ ಒಡ್ಡುವ ಎಲ್ಲ ಪರೀಕ್ಷೆಗಳನ್ನು ಎಲ್ಲರೆದುರು ಎದುರಿಸಲು ಸಿದ್ಧಳಾದಳು

೧ ಒಣಗಿದ ಒನಕೆಯಿಂದ ಒಳ ನಾರು ತೆಗೆಯುವುದು.

೨ ತೂತಿನ ಕಣ್ಣಿನ ಜರಡಿಯಿಂದ ಕಲ್ಯಾಣಿಯಲ್ಲಿ ನೀರು ತರುವುದು

೩ ಸಮುದ್ರದಿಂದ ಮುತ್ತಿನುಂಗುರ ತರುವುದು

೪ ಸೇಣೆ ಎಲೆಯನು ಬಿಡಿಸಿ ರಾಶಿ ಹಾಕುವುದು

೫ ಬಿಳಿ ಸೀರೆಯುಟ್ಟು ಕಳಸ ಹೊತ್ತುಕೊಂಡು ಅಗ್ನಿ ಪ್ರವೇಶ ಮಾಡುವುದು

೬ ಸತ್ತ ತಂದೆ ಕೆಂಗರು ಮಲ್ಲೆಗೌಡನನ್ನು ಏಳಿಸಿ ಮಾತನಾಡಿಸುವುದು

೭ ತನ್ನ ಅಣ್ಣರು ಉಡಿಸಿದ ಬಿಳಿ ಸೀರೆಗೆ ಹೋಗಿ ತಾನು ಕೊಟ್ಟಿದ ತ್ಯಾಗದ ಉಡುಗೆ ಪ್ರತ್ಯಕ್ಷವಾಗಬೇಕು

೮ ನಾಲ್ಕು ಜನ ಮಕ್ಕಳಿಗೆ ಬೇರೆ ಬೇರೆ ತೆರೆಯಲ್ಲಿ ನಿಂತು ಹಾಲುಣಿಸುವುದು.

ಈ ಎಲ್ಲಾ ಪರೀಕ್ಷೆಯಲ್ಲೂ ಸಿನ್ನಮ್ಮ ಗೆದ್ದಾಗ ಜುಂಜಪ್ಪ ಮತ್ತು ಅವನ ಅಣ್ಣತಮ್ಮರು ತಾಯಿಯ ಪಾದ ಹಿಡಿದುಕ್ಕೊಂಡು ತಮ್ಮ ತಾಯಿ ಪವಿತ್ರಳು ಎಂದು ಸಾರಿದರು.

ಜುಂಜಪ್ಪನೇ ಹೇಳುವಂತೆ ಆ ಮಹಾತಾಯಿಗೆ ಉಂಟಾಗಿದ್ದ ಲೋಕನಿಂದನೆ, ಗಂಡ ಇಲ್ಲದೆ ಗರ್ಭಿಣಿ ಆಗಿ ಮಕ್ಕಳನ್ನು ಹಡೆದವಳು ಎಂಬುದು ಜನರಿಗೆ ತಿಳಿದಿತ್ತೆ ವಿನ: ಪರಮೇಶ್ವರನಿಂದ ವರ ಪಡೆದದ್ದು ಯಾರಿಗೂ ತಿಳಿದಿರಲಿಲ್ಲ, ಕಾಡಿನಲ್ಲಿ ನೀನು ಪಡೆದಿದ್ದ ವರ ಇವರ ಅರಿವಿಗೆ ಬರಲಿ ನನ್ನ ತಾಯಿ ಪತಿವ್ರತೆ ಎಂಬುದು ಪ್ರಪಂಚಕ್ಕೆಲ್ಲ ತಿಳಿಯಲಿ ಎನ್ನುವ ದೃಷ್ಟಿಯಿಂದ ಪರೀಕ್ಷೆಗಳನ್ನು ಒಡ್ಡಿದೆ ಎಂಬುದಾಗಿ ಹೇಳುತ್ತಾನೆ. ಸಿನ್ನಮ್ಮ ಪರಿಶುದ್ಧಳಾಗಿದ್ದು ಕಳಂಕರಹಿತವಾದ ನಡತೆಯಿಂದಾಗಿ ಮತ್ತು ಪರಮೇಶ್ವರನ ಭಕ್ತಳಾದ ಕಾರಣ ಅವಳು ಎಲ್ಲಾ ಪರೀಕ್ಷೆಗಳಲ್ಲಿ ದಿವ್ಯವಾಗಿ ಜಯಗಳಿಸಿ ತನ್ನ

ಪಾತಿವ್ರತ್ಯವನ್ನು ಸಾಬೀತು ಮಾಡುತ್ತಾಳೆ. ಸಿನ್ನಮ್ಮ ಇಷ್ಟೆಲ್ಲ ಕಷ್ಟ ಕಾರ್ಪಣ್ಯಗಳನ್ನು ಎದುರಿಸಿ ಪುರುಷ ಕೇಂದ್ರಿತ ಸಮಾಜ ನಿರ್ಮಿಸಿದ ವಿಧಿ ನಿಷೇಧಗಳ ಚೌಕಟನ್ನು ಧಾಟಿ ತನ್ನ ಮೌಲ್ಯವನ್ನು ಜಗತ್ತಿಗೆ ತೋರಿಸುವುದರ ಮೂಲಕ ಕಾವ್ಯದಲ್ಲಿ ಮಹಾ ನಾಯಕಿಯಾಗಿ ನಿಲ್ಲುತ್ತಾಳೆ

ಮೈಲಾರಲಿಂಗನ ಕಾವ್ಯ ಪ್ರಧಾನವಾಗಿ ಮೈಲಾರರದ ಸಿದ್ಧಿ ಸಾಧನೆಗಳನ್ನು ಸ್ತುತಿಸುತ್ತದೆ. ಅದರಲ್ಲಿ ತನ್ನ ಹಾಗೂ ತನ್ನ ಅಸ್ತಿತ್ವಕ್ಕಾಗಿ ಹೋರಾಡಲಾಗಿವೆ. ಸಾಂಸ್ಕೃತಿಕ ಐಕ್ಯತೆ ಮೈಲಾರಲಿಂಗನ ಆಯಾಮಗಳಲ್ಲಿ ವಿಶೇಷವಾಗಿ ಕಾಣಬಹುದಾಗಿದೆ. ಮೈಲಾರನ ದುಷ್ಟಸಂಹಾರ ಶಿಷ್ಟ ರಕ್ಷಣೆ, ಮದುವೆಗಳು ಪವಾಡಗಳು ಭಕ್ತರನ್ನಾಗಿ ಮಾಡಿಕೊಳ್ಳುಲು ನಡೆಸುವ ಪ್ರಯತ್ನವನ್ನು ಕಾವ್ಯದಲ್ಲಿ ಕಾಣಬಹುದು. ಹೀಗೆ ಭಕ್ತರನ್ನು ಪಡೆಯುವಾಗ ನಡೆಯುವ ಕಥೆಗಳು ಮುಖ್ಯವಾಗಿವೆ. ಅದರಲ್ಲಿ ಗಂಗಿಮಾಳಮ್ಮ, ಕೋಮಾಲಿ, ಮುಖ್ಯವಾಗುತ್ತಾರೆ.

**ಗಂಗಿಮಾಳವ್ವ:**

ಗಂಗಿಮಾಳವ್ವ ಮೈಲಾರಲಿಂಗನ ಕಾವ್ಯದಲ್ಲಿ ಪಾರ್ವತಿಯ ರೂಪಾಂತರವಾಗಿ ಭೂಲೋಕದಲ್ಲಿ ಜನಿಸಿದ್ದಾಳೆ ಎಂದು ಹೇಳಿದ್ದಾರೆ. ಗಂಗಿಮಾಳಮ್ಮನ ಅವತಾರದೊಂದಿಗೆ ಭಂಡಾರದ ಅರಿಶಿನ ಹುಟ್ಟಿದ್ದು ಎಂಬುದಾಗಿ ಹೇಳುತ್ತಾರೆ.

"ಓ ಮಾಳಿಯ ಮಡಗಿದ್ದನವ್ವ
ಮೈಲಾರಲಿಂಗ ತಿಂಗಳ ಕೂಡಿದ್ದನು
ನೆನ ಗುಡ್ಡದಯ್ಯ ಗಂಗವ್ವನ ಮಡಗಿದ್ದನು
ಸ್ವಾಮಿ ನಗುತ ನಗುತ ಬಂದು
ನಗುತ ನಾರಿಯ ತಂದು
ಜಗತ ಕಾಳಗ ತಂದನಯ್ಯ
ಕಂಡು ಕರಗಳ ಪೀಡಿದ/ಕಾಳಗದಿಂದ
ಗೊರವ ರೂಪವ ತಾಳಿದ
ಆ ಮನದಿಂದ
ವಗ್ಗ ರೂಪದ ತಾಳಿದೋ
ಸ್ವಾಮಿ ಕರುದರೋ ಓ ಎಂಬ ಕರಿಯಾಲದೊಳಿರುವ
ಗಿರಿಗೆ ಮಲ್ಲಯ್ಯ ಬಂದಾನಯ್ಯೋ॥ ಮ॥[೬೫]

ಈ ರೀತಿ ಗಂಗಿಮಾಳಮ್ಮ ಮತ್ತು ಮೈಲಾರರು ಭೂಲೋಕದಲ್ಲಿ ಅವತರಿಸಿದ್ದನ್ನು ಈ ರೀತಿಯಾಗಿ ವರ್ಣಿಸಿದ್ದಾರೆ. ಗಂಗಿಮಾಳವ್ವ ತಿರುಪತಿ ತಿಮ್ಮಪ್ಪನ ೭ ಮಕ್ಕಳಲ್ಲಿ ಒಬ್ಬಳಾಗಿದ್ದಾಳೆ. ತಿಮ್ಮಪ್ಪನು ದೊಡ್ಡ ಸಿರಿವಂತನಾಗಿದ್ದು, ಮೈಲಾರನು ಬಡಗೊರವನಾಗಿರುತ್ತಾನೆ.

ಮೈಲಾರನು ಏಳುಕೋಟಿ ಹೊನ್ನು ತೆರವನ್ನು ಕೊಡುವುದಾಗಿ ಹೇಳಿ ಗಂಗಿಮಾಳಮ್ಮನನ್ನು ವಿವಾಹವಾಗುತ್ತಾನೆ. ಇವನ ವಿವಾಹವು ತುಂಬಾ ವಿಜೃಂಭಣೆಯಿಂದ ನಡೆಯುತ್ತದೆ.

"ಮಲ್ಲಯ್ಯ ಮಾಳಮ್ಮಗ ಲಗ್ನವೀಗ
ಸೋಬಾನವೇ
ಆ ಸೂರ್ಯ ಲೋಕಾಲಿಂದ
ಸೂರಪ್ಪ ನಮ್ಮಪ್ಪ ಮಲ್ಲಯ್ಯನ ಮದುವಿಗೆ ಬರಬೇಕು
ಸೋಬಾನನೇ
ಮಾಳಮ್ಮನ ಲಗ್ನಕೆ ಬರಬೇಕು
ಆ ಚಂದ್ರ ಲೋಕದಿಂದ
ಚಂದ್ರಪ್ಪ ನಮ್ಮಪ್ಪ
ಮಲ್ಲಯ್ಯನ ಲಗ್ನಕ್ಕೆ ಬರಬೇಕು
ಮಾಳಪ್ಪನ ಲಗ್ನಕ್ಕೆ ಬರಬೇಕು
ಏ ಭೂಮಿ ಲೋಕದಿಂದ
ಭೂಮಮ್ಮ ನಮ್ಮ ತಾಯಿ
ಮಲ್ಲಯ್ಯನ ಮದುವಿಗೆ ಬರಬೇಕು
ಮಾಳಮ್ಮನ ಲಗ್ನಕ್ಕೆ ಬರಬೇಕು
ಏ ಅಪ್ಪಾಜಿ ಈರಣ್ಣ
ಒಪ್ಪದಿಂದಲಿ ಕೇಳೋ
ಮಲ್ಲಯ್ಯನ ಬಾಸಿಂಗ ಕೆಳವೀಗ
ಮಲ್ಲಯ್ಯಯ ಹಾರವತಾರವೀಗ
ಆ ಅಪ್ಪಾಜಿ ಈರಣ್ಣ
ಒಪ್ಪದಿಂದಲಿ ಕೇಳೋ
ಮಾಳವ್ವನ ಮನಸೋಗ ತಾಳವೀಗ
ಮಾಳಮ್ಮ ಬರತಾಳ ವೀರ
ಆ ನಾಗ ಲೋಕದಿಂದ
ನಾಗಕನ್ಯೆಯರು ಬಂದು
ಐಮ ನೀರುಗಳು ತುದ್ಯಾರಲ್ಲ

ಆ ಬ್ರಹ್ಮ ಲೋಕದಿಂದ

ಬ್ರಹ್ಮ ಆಚೆಗೆ ಬಂದು

ಭ್ರಮಿಸಿ ಆಕ್ಯಾನೆ ಬ್ರಹ್ಮಗಂಟು

ಏ ಮಲ್ಲಯ್ಯನ ಮಾಳಮ್ಮಗ

ಲಗ್ನವ ಮಾಡ್ಯರೋವ್ವ

ಕಾಯಿ ವಡೆದು ಮಂಗಾಳರುತಿ ಮಾಡ್ಯಾರೆಲ್ಲಾ"[೪೨] ಈ ರೀತಿಯಾಗಿ ಮೈಲಾರಲಿಂಗ ಮಾಳಮ್ಮರ ಮದುವೆಗೆ ಸೂರ್ಯ, ಚಂದ್ರ, ಭೂಮಿ, ತಾಯಿ, ಎಲ್ಲರನ್ನೂ ಆಹ್ವಾನಿಸುತ್ತಾರೆ. ಅವರಿಗೆ ಸಿಂಗಾರ ಮಾಡಿ ಬಾಸಿಂಗ ಕೆಟ್ಟ ನಮ್ಮ ಸಂಪ್ರದಾಯಾದಂತೆ ವಿವಾಹ ಮಾಡಿರುವುದನ್ನು ಕಾಣಬಹುದು. ನಾಗಕನ್ನೆಯಿರಿಂದ ನೀರುಹಾಕಿಸಿ ಬ್ರಹ್ಮನಿಂದಲೇ ಬ್ರಹ್ಮಲಿಂಗನಿಂದ ಒಂದಾಗಿ ಮನೆಯ ವಿವಾಹ ಮಾಡಿರುವುದು ಕಣ್ಣಿಗೆ ಕಟ್ಟುವಂತೆ ಹಾಡಲಾಗಿದೆ.

ವಿವಾಹದಲ್ಲಿ ಹೆಣ್ಣಿಗೆ ಮಾಂಗಲ್ಯ ಕಟ್ಟುವ ಸಂಪ್ರದಾಯ ಪ್ರಮುಖವಾದುದ್ದು. ಈ ಮಾಂಗಲ್ಯ ಬಂಧನದಿಂದಲೇ ಗಂಡ ಹೆಂಡತಿಯರ ಸಂಬಂಧ ಇನ್ನು ಗಟ್ಟಿಯಾಗುತ್ತದೆ ಎಂಬುದನ್ನು ತಿಳಿಸುತ್ತಾ ಮೈಲಾರ ಮಾಳಮ್ಮರ ವಿವಾಹಕ್ಕೆ ಭೂಮಿ, ಸೂರ್ಯ, ಚಂದ್ರರ ಆಹ್ವಾನವು ವಿಶೇಷತೆಯಿಂದ ಕೂಡಿದೆ. ಹೀಗೆ ಸಂಭ್ರಮದಿಂದ ವಿವಾಹವಾದ ಗಂಗಿಮಾಳಮ್ಮನನ್ನು ಮೈಲಾರನು ಬಿಟ್ಟು ಮಾಯವಾಗುತ್ತಾನೆ. ಇದರಿಂದ ಮಾಳಮ್ಮ ದುಃಖದಿಂದ ಒಬ್ಬಂಟಿಗಳಾಗಿ ತನ್ನ ದುಃಖವನ್ನು ಹೇಳಿಕೊಳ್ಳುತ್ತಾ

"ದುಃಖಗಳು ಮಾಡುತ್ತಾಳೆ ಮಾಳಮ್ಮ

ಕಣ್ಣೀರು ಚಳ್ಳುತಾಳೆ

ಪುರುಷರಿಲ್ಲದ ಜೀವಾ ಶಿವಾಶಿವಾ

ಬೀಳ ಮಂಚವಾಗೈತೇ

ಗಂಡರಿಲ್ಲದ ಜೀವಾ ಶಿವಾಶಿವಾ

ಬೀಳ ಮಂಚವಾಗೈತೇ"[೬೬] ಎಂದು ಸಮಾಜದಲ್ಲಿ ಗಂಡನಿಲ್ಲದೆ ಹೆಣ್ಣು ಒಂಟಿಯಾಗಿ ಬದುಕಲು ಸಾಧ್ಯವಿಲ್ಲ. ಆದ್ದರಿಂದ ಮಲ್ಲಯ್ಯ ತಾನ್ನ ಬಿಟ್ಟು ಹೋಗಿದ್ದರೆ ಕೋಪಗೊಂಡು.

ಹೋಗಂತ ಗೊರವೈಗೆ ಹಡದಮ್ಮ

ಹಾವಾದರ ಕಚ್ಚಲೇಳೆ

ಹುಲಿಯಾದರು ನುಂಗಲೇಳೆ

ಚೋಳದರು ಕಚ್ಚಲೇಳೇ"[೬೭]

ಎಂದು ಶಪಿಸುತ್ತಾ ದುಃಖ ವ್ಯಕ್ತಪಡಿಸುತ್ತಾಳೆ. ಗಂಗಿಮಾಳಮ್ಮ ಸಾಮಾನ್ಯ ಸ್ತ್ರೀಯಂತೆ ಗಂಡನಿಲ್ಲದೆ

ಸಮಾಜವು ಬದುಕಲು ಬಿಡುವುದಿಲ್ಲ. ಗಂಡಿನ ಆಶ್ರಯ ಇರಲೇಬೇಕು. ಮೈಲಾರ ತನ್ನನ್ನು ಅನಾಥಳನ್ನಾಗಿ ಬಿಟ್ಟುಹೋದ ಎಂದು ಕಣ್ಣೀರು ಹಾಕುತ್ತಾಳೆ. ಎಲ್ಲಾ ದೇವರಿಗೆ ಹರಕೆಯ್ನು ಕಟ್ಟುತ್ತಾಳೆ.

ಮೈಲಾರನು ಮಾಳಮ್ಮನನ್ನು ಬಿಟ್ಟು ಹೋಗಿದ್ದರೂ ಅವನಿಗೋಸ್ಕರ ಕಾದು ತನ್ನ ಪಾತಿವ್ರತ್ಯ ಧರ್ಮವನ್ನು ಪಾಲಿಸುತ್ತಾಳೆ. ಮೈಲಾರನು ಮೊತ್ತೊಂದು ಹೆಣ್ಣನ್ನು ಮದುವೆಯಾಗಿ ಕರೆತಂದಾಗಲೂ ಸಹ ಸವತಿ ಮತ್ಸರವನ್ನು ಮರೆತು ಕೋಮಲಿಯನ್ನು ತಂಗಿಯಾಗಿ ಸ್ವೀಕರಿಸಿ ಮೌಖಿಕ ಕಾವ್ಯಗಳಲ್ಲಿ ನಾಯಕಿಯಾಗಿ ನಿಲ್ಲುತ್ತಾಳೆ. ಗಂಡ ಎಷ್ಟೇ ಕೆಟ್ಟವನಾದರೂ ಸರಿ ದುರ್ನಡತೆಯಿಂದ ನಡೆದರೂ ಸರಿಯೇ ತನ್ನ ಪಾತಿವ್ರತ್ಯ ಉಳಿಸಿಕೊಳ್ಳಬೇಕೆಂಬ ನಿಲುವು ಮೌಖಿಕ ಕಾವ್ಯಗಳ ಬದುಕಲ್ಲಿ ಹಾಸುಹೊಕ್ಕಾಗಿದೆ. ಮಾಳಮ್ಮ ತನ್ನ ಗಂಡನ ವರ್ತನೆಯನ್ನು ಪ್ರತಿಭಟಿಸದೆ ಸಾಧ್ವಿತನದಿಂದಲೇ ಮೈಲಾರಲಿಂಗನ ಕಾವ್ಯದಲ್ಲಿ ಸಾಂಸ್ಕೃತಿಕ ನಾಯಕಿಯಾಗಿ ನಿಲ್ಲುತ್ತಾಳೆ.

**ಕೋಮಲಿ**

ಮೈಲಾರಲಿಂಗನ ಕಾವ್ಯದಲ್ಲಿ ಕೋಮಲಿಯ ಸುಮ ತುಂಬಾ ಆಕರ್ಷಕವಾಗಿದ್ದು, ಮೈಲಾರನ ಉದ್ದೇಶ ಕೋಮಲಿಯನ್ನು ಪಡೆಯುವುದೇ ಆಗಿರುತ್ತದೆ. ಕೋಮಲಿಯನ್ನು ಒಲಿಸಿಕೊಳ್ಳುವಲ್ಲಿ ಮೈಲಾರನು ನಾನಾ ರೀತಿಯ ಮಾಟ ಮಾಡಿ, ಮಂತ್ರಗಳನ್ನು ಹಾಕಬೇಕಾಗುತ್ತದೆ. ಏಕೆಂದರೆ ಮೈಲಾರನಿಗೆ ಕೋಮಲೆಯ ಮೇಲೆ ಅಪಾರವಾದ ಪ್ರೀತಿಯಿದೆ. ಇಲ್ಲಿ ಮೈಲಾರನ ಜೀವನದ ಉದ್ದೇಶ ಕೋಮಲಿಯನ್ನು ಪ್ರೀತಿಸಿ ವಿವಾಹವಾಗುವುದು. ಆದ್ದರಿಂದಲೇ ಮೈಲಾರಲಿಂಗನ ಜೀವನದಲ್ಲಿ ಕೋಮಲಿಯು ಸ್ಥಿರವಾದ ಅಸ್ತಿತ್ವವನ್ನು ಹೊಂದಿರುತ್ತಾಳೆ.

ಮೈಲಾರನ ಭಂಡಾರದ ಪ್ರಯೋಗದಿಂದ ಕೋಮಲಿ ಬಾವಿಯ ಬಳಿ ಬರುವುದನ್ನು ಕಂಡು ಮೈಲಾರನು ಅತೀವ ಸಂತೋಷದಿಂದ ಕುಣಿದಾಡುತ್ತಾ

"ಚಂದಾನ ಹೆಣ್ಣೊಂದು

ಕಲಮ ಗಂದಿ ಹೂವಂದ

ನಗುವಲೆ ಮಾರಿ ಚೆಲುವಂದ

ಕೆಂಪು ಆಲದ ಮರ

ಸೊಂಪಾಗಿ ಹೋಗಿನ್ನು

ಕೆಂಪನ ಹೆಣ್ಣಿನ ಕಂಡೆನೆಂದ"[೬೮] ಎಂದು ತನ್ನ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ಮೈಲಾರ ಕೋಮಾಲಿಯನ್ನು ಕಂಡೊಡನೆ ಅವನಲ್ಲಿ ಮಾನವ ಸಹಜವಾದ ಬಯಕೆಗಳು ಕೋಮಲಿಯ ಮೇಲಿನ ವ್ಯಾಮೋಹವನ್ನು ಕಾಣಬಹುದು. ಕೋಮಲಿಯು ಮೈಲಾರನಿಗೆ ವಿವಿಧ ರೀತಿಯಲ್ಲಿ ಹೀಯಾಳಿಸಿ ಬೈದರೂ, ಅವಮಾನಿಸಿದರೂ ಮೈಲಾರನು ಅವಳನ್ನು ಬಿಡದೆ ತನ್ನ ಅವತಾರದಿಂದ ಕೋಮಲಿಯನ್ನು ಒಲಿಸಿಕೊಳ್ಳುತ್ತಾನೆ. ಮೈಲಾರನು ಅವಳನ್ನು ಪಡೆಯಲು ದಾದಿಯರಿಗೆ ಸೀರೆ, ಕುಪ್ಪಸ, ಕಡ್ಲೆ, ಬೆಲ್ಲ ಕೊಡುತ್ತೇನೆ ಎಂದು ಆಸೆ ತೋರಿಸುತ್ತಾನೆ. ತಾನು ಕೋಮಲಿಗೆ ಸೋದರ

ಮಾವನಾಗಬೇಕೆಂದು ಹೇಳಿಕೊಂಡು ಅವಳನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಕೊನೆಗೆ ಮಾಟ, ಮಂತ್ರ, ಮೋಡಿ ಮಾಡಿಯಾದರೂ ಸರಿಯೇ ತಾನು ಕೋಮಲಿಯನ್ನು ಪಡೆದೇ ತೀರಬೇಕೆಂಬ ಬಯಕೆಯನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ಮೈಲಾರನ ಜೀವನದ ಉದ್ದೇಶ ಕೋಮಲಿಯನ್ನು ಪ್ರೀತಿಸಿ ವಿವಾಹವಾಗುವುದು. ಆದ್ದರಿಂದಲೇ ಮೈಲಾರಲಿಂಗನ ಕಾವ್ಯದಲ್ಲಿ ಸಾಂಸ್ಕೃತಿಕ ನಾಯಕಿಯಾಗಿದ್ದಾಳೆ. ಮೈಲಾರನ ಜೀವನದಲ್ಲಿ ಕೋಮಲಿಯ ಅಸ್ತಿತ್ವ ಎಷ್ಟಿದೆ ಎಂದರೆ ಮೈಲಾರನು ಕೋಮಲಿಯನ್ನು ಪ್ರೀತಿಸಿ ವಿವಾಹವಾಗುವುದರ ಮೂಲಕ ಕುರುಬರನ್ನು ತನ್ನ ಒಕ್ಕಲನ್ನಾಗಿ ಮಾಡಿಕೊಳ್ಳಬೇಕು ಎಂಬ ಆಶಯವನ್ನು ಹೊಂದಿರುತ್ತಾನೆ.

ಮೌಖಿಕ ಕಾವ್ಯಗಳಲ್ಲಿ ಕಂಡು ಬರುವ ಮಹಿಳಾ ನಾಯಕಿಯರು ಸಾಂಸ್ಕೃತಿಕ ನಾಯಕರಿಗೆ ದೇವತೆಯಾಗಿ, ಹೆಂಡತಿಯಾಗಿ, ಭಕ್ತಳಾಗಿ, ಸಂಸ್ಕೃತಿಯ ನಿರ್ಮಾಣಕ್ಕೆ ಸಹಾಯಕರಾಗಿದ್ದಾರೆ. ಎಲ್ಲಾ ನಾಯಕಿಯರು ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಯನ್ನು ಅನುಭವಿಸಿದರು ಸಹ ತಮ್ಮ ವಿಶಿಷ್ಟ ವ್ಯಕ್ತಿತ್ವದಿಂದಾಗಿ ದೈವತ್ವಕ್ಕೇರಿದ್ದಾರೆ. ಯಾವುದೇ ನಾಯಕನು ಮಹಿಳಾ ವಿರೋಧಿಯಾಗಿ ವರ್ತಿಸದೆ ಅವರ ಸ್ಥಾನ ಮಾನಗಳಿಗಾಗಿ ಶಿಷ್ಟ ಸಂಸ್ಕೃತಿಯೊಡನೆ ಸಂಘರ್ಷ ನಡೆಸುತ್ತಾರೆ. ಆದರೆ ಕೆಲವು ಸಾಂಸ್ಕೃತಿಕ ನಾಯಕರು ಶಿಷ್ಟ ವ್ಯವಸ್ಥೆಯನ್ನೇ ಈ ನಾಯಕಿಯರ ಮೇಲೆ ಹೇರಿದಾಗ ಅವರು ಅದನ್ನು ಪ್ರತಿಭಟಿಸದೆ ಮೌನವಾಗಿದ್ದು ಇಡೀ ಸಮಾಜ ವಿಭಿನ್ನ ದೃಷ್ಟಿ ಕೋನದಲ್ಲಿ ನೋಡುವಂತೆ ಮಾಡಿದ್ದಾರೆ. ಮಡಿ ಮೈಲಿಗೆಗಳೆಂಬ ಸಂಪ್ರದಾಯದಲ್ಲಿ ನಾಯಕಿಯರನ್ನು ಬಂಧಿಸಲ್ಪಟ್ಟರು ಸಹ ಅವಳು ಅವೆಲ್ಲವನ್ನು ಮೀರಿ ತನ್ನದೇ ಆದ ಸಂಸ್ಕೃತಿಯನ್ನು ನಿರ್ಮಿಸಿದ ನಾಯಕಿಯರಾಗಿದ್ದಾರೆ.

### ೫.೪ ಧರ್ಮ ಸಂಬಂಧಿ ನೆಲೆಗಳು ಮತ್ತು ಲಿಂಗಸಂಬಂಧಗಳು

ಧರ್ಮ ಎಂಬ ಪದವೇ ಒಂದು ಸಮಾಜ ವ್ಯಕ್ತಿ, ಸಮೂಹ, ಸಮುದಾಯವನ್ನು ಸನ್ಮಾರ್ಗದಲ್ಲಿ ನಡೆಸಲು ಪ್ರೇರೇಪಿಸುವ ವ್ಯವಸ್ಥೆ ಎಂದು ಹೇಳಬಹುದು. ಇಂದು ಸನ್ಮಾರ್ಗ ಎನ್ನುವುದು ಒಂದು ಸಾಪೇಕ್ಷಿತ ಪರಿಕಲ್ಪನೆಯಾಗಿ ಮಾತ್ರ ಬಳಕೆಯಾಗುತ್ತಿದೆ ಹೊರತು ಸರ್ವರಿಗೂ ಒಳ್ಳೆಯದನ್ನು ಉಂಟು ಮಾಡುವ ಸಾಧನಗಳನ್ನು ಒಳಗೊಂಡಿಲ್ಲ, ಕೆಲವು ಸ್ಥಾಪಿತ ಧರ್ಮಗಳು ಪ್ರತಿಪಾದಿಸುವುವಂತಹ ಮೌಲ್ಯಗಳು ಸ್ತ್ರಿಪರವಾಗಿಲ್ಲದೆ ಪುರುಷಾಭಿಮುಖವಾಗಿ ಮಾತ್ರ ಇರುವುದನ್ನು ಕಾಣುತ್ತೇವೆ. ಧರ್ಮಕ್ಕೆ ಸಂಬಂಧಿಸಿದಂತೆ ಸ್ತ್ರಿಯ ಕುರಿತ ಧೋರಣೆಗಳು ೨ ರೀತಿಯಲ್ಲಿ ಹೇಳಬಹುದು. ಒಂದೆಡೆ ಸ್ತ್ರೀಯನ್ನು ದೇವತೆಯೆಂದು ಪೂಜಿಸಿದರೆ ಮತ್ತೊಂಡೆ ಆಕೆಯ ಮೇಲೆ ದೌರ್ಜನ್ಯ ಎಸಗುವುದು ಧಾರ್ಮಿಕ ಸಿದ್ಧಾಂತಗಳಲ್ಲಿ ಕಾಣಬಹುದಾಗಿದೆ.

ಧರ್ಮಕ್ಕೆ ಸಂಬಂಧಿಸಿದ ಅಂಶಗಳು ಪುರುಷರಿಂದ ಉಗಮವಾಗಿದೆ ಎಂದು ಹೇಳಬಹುದು. ಆದರೆ ಧರ್ಮದಲ್ಲಿ ಪುರುಷ ತನಗೆ ಬೇಕಾದಂತೆ ಆಚರಣೆಗಳನ್ನು ಸಂಪ್ರದಾಯಗಳನ್ನು ರೂಪಿಸಿಕೊಂಡಿದ್ದಾನೆ ಹೊರತು ಇವು ಮಹಿಳಾ ಅಸ್ತಿತ್ವದ ಬಗ್ಗೆ ಯಾವುದೇ ನಿಲುವುಗಳನ್ನ ತಾಳುವುದಿಲ್ಲ "ಒಂದು ದೃಷ್ಟಿಯಲ್ಲಿ ಸ್ತ್ರಿಯನ್ನು ಧರ್ಮವು ಆದರ್ಶಭಾವನೆಯಿಂದ ಕಾಣುತ್ತಾ ಅಸ್ತಿತ್ವದ ಬಗ್ಗೆ

ಯಾವುದೇ ನಿಲುವುಗಳನ್ನು ತಾಳುವುದಿಲ್ಲ ಒಂದು ದೃಷ್ಟಿಯಲ್ಲಿ ಸ್ತ್ರಿಯನ್ನು ಧರ್ಮವು ಆದರ್ಶಭಾವನೆಯಿಂದ ಕಾಣುತ್ತಾ ಬಂದಿದ್ದು ಆದರೆ ಇದೇ ಸ್ಥಾನಮಾನಗಳು ಅವಳ ವಾಸ್ತವ ಬದುಕಿನ ವ್ಯವಸ್ಥೆಯಲ್ಲಿ ಧರ್ಮವು ನಿರ್ದೇಶಿದಂತೆ ಹಾಗೂ ನಿಯಂತ್ರಣ ಹೇರಿದಂತೆ ಅವಳನ್ನು ಸುಧೀರ್ಘವಾಗಿ ಒಂದು ಚೌಕಟ್ಟಿಗೆ ಅಂಟಿ ಬೀಳುವಂತೆ ಮಾಡಲಾಗಿದೆ. ಹುಟ್ಟು ಸಾವು ವಿವಾಹ, ಶಿಕ್ಷಣ, ವೈದವ್ಯ ಇವುಗಳಲ್ಲಿ ಸ್ತ್ರಿಯರು ಬಂಧನಕ್ಕೆ ಒಳಗಾಗಿರುವು ಕಂಡು ಬರುತ್ತದೆ"[೬೯] ಸಮಾಜದಲ್ಲಿ ಧರ್ಮ ಏರ್ಪಡಲು ಮುಖ್ಯವಾಗಿ ಸ್ತ್ರೀಯನ್ನು ಶುದ್ದ-ಅಶುದ್ದಗಳ ಪರಿಕಲ್ಪನೆಗಳಿಂದ ದೂರವಿರಿಸಿದಾಗ ಅವಳು ಅಸ್ಪೃಶ್ಯಳಾಗಿ ಕಾಣುತ್ತಾ ಬಂದಳು. ಇದರಿಂದಾಗಿ ಮಹಿಳೆಯ ಸಾಮಾಜಿಕ ಮತ್ತು ಆರ್ಥಿಕ ಜೀವನದಿಂದ ಬಲವಂತವಾಗಿ ಹೊರದೂಡಲ್ಪಟ್ಟಳು. ಇದು ಮುಂದೆ ಸಮುದಾಯಗಳಲ್ಲಿ ಪುರುಷನ ನಂತರ ಗಂಡು ಉತ್ತರಾಧಿಕಾರತ್ವವನ್ನು ಪಡೆಯುವ ಪದ್ದತಿ ಹುಟ್ಟು ಹಾಕಿತು. ಅದ್ದರಿಂದ ಕುಟುಂಬಗಳ ಮೂಲಕ ಉಂಟಾದ ಧಾರ್ಮಿಕ ಸಂಘರ್ಷಗಳು, ಲಿಂಗತಾರತಮ್ಯ, ಲಿಂಗ ಸಂಬಂಧದೊಂದಿಗೆ ಕಾಣಲು ಪ್ರಾರಂಭಿಸಿತು. ಗಂಡಿನಷ್ಟೇ ಮಹಿಳೆಗೂ ಸಾಮಾಜಿಕ ಜೀವನದಲ್ಲಿ ಸಮಾನತೆಯ ಪ್ರತಿಪಾದನೆಯನ್ನು ಯಾವುದೇ ಧರ್ಮಗಳು ಬೆಂಬಲಿಸದೇ ಇರುವುದು ಸ್ತ್ರಿ ವಿರೋಧಿ ಪ್ರವೃತ್ತಿಯಾಗಿ ಬೆಳೆದುಕೊಂಡು ಬಂದಿತು.

ವೈದಿಕ ಧರ್ಮದಲ್ಲಿ ಮಹಿಳೆಯರಿಗೆ ಸಮಾನತೆ, ಸ್ವಾತಂತ್ರ್ಯವಿಲ್ಲದೆ ಅಸಮಾನತೆಯ ಜೀವನದಲ್ಲಿ ಕಾಲ ಕಳೆಯಬೇಕಿತ್ತು. ವೈದಿಕ ಧರ್ಮಕ್ಕೆ ವಿರೋಧವಾಗಿ ಬಂದ ಬೌದ್ಧ ಧರ್ಮ ಸ್ತೀಯರಿಗೆ ಸನ್ಯಾಸ ದೀಕ್ಷೆಯನ್ನು ಸ್ವೀಕರಿಸಲು ಮತ್ತು ಸಂಘ ಜೀವನ ನಡೆಸುವುದರ ಮೂಲಕ ಅವಳಿಗೆ ತನ್ನದೇ ಆದ ಧಾರ್ಮಿಕ ಅಸ್ತಿತ್ವ ಕಂಡುಕೊಳ್ಳಲು ಅವಕಾಶ ಕಲ್ಪಿಸಿತು. ಬೌದ್ಧ ಮತ್ತು ಜೈನ ಧರ್ಮ ಎರಡರಲ್ಲೂ ಸ್ತ್ರಿ-ಪುರುಷ ಕುರಿತಂತೆ ಲಿಂಗ ಸಂಬಂಧ ಅಡಕವಾಗಿದ್ದರೂ ಕುಟುಂಬ, ವಿವಾಹ, ಮಕ್ಕಳು, ಸಾಂಸಾರಿಕ ಜೀವನ ಎಂಬ ಸಾಂಸ್ಥಿಕ ಬಂಧನದಿಂದ ಹೊರಬರಲು ಅವಕಾಶ ಮಾಡಿಕೊಡಲಾಯಿತು.

ಜಗತ್ತಿನ ಯಾವುದೇ ಸಮಾಜದಲ್ಲಿ ಧರ್ಮ ಅಪೇಕ್ಷಿತ ಸಂಘರ್ಷಗಳು ವಿವಿಧ ರೀತಿಯ ಆಚರಣೆಗಳು ವಿಧಿನಿಷೇಧಗಳನ್ನು ಹುಟ್ಟಿ ಹಾಕಿರುತ್ತದೆ. ಈ ಪದ್ದತಿಗಳನ್ನು ಸಮುದಾಯಗಳಲ್ಲಿ ಚಾಚು ತಪ್ಪದೆ ಇಂದಿಗೂ ಪಾಲಿಸಿಕೊಂಡು ಬಂದಿರುವುದನ್ನು ಕಾಣಬಹುದು ಇವುಗಳನ್ನು "ಸಾಂಪ್ರದಾಯಿಕ ಪದ್ದತಿಗಳು ಎಂದು ಕರೆಯುವ ವಿಧಿ ನಿಷೇಧಗಳ ಚೌಕಟ್ಟಿನಲ್ಲಿಯೇ ತಮ್ಮ ಬದುಕು ಇರಬೇಕೆಂಬುದು ತಳ ಸಮುದಾಯಗಳ ಅಪೇಕ್ಷೆಯಾಗಿದೆ"[೭೦] ಸಾಮಾನ್ಯವಾಗಿ ಸಮಾಜದಲ್ಲಿ ಇರುವಂತಹ ಆಚರಣೆ ವಿಧಿ ನಿಷೇಧಗಳು ಸಾಮಾಜಿಕ ಬದ್ಧತೆಗಳು ಧಾರ್ಮಿಕತೆಯ ಸಿದ್ಧ ಮೌಲ್ಯಗಳನ್ನು ಕಾಪಾಡಲು ಸಾಧ್ಯವಾಗದಿದ್ದಾಗ ಸಂಘರ್ಷಗಳು ಏರ್ಪಡುತ್ತದೆ. ಹಳೆ ತಲೆಮಾರು ಹೊಸ ತಲೆಮಾರುಗಳ ಮಧ್ಯೆ ಪರಂಪರೆಯಿಂದ ಬಂದ ನಂಬಿಕೆಗೆ ಘರ್ಷಣೆ ಉಂಟಾದಾಗ ಲಿಂಗಸಂಬಂಧದಲ್ಲಿ ಸಂಘರ್ಷಣೆಗಳು ಉಂಟಾಗುತ್ತವೆ. ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವ ನಿಟ್ಟಿನಲ್ಲಿ ಮನುಷ್ಯನು ಧರ್ಮದ ಅಧೀನಕ್ಕೆ ಒಳಪಟ್ಟು ಆಚರಣೆ ಮತ್ತು ವಿಧಿನಿಷೇಧಗಳ ಹೆಸರಲ್ಲಿ ಅಸಮಾನತೆಯನ್ನು

ಬೇಕು ಬಿಟ್ಟಿದ್ದಾನೆ. ಇದು ವಾಸ್ತವ ಬದುಕಿನಿಂದ ಸಮುದಾಯ ಮತ್ತು ಲಿಂಗಸಂಬಂಧಗಳಿಂದ ಭಿನ್ನ ಸ್ವರೂಪತೆಯನ್ನು ಪಡೆದುಕೊಳ್ಳುತ್ತದೆ.

ಪುರುಷ-ಸ್ತ್ರಿಯರ ನಡುವೆ ಜಾತಿ-ಜಾತಿಗಳ ನಡುವೆ ಸಮುದಾಯಗಳ ಧಾರ್ಮಿಕ ಸಂಘರ್ಷ ಬೇರೆ ಬೇರೆ ತೆರನಾಗಿರುತ್ತದೆ. ಆದರೆ ಇವುಗಳ ನಡುವೆ ಯಾವುದೇ ಸಂಘರ್ಷಗಳು ಸಾರ್ವತ್ರಿಕವಾಗಿ ಬಿಂಬಿತವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಧಾರ್ಮಿಕ ನೆಲೆಗಳು ಏಕಪಕ್ಷೀಯವಾಗಿ ತೀರ್ಮಾನವಾಗಿ ಸೃಷ್ಟಿಯಾಗುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಲಿಂಗ ಸಂಬಂಧಗಳು ಬಹು ಸಂಸ್ಕೃತಿಯ ಆಧಾರದಲ್ಲಿ ನಿಂತಿದ್ದು ಸಮಾಜವನ್ನು ನಿರ್ಭಂಧಿಸುವ ಪ್ರಯತ್ನಗಳು ಈ ನಿಟ್ಟಿನಲ್ಲಿ ನಡೆಯತ್ತಿವೆ. ಸಮಾಜದಲ್ಲಿ ಧಾರ್ಮಿಕ ನಿಷೇಧಗಳ ಹೇರಿಕೆ ಪುರುಷರಿಂದ ಹುಟ್ಟಿದ್ದು. ತನ್ನ ಅಧಿಕಾರ, ಜ್ಞಾನ, ಪ್ರಭುತ್ವಗಳ ಒತ್ತಾಸೆಯಾಗಿ ಮಹಿಳಾ ಸಂಸ್ಕೃತಿಯ ಮೇಲೆ ಅನೇಕ ಭಿನ್ನತೆಗಳನ್ನು ಹೇರಿಕೊಂಡು ಬದಲಾಗುತ್ತಿದೆ. ಲಿಂಗ ಸಂಬಂಧದಲ್ಲಿ ಇರುವ ಅಸಮಾನತೆಯ ಪ್ರಾಬಲ್ಯತೆ ಪ್ರಬಲ ವರ್ಗಗಳು ಅಸಾಯಕ ವ್ಯಕ್ತಿಯಾಗಲಿ, ತಳಸಮುದಾಯಗಳಾಗಲಿ ಇವುಗಳ ದುರ್ಬಲ ವರ್ಗಗಳನ್ನು ತನ್ನ ದೃಷ್ಠಿಯಲ್ಲಿ ಹಿಡಿದಿಡುವ ತಂತ್ರವನ್ನು ಹುಡುತ್ತಿರುತ್ತದೆ. ಪ್ರಬಲ ವರ್ಗಗಳು ತಳ ಸಮುದಾಯಗಳ ಮೇಲೆ ತಮಗೆ ಅನುಕೂಲಕರವಾದ ಸಂಪ್ರದಾಯಗಳನ್ನು ಹೇರಿ ಅವರನ್ನು ತಮ್ಮ ನಿಂತ್ರಣದಲ್ಲಿ ಹಿಡಿದಿಟ್ಟುಕೊಂಡಿರುತ್ತಾರೆ. ಅಲ್ಲದೇ ತಳ ಸಮುದಯಗಳ ಆಲೋಚನೆ, ಬದುಕು, ಸಾಮಾಜಿಕ ಜೀವನವು ಸಹ ಆಳುವ ವರ್ಗದವರ ಕೈಯಲ್ಲಿಯೇ ಇರುತ್ತದೆ.

ಸಮಾಜದ ದೈನಂದಿನ ಬದುಕಿನ ಬಹುಮುಖ್ಯ ಲಕ್ಷಣವೆಂದರೆ ದೈವಭಕ್ತಿ. ಜನರು ದೈವಭಕ್ತಿ ಉಳ್ಳವರಾಗಿದ್ದು ತಮ್ಮ ಬದುಕಿಗೆ ಸಹಾಯವಾಗುವ ಎಲ್ಲ ವಸ್ತುಗಳಲ್ಲಿ ದೈವತ್ವವನ್ನು ಕಾಣುವ ದೃಷ್ಟಿ ಬೆಳೆಸಿಕೊಂಡಿದ್ದಾರೆ, ದೈವದ ಬಗ್ಗೆ ಅಪಾರವಾದ ನಂಬಿಕೆ ಇಟ್ಟುಕೊಂಡಿರುತ್ತಾರೆ, ಅದು ಇಲ್ಲಿಯ ನಾಯಕರ ಪವಾಡಗಳಿಂದ ಮಹಿಮೆಯಿಂದ ದೈವ ಜನರಿಗೆ ಒಡನಾಡಿಯಾಗಿದ್ದು ಕಷ್ಟಗಳ ನಿವಾರಣೆ ಎಂದು ನಂಬುತ್ತಾರೆ ನಮ್ಮ ಧಾರ್ಮಿಕ ಸಂತರು, ಯೋಗಿಗಳು ನಮ್ಮ ಜೀವನದ ಅವಿಭಾಜ್ಯ ಅಂಗವಾಗಿದ್ದು ಅವರು ಮಾಡುವ ಪವಾಡಗಳು ಜನರ ಸಮಸ್ಯೆಗಳಿಗೆ ಪರಿಹಾರವೆಂದು ಭಾವಿಸುತ್ತಾರೆ. "ಧಾರ್ಮಿಕ ಮಹಾಪುರುಷರ ಪವಾಡಗಳು ಸಮಾಜದ ಮೇಲೆ ದೃಷ್ಟಿಪರಿಣಾಮಕ್ಕಿಂತ ಸಾತ್ವಿಕ ಪರಿಣಾಮಗಳನ್ನುಂಟು ಮಾಡಿರುವುದನ್ನು ಮಹಾಕಾವ್ಯಗಳಲ್ಲಿ ಕಾಣಬಹುದು"[೭೧] ಧಾರ್ಮಿಕ ನಾಯಕರ ಕುರಿತಂತೆ ಜನರಿಗೆ ವಿಶೇಷವಾದ ಭಕ್ತಿ, ಭಾಷೆ, ಆಸಕ್ತಿಯಿಂದ ಕೂಡಿರುತ್ತದೆ. ಏಕೆಂದರೆ ಈ ಧಾರ್ಮಿಕ ನಾಯಕರ ಪವಾಡಗಳು ಸಮಾಜದ ಹಿತಕ್ಕೆ ಅನುಗುಣವಾಗಿ ಧರ್ಮವನ್ನು ಉಳಿಸುವ ಸಲುವಾಗಿ ಮಾಡುವ ಕಾರ್ಯಗಳು ಆಯಾ ಸಮುದಾಯದ ದೇವರಿಗೆ ಸಂಬಂಧಿಸಿರುತ್ತವೆ, ಆದ್ದರಿಂದಲೇ ಈ ನಾಯಕರನ್ನು ಆರಾಧಿಸುವ ಸಮುದಾಯ ಅವರನ್ನು ದೈವತ್ವಕ್ಕೇರಿಸುತ್ತಾರೆ. ಆದ್ದರಿಂದಲೇ ಮೌಖಿಕ ಕಾವ್ಯಗಳಲ್ಲಿ ಪವಾಡಗಳನ್ನು ನಡೆಸದೆ ಇರುವ ನಾಯಕರು ಇಲ್ಲಿ ಈ ನಾಯಕರ ಕಾವ್ಯಗಳಿಗೆ ಜೀವಂತಿಕೆ ಆಗಿದ್ದಾರೆ. ಇವರ ಮೂಲಕವೇ ಸಮಾಜದಲ್ಲಿ ಧಾರ್ಮಿಕ ನೆಲೆಯ ವಿವಿಧತೆಯಲ್ಲಿ ರೂಪಗೊಂಡದ್ದನ್ನು ಕಾಣಬಹುದುದಾಗಿದೆ.

## ಹುಟ್ಟು ಮತ್ತು ಬಂಜೆತನಕ್ಕೆ ಸಂಬಂಧಿಸಿದ ಧಾರ್ಮಿಕ ನೆಲೆಗಳು

ಹುಟ್ಟು ಎನ್ನುವಂತದ್ದು ಲೋಕದ ದೃಷ್ಟಿಯಲ್ಲಿ ಮಹತ್ವವನ್ನು ಪಡೆದಿದೆ. ಚೈತನ್ಯದಾಯಕವಾಗಿರುವ ಹುಟ್ಟಿನ ನಿಯಮವು ವಿಸ್ಮಯ ಮತ್ತು ಕುತೂಹಲದಿಂದ ಕೂಡಿದೆ. ಇದು ಪ್ರಕೃತಿಯ ನಿಯಮವೆಂದು ತಿಳಿಯಲಾಗುತ್ತದೆ. ಇದಕ್ಕೆ ಜಗತ್ತಿನ ಜಲ, ಚರ ಮತ್ತು ಅಖಂಡ ಜೀವಜಾಲಗಳು ಒಳಗಾಗಿದ್ದು ಪ್ರತಿಯೊಂದು ವಿಸ್ಮಯವೇ ಆಗಿರುತ್ತದೆ. ಹುಟ್ಟು ಎಂಬ ಪರಿಲ್ಪನೆಗೆ ಬದಲಾವಣೆ ಪರಿವರ್ತನೆ ಎನ್ನುವ ತಾತ್ವಿಕತೆ ಅರ್ಥವಿದೆ, ಇದು ಭೌತಿಕ ಮತ್ತು ಜೈವಿಕ ವಿಸ್ಮಯವಾಗಿದೆ"[೨೨]ಸಾಮಾನ್ಯವಾಗಿ ಸಮುದಾಯಗಳಲ್ಲಿ ಹುಟ್ಟಿನ ನಿಯಮಕ್ಕೆ ಬೇರೆಯದಾದ ಸ್ವರೂಪವಿದೆ. ಹೆಣ್ಣು, ಗಂಡು ಎಂಬ ಜೈವಿಕ ಅಂಶಗಳು ಲಿಂಗ ಸಂಬಂಧದ ಮೂಲಕ ಸಾಮಾಜೀಕರಣಗೊಂಡಿವೆ. ಪುರುಷ ಶ್ರೇಷ್ಠ ಮಹಿಳೆ ಕನಿಷ್ಠ ಎಂಬ ಭಾವನೆ ಅನಾದಿ ಕಾಲದಿಂದಲೂ ಸಮಾಜದಲ್ಲಿ ಬೇರೂರಿದ್ದರಿಂದ ಅವಳ ಹುಟ್ಟನ್ನು ವಿರೋಧಿಸುತ್ತಾ ಹುಟ್ಟಿಗೆ ಸಂಬಂಧಿಸಿದಂತೆ ಹೆಣ್ಣನ್ನು ಧರ್ಮದ ಹೆಸರಿನಲ್ಲಿ ವಿರೋಧಿಸುತ್ತಾ ಬಂದಿದ್ದಾರೆ.

ಪುರುಷಪ್ರಧಾನ ಸಂಸ್ಕೃತಿಯಲ್ಲಿ ಗಂಡು ಮಗುವಿನ ಜನನಕ್ಕೆ ಇರುವಷ್ಟು ಸಡಗರ, ಸಂಭ್ರಮ ಹೆಣ್ಣು ಮಕ್ಕಳ ಜನನಕ್ಕೆ ಇರುವುದಿಲ್ಲ. ಹೆಣ್ಣು ಹುಟ್ಟಿದ ತಕ್ಷಣ ತಾತ್ಸಾರ ಮನೋಭಾವದಿಂದ ಕಾಣುತ್ತಾರೆ. ಕೆಲ ಸಮುದಾಯಗಳು ತಮ್ಮ ಉತ್ತರಾಧಿಕಾರತ್ವಕ್ಕಾಗಿ, ಕೆಲ ವಿಚಾರಗಳ ಮುಂದುವರಿಯವಿಕೆಗೆ ಗಂಡು ಮಗವಿನ ಜನನಕ್ಕೆ ಕೆಲಕಾವ್ಯಗಳು ರೂಪುಗೊಂಡಿವೆ. ಅವುಗಳೆಂದರೆ ಮಲೆಮಾದೇಶ್ವರ, ಜುಂಜಪ್ಪ ಮೈಲಾರಲಿಂಗ, ಮಂಟೇಸ್ವಾಮಿ, ಮಾಳಿಂಗರಾಯ ಕಾವ್ಯಗಳಲ್ಲಿ ಸಾಂಸ್ಕೃತಿಕ ನಾಯಕರ ಹುಟ್ಟು ಅಪೇಕ್ಷಿತವಾಗಿದ್ದು ಎಲ್ಲಾ ಮಕ್ಕಳು ಹುಟ್ಟುವಂತೆ ಹುಟ್ಟದೆ ಬೇರೆಯಾದ ರೀತಿಯಲ್ಲಿ ಜನನ ಪಡೆಯುತ್ತಾರೆ. ಮಲೆಮಾದೇಶ್ವರ ಕಾವ್ಯದಲ್ಲಿ ಮಾದೇಶ್ವರ ಉತ್ರಾಜಮ್ಮನ ಹೊಟ್ಟೆಯಲ್ಲಿ ಹುಟ್ಟದೆ ಗಂಧದ ಕರಡಿಗೆಯಿಂದ ಜನಿಸುತ್ತಾರೆ, ಈ ಸಾಂಸ್ಕೃತಿಕ ನಾಯಕರಿಗೆ ಜನನ ಎನ್ನುವುದು ಮುಟ್ಟು ಮಡಿ, ಮೈಲಿಗೆ, ಆಗದೆ ಹಾಗೂ ದಾಂಪತ್ಯವನ್ನು ಮುಕ್ತಿಗೆ ಇರುವ ದಾರಿ ಎಂದು ಪರಿಗಣಿಸಿ ಹೆಣ್ಣಿನ ಯೋನಿಯಿಂದ ಜನಿಸಿದರೆ ಮೈಲಿಗೆಯಾಗುತ್ತದೆ ಎಂಬ ಅಭಿಪ್ರಾಯ ಇರುವುದರಿಂದ ಅಸಹಜವಾಗಿ ಜನಿಸುತ್ತಾರೆ.

"ತಾಯಿ ನಿದ್ರೆ ಮಾಡ್ತಾ ಮಲಕ್ಕೊಂಡರು
ಬೆಳ್ಳಿ ಮೂಡಿ ಬೆಳಗಾಗುವ ಹೊತ್ತಿಗೆ
ಆ ಗಂಧದ ಕರಡಿಗೆಯಲ್ಲಿದ್ದರ ಪುಟುಲಿಂಗವು
ಉತ್ರಾಜಮ್ಮನ ಮಗ್ಗುಲಲ್ಲಿ
ಸಣ್ಣ ಬಾಲಕನಾಗಿ ಮಲಗವರೇ ಮಾಯ್ಕಾರಾ"[೨೩]

ಯಾವುದೇ ಮಡಿಮೈಲಿಗೆ ಇರಬಾರದೆಂಬ ಕಾರಣಕ್ಕೆ ಅಸಹಜವಾಗಿ ಹುಟ್ಟುವ ಮಾದೇಶ್ವರ ತನ್ನ ಹುಟ್ಟನ್ನು ಧಾರ್ಮಿಕತೆಯ ಬಣ್ಣ ಹಚ್ಚುತ್ತಾರೆ. ಇದೇ ರೀತಿಯಾಗಿ ಜಂಜಪ್ಪನು ಹುಟ್ಟನ್ನು ಮೈಲಿಗೆ ಎಂದು ಭಾವಿಸಿ ತಾಯಿಯ ಹೊಟ್ಟೆಯಿಂದ ಹುಟ್ಟಲು ನಿರಾಕರಿಸುತ್ತಾನೆ.

"ಹೊಟ್ಟೆವೊಳುಗುಟ್ಟಿದೂರೇ
ಸೂತಕು ಬೆರಿಕ್ಯಾಗುತ್ತೈತೆ
ಬಾಯೋಳುಗೋಡುದಾರೆ
ಎಂಜಲು ಬೆರಕ್ಯಗುತ್ತೈದಂದು
ಬಲಗಡೆ ಭುಜದೊಳಗೆ
ಬಂಗಾರದ ಅಲ್ಲಿಯಾಗೊಡದನೊ
ಜುಂಜಪ್ಪಗೌಡ ತಾಯಿ ಸಿನ್ನಮ್ಮನಿಗೆ ಗಳೀಗಾಗೋ
ಒಡುದು ನೆಲದ ಮ್ಯಾಲೆ ಬಿದ್ದು ಮಗುವಾಗಿ
ಕಾರ್ ಕಾರೆಂದತ್ತನು ಶಂಕರನೆ
ಆವಾಗ ಸಿನ್ನಮ್ಮ ಎಡಗಡೆ ಬಲುಗಡೆ
ಎದೆಯನ್ನು ಕುಡಿಸೊಳು ಸಿನ್ನಮ್ಮ
ಒಂದ ತೊಟ್ಟು ಹಾಲು ಕುಡಿದುದಕೆ
ಸಿನ್ನಮ್ಮನಿಗೆ ಮಗನಾದ ಜಂಜಪ್ಪ ಗಳಿಗಾಗೋ"[೭೪]

ಹೆಣ್ಣು ಸಮಾಜದಲ್ಲಿ ಹೆರುವ ಯಂತ್ರವಾಗಿ ಸಂತಾನಕ್ಕೆ ಮಾತ್ರ ಸೀಮಿತ ಎನ್ನುವಂತೆ ಧರ್ಮ ಪ್ರೇರಿತ ನಂಬಿಕೆಯಾಗಿದೆ. ಈ ನಂಬಿಕೆಗೆ ಬಂಜೆತನ ವಿರುದ್ಧವೆನಿಸಿದೆ. ಹುಟ್ಟಿನ ಸಂದರ್ಭದಲ್ಲಿ ಅವಳನ್ನು ಧಾರ್ಮಿಕಾಚರಣೆಗೆ ಒಳಪಡಿಸಿದರೆ ಸಂತಾನಕ್ಕೆ ಸಂಬಂಧಿಸಿದಂತೆ ಮತ್ತೊಂದು ರೀತಿಯ ಮೌಢ್ಯಾಚರಣೆಯನ್ನು ಧಾರ್ಮಿಕತೆಯ ಹೆಸರಿನಲ್ಲಿ ನಡೆಸಿಕೊಂಡು ಬರಲಾಗುತ್ತಿದೆ.

ಮಕ್ಕಳನ್ನು ಹೆರಲಾರದವರನ್ನು ಗೊಡ್ಡು ಎಂದು ಸಂಭೋಧಿಸುವ ವ್ಯವಸ್ಥೆ ಅದನ್ನೆ ಬಂಜೆತನ ಎಂಬ ಧಾರ್ಮಿಕ ಚೌಕಟ್ಟನ್ನು ಹಾಕಿ ಅವಳನ್ನೇ ಪಶುಗಳಿಗಿಂತ ಕೀಳಾಗಿ ನಡೆಸಿಕೊಂಡು ಬರಲಾಗುತ್ತಿದೆ. "ಹೆಣ್ಣಿಗೆ ಪುರುಷರನಿಂದ ಬಂಜೆತನ ಬಂದಿದೆಯೋ ಎನ್ನುವುದನ್ನು ವ್ಯವಸ್ಥೆಯು ಯೋಚಿಸದೆ ಪುರುಷನ ಹರವಾಗಿ ನಿಲ್ಲುವ ಮತ್ತು ಹೆಣ್ಣನ್ನು ಅಪಾದನೆ ಮಾಡಲಾಗುತ್ತದೆ. ಹಾಗಾಗಿ ಹೆಣ್ಣನ್ನು ಬಂಜೆತನ ವಿಷಯದಲ್ಲಿ ಅಪಾದನೆ ಮಾಡಲಾಗುತ್ತದೆ ಮತ್ತು ಈ ಅಪಾದನೆಯ ವಿರುದ್ದ ನಿಂತಿರುವುದನ್ನು ಕಾವ್ಯಗಳಲ್ಲಿ ಕಾಣಬಹುದು"[೭೫]ತಾಯ್ತನ ಎನ್ನುವುದು ವೈಯಕ್ತಿಕ ಬಯಕೆಯಷ್ಟೇ ಅಲ್ಲ ಅದು ಸಾಮಾಜಿಕ ಮೌಲ್ಯವೂ ಆಗಿದೆ, ಈ ಮೌಲ್ಯವನ್ನು ಹೆಣ್ಣಿನ ಮೇಲೆ ಒಂದು ಆರೋಪವಾಗಿ ಹೇರಿಕೆ ಮಾಡಲಾಗಿದೆ. ವಿವಾಹಿತ ಮಹಿಳೆ ತಾಯಿಯಾಗಲೇಬೇಕು ಎನ್ನುವುದರ ಒತ್ತಾಯದ ಹಿಂದೆ ಪುರುಷ, ಕುಟುಂಬ ಮತ್ತು ಸಮಾಜದ ಯಜಮಾನಿಕೆಯ ಹುನ್ನಾರವೂ ಅಡಗಿದೆ. ಹೆಣ್ಣಿಗೆ ತಾಯ್ತನ ಎನ್ನುವುದು ವೈಯಕ್ತಿಕ ಅಭಿಲಾಷೆಗಿಂತ ಕುಟುಂಬದ, ಸಮಾಜದ ಒತ್ತಾಯ ಹೆಚ್ಚು

ಇರುತ್ತದೆ. ಇದಕ್ಕೆ ಕಾರಣ ವಂಶವನ್ನು ಬೆಳೆಸುವ, ಮುಂದುವರೆಸುವ ಸಾಮರ್ಥ್ಯ ಸ್ತ್ರೀಗೆ ಮಾತ್ರ ಸಾಧ್ಯ ಎಂಬ ಅಭಿಪ್ರಾಯ ಸ್ತ್ರೀ ಮೇಲೆ ಒತ್ತಡಗಳು ಹೆಚ್ಚಾಗುತ್ತಿವೆ.

ಮಾದೇಶ್ವರನ ಕಾವ್ಯದಲ್ಲಿ ಸೋಲಿಗ ಸಂಕಮ್ಮನಿಗೆ ಬಂಜೆಯ ಸಂಕಷ್ಟವೂ ಎದುರಾಗುತ್ತದೆ. ಸಂಕಮ್ಮಳನ್ನು ಹುಟ್ಟು ಬಂಜೆಯೆಂದು ಕುಟುಂಬ, ಸಮಾಜವು ಹಲವು ಬಗೆಯಲ್ಲಿ ನಿಂದನೆಗೆ ಒಳಪಡಿಸುತ್ತದೆ.

"ದಟ್ಟಾ ಧರಣಿ ಸಂಕೆಣ್ಣೆ
ಹುಟ್ಟು ಬಂಜೆ ಸಹೆಣ್ಣೆ
ಮಕ್ಕಳ ಫಲವೇ ಮೊದಲಿಲ್ಲ
ಎದ್ದು ಮುಖವ ನೋಡಿದರೆ
ನಾವು ಬಂಜೇರಾಗುವೆವು
ಸಂಗಡ ದನಗಳ ಕಾದಾರ
ದನಗಳು ಬಂಜೇರಾಗುವವು
ಮಾಡಿದ ಅಡಿಗೆ ಉಂಡಾರೆ
ನಾವು ಬಂಜೆರಾಗುವೆವು
ಮೀರ ನೀರ ದಾಟಿದರೆ
ನಾವು ಬಂಜೇರಾಯ್ತಿವೆ
ನಮ್ಮ ಮಕ್ಕಳು ಬಂಜೆರಾಗುವರು"[೭೫]

ಇಲ್ಲಿ ಸಂಕೆಣ್ಣೆಗೆ ತಾಯ್ತನದ ಭಾಗ್ಯವಿಲ್ಲದಾಗ ಕೌಟುಂಬಿಕವಾಗಿ ಎಲ್ಲರಿಂದಲೂ ನಿಂದನೆಗೊಳಗಾಗುತ್ತಾಳೆ, ಮಕ್ಕಳು ಪಡೆಯುವುದು ಕೇವಲ ಹೆಣ್ಣಿನ ವೈಯಕ್ತಿಕ ಅಭಿಪ್ರಾಯವಷ್ಟೆ ಅಲ್ಲ. ನಮ್ಮ ಧಾರ್ಮಿಕ ಸಾಮಾಜಿಕ ನಂಬಿಕೆಯೂ ಆಗಿದೆ. ಹಿಂದೂ ಧರ್ಮದಲ್ಲಿ ಮಕ್ಕಳ ಫಲ ಎಂಬುದು ಸ್ವರ್ಗ ಶುಭಕಾರ್ಯ ಎಂಬುದಕ್ಕೆ ದಾರಿಮಾಡಿಕೊಡುತ್ತದೆ.

ಪುರುಷ ಸಮಾಜದ ಒತ್ತಾಯದಿಂದ ಸಂಕಮ್ಮನಾದ ಹೆಣ್ಣು ಮಕ್ಕಳು ಧಾರ್ಮಿಕ ಅಸಮಾನತೆಯ ಸಂಘರ್ಷಕ್ಕೆ ಒಳಗಾಗುವುದಲ್ಲದೆ ಅವಳ ಅಸ್ತಿತ್ವವು ವಿನಾಶ ಹೊಂದುತ್ತದೆ.

ಜುಂಜಪ್ಪನ ಕಾವ್ಯದಲ್ಲಿಯು ಸಿನ್ನಮ್ಮನ ಬಂಜೆತನದ ನೋವನ್ನೇ ಅನುಭವಿಸಿದವಳು. ಇಂತಹ ಸಂದರ್ಭದಲ್ಲಿ ಜೋಗಪ್ಪ ಸಿನ್ನಮ್ಮನಲ್ಲಿಗೆ ಬಂದು ಭಿಕ್ಷೆಯನ್ನು ಬೇಡುತ್ತಾನೆ.

"ಸಿನ್ನಮ್ಮ ಅಕ್ಕಿ ಬೇಳೆ ತಗಂಡು ಬಂದು
ಏನಮ್ಮ

ಹೆಣ್ಣು ಮಕ್ಕಳೆಷ್ಟು ಗಂಡು ಮಕ್ಕಳೆಷ್ಟು
ಅಂತ ಕೇಳ್ದ ಜೋಗಪ್ಪಾ
ಹೆಣ್ಣು ಗಂಡು ಕೂಡ ಇಲ್ಲಪ್ಪಾ ಅಂದ್ಲು
ಬಂಜೆ ಕೈಯಾಗಲ ಭಿಕ್ಷೆ ನಾನು ನೀಡಿಸಗಮದಿಲ್ಲ
ಅಂತ ಹೊರ ಹೋಗಿಬಿಟ್ಟ ಜಂಗಮ್ಮಯ್ಯ"[೭೬]

ಎಂದು ಜೋಗಪ್ಪಾ ಹೇಳಿ ಹೋಗುವುದರ ಹಿಂದೆ ಹೆಣ್ಣು ಮಕ್ಕಳನ್ನು ಹೆರದಿದ್ದ ಪಕ್ಷದಲ್ಲಿ ಅವಳಿಗೆ ಲೋಕದ ನಿಂದನೆ ಅವಮಾನಗಳು ತಪ್ಪಿದ್ದಲ್ಲ. ಬಂಜೆಯಾದರೆ ಯಾವುದೇ ಶುಭ ಸಮಾರಂಭಗಳಿಗೆ ಕರೆಯುವುದಿಲ್ಲ, ಸಾಮಾಜಿಕ, ಕೌಟುಂಬಿಕ, ಧಾರ್ಮಿಕ ಆಚರಣೆಗಳಿಂದ ಬಹಿಷ್ಕರಿಸಲ್ಪಟ್ಟಿರುತ್ತಾಳೆ

**ಮುಟ್ಟು ಮಡಿ ಮೈಲಿಗೆ ಸಂಬಂಧಿಸಿದ ಧಾರ್ಮಿಕ ಸಂಬಂಧಗಳು**

ನಮ್ಮ ಹಿಂದೂ ಧರ್ಮದಲ್ಲಿ ಮುಟ್ಟು, ಮಡಿ, ಮೈಲಿಗೆ ಎಂಬ ಸಂಪ್ರಾದಾಯಗಳನ್ನು ಹಿಂದಿನಿಂದಲೂ ಆಚರಿಸಿಕೊಂಡು ಬಂದಿದೆ. ಪುರೋಹಿತಶಾಹಿ ವರ್ಗ, ಕೆಳವರ್ಗದವರನ್ನು ಈ ನೆಲೆಯಲ್ಲಿಯೂ ಶೋಷಣೆಗೆ  ಒಳಪಡಿಸಿದ್ದರು. ಮಡಿ ಮೈಲಿಗೆ ಎಂಬುದು ಮೇಲು, ಕೀಳು, ಬಡವ, ಬಲ್ಲಿದ ಎಂಬ ಭಾವನೆಗಳನ್ನು ಜನರಲ್ಲಿ ತುಂಬ ದೌರ್ಜನ್ಯಗಳನ್ನು ನಡೆಸಲಾಗುತ್ತಿತ್ತು. ಕೆಲ ಸಮುದಾಯಗಳ ಮುಟ್ಟು ಮಡಿ ಮೈಲಿಗೆಗೆ ಧಾರ್ಮಿಕ ಚೌಕಟ್ಟನ್ನೇ ಹಾಕುವುದರ -ಮೂಲಕ ಸಮಾಜದಲ್ಲಿ ಒಂದು ಸಂಪ್ರದಾಯವಾಗಿಯೇ ಆಚರಣೆಗೆ ಬಂದಿತ್ತು.

ಮುಟ್ಟು ಎನ್ನುವ ಪದವು ಸಮಾದಲ್ಲಿ ಹೆಣ್ಣನ್ನು ತೀರ ತಾತ್ಸರ ಭಾವನೆಗೆ ಈಡು ಮಾಡಿತು. ಏಕೆಂದರೆ ಋತುಮತಿಯಾದ ಸುಂದರ್ಭವನ್ನು ಹಿಂದೂ ಧರ್ಮದಲ್ಲಿ ಮಡಿ ಮೈಲಿಗೆ ಎಂದೆ ಭಾವಿಸಲಾಗುತ್ತದೆ. ಹೆಣ್ಣಿಗೆ ಮುಟ್ಟು ಪ್ರಕೃತಿಯ ನಿಯಮ ಚಕ್ರವಾಗಿದ್ದರೂ ಪುರುಷ ಸಮಾಜ ಅವಳನ್ನು ಅಸ್ಪೃಶ್ಯಳಂತೆ ಕಾಣುತ್ತದೆ. "ಹೆಣ್ಣಿನಿಂದಲೇ ಈ ಜೈವಿಕ ಜಗತ್ತು ಸೃಷ್ಟಿಯಾಗಿರುವಾಗ ಹೆಣ್ಣನ್ನು ಮುಟ್ಟವುದು ತಪ್ಪು ಎನ್ನುವ ಮನುಷ್ಯನ ಮನೋಭಾವವು ಅವೈಚಾರಿಕತೆಯಿಂದ ಕೂಡಿದೆ. ಅವಳನ್ನು ಒಂದು ಆಚರಣೆಯಿಂದ, ಮುಟ್ಟಾಲಾಗದ ರೀತಿಯಲ್ಲಿ ಕಾಣುವುದರಿಂದ ಸಾಮಾಜಿಕ ಶೋಷಣೆಗೆ ಗುರಿ ಮಾಡಲಾಗಿದೆ, ಜೊತೆಗೆ ಇದರಿಂದ ಪುರುಷನ ನಿಯಂತ್ರಣಕ್ಕೆ ಒಳಪಡಿಸುವ ತಂತ್ರವೂ ಆಗಿದೆ."[೭೭]

ಜಂಜಪ್ಪನ ಕಾವ್ಯದಲ್ಲಿ ಮಹಿಳೆಗೆ ಸಂಬಂಧಿಸಿದ ಮುಟ್ಟು ಮಡಿ, ಮೈಲಿಗೆಯ ಆಚರಣೆಗಳು ಮೌಢ್ಯರೂಪ ತಾಳುವುದನ್ನು ಕಾಣಬಹುದು ಮೌಢ್ಯತೆ ಅತಿಯಾಗಿ ಅದಕ್ಕೆ ಧಾರ್ಮಿಕ ರೂಪವನ್ನು ಕೊಟ್ಟಿಂತಿದೆ ಈ ಕಾವ್ಯದಲ್ಲಿ ಮಾರಕ್ಕೆ ಋತುಮತಿ ಮತ್ತು ಮುಟ್ಟಾದ ಸಂದರ್ಭದಲ್ಲಿ ಅವಳನ್ನು ಹಟ್ಟಿಯಿಂದ ಹೊರಗಿಡಲಾಗುತ್ತಿತ್ತು.

"ಇಡೀ ನಮ್ ತಂಗಿ ಮಾರಕ್ಕನಿಗೆ ಗುಡ್ಲಾಕಿದುರೆ
ಹದಿನಾರು ದಿನ ಊರು ಬಿಟ್ಟು ಆಕಡೆ ಹಾಕಸ್ತಿನಿ
ಹದಿನಾರು ದಿನದವರೆಗೂ ಋತುವಾದ ಮಕ್ಕಳಿಗೆ
ಆ ಕಡೆ ಗುಡ್ಲು ಸುಟ್ಟು
ಸೂತ್ನ ಕಳ್‌ಕೊಂಡು ಒಳಿಕರ್‍ನಂಬ್ಲಿ
ಈಚೆಯಾದ ಹೆಂಗಸ್ನು
ಐದು ದಿನ ಪಂಚಮಿ ಕಳದ್ ಮೇಲೆ
ಊರೋಳೀಗೆ ಬರಲಿ ಅಂತ
ಆಶೀರ್ವಾದ ಮಾಡುಬಿಟ್ಟ ಜುಂಜಪ್ಪ"[೭೮]

ಮುಟ್ಟು ಮಡಿ, ಮೈಲಿಗೆ ಕಲ್ಪನೆಗಳು ಕೆಲ ಸಮುದಾಯಗಳಲ್ಲಿ ಸೂತಕದ ಆಚರಣೆಗಳಾಗಿವೆ, ಅಲ್ಲದೆ ಜುಂಜಪ್ಪನ ಕಾವ್ಯದಲ್ಲಿ ಹೆರಿಗೆ ಆದ ಹೆಂಗಸರನ್ನು ಹಟ್ಟಿಯಿಂದ ದೂರ ಇಟ್ಟಿರುವ ಪ್ರಸಂಗಳೂ ಆಚರಣೆಯಾಗಿ ಕಂಡುಬರುತ್ತವೆ.

"ನೀವು ಊರು ಜನ
ಈಚೆ ಆದ್ರೆ ಒಳಗಡೆ ಇರ್ತರೆ
ನಿಮ್ಮ ಮನೆಯೊಳಗೆ ಹೆಂಗ್ಸುರು ಹೆರಿಗೆ ಆದ್ರೆ
ಒಳಗೆ ಇರ್ತರಯ್ಯ
ನಮಗೆ ಸೂಕತ ಆಗಿಕಿಲ್ಲ"[೭೯]

ಈ ಎಲ್ಲಾ ಸಂದರ್ಭಗಳಲ್ಲಿ ಮಹಿಳೆಯನ್ನು ಮುಟ್ಟಾದಾಗ, ಹೆರಿಗೆಯಾದಾಗ ಬೇರೆ ಜಾತಿಯವರನ್ನು ಮುಟ್ಟಿಸಿಕೊಳ್ಳದೇ ಹಟ್ಟಿಯಿಂದ ಅಥವಾ ೨೨ ದಿನಗಳವರೆಗೆ ಹೊರಗಿಟ್ಟಿರುತ್ತಾರೆ. ಹಾಗೆ ಮಡಿ–ಮೈಲಿಗೆಯ ಹೆಸರಲ್ಲಿ ಹೊರಗಿಟ್ಟ ಮಹಿಳೆಯೇ ತನ್ನ ಆಹಾರ, ನೀರನ್ನು ತಯಾರಿಸಿಕೊಳ್ಳಬೇಕು, ಕುಟುಂಬದ ಯಾವುದೇ ಸದಸ್ಯರು ಸಹಾಯ ಮಾಡುವುದಿಲ್ಲ. ಸೂತಕ ಕಳೆದ ನಂತರ ಮನೆ ಒಳಗೆ ಕರೆದುಕೊಳ್ಳುತ್ತಾರೆ.

ಮಂಟೇಸ್ವಾಮಿ ಕಾವ್ಯದಲ್ಲಿಯೂ ಸಹ ಮುಟ್ಟು ಎರಡು ರೀತಿಯಲ್ಲಿ ಕಂಡು ಬರುತ್ತದೆ. ಒಂದು ಮಹಿಳೆಗೆ ಸಂಬಂಧಿಸಿದ ಪ್ರಕೃತಿ ಸಹಜವಾದ ಕ್ರಿಯೆಯಾದರೆ ಮತ್ತೊಂದು ಜಾತಿಯ ಹಿನ್ನೆಲೆಯಲ್ಲಿ ಮುಟ್ಟು ಮೈಲಿಗೆಯೆನ್ನು ಪರಿಗಣಿಸಲಾಗುತ್ತದೆ.

ಈ ಕಾವ್ಯದಲಿ ರಾಚಪ್ಪಾಜಿ ಹಾಗೂ ಆತನ ಮಡದಿ ದೊಡ್ಡಮ ತಾಯಿ ಸಂಚರಿಸುವಾಗ ದೊಡ್ಡಮ್ಮ ತಾಯಿ ಮುಟ್ಟಾಗುತ್ತಾಳೆ

"ದುಡವುಳ್ಳ ದೊಡ್ಡಮ್ಮ

ಮುಟ್ಟು ತಟ್ಟಿಗೊಳಗಾಗಿಬಿಟ್ಟಿ ಸ್ವಾಮಿ ಎಂದುರು

ಹಾಗೆ ಆದ ಮೇಲೆ

ನೀನು ಇಲ್ಲೇ ಮುತ್ತಿನಳ್ಳಿ ತೋಪಿನಲ್ಲಿ ವಾಸಮಾಡು ಅಂತೇಳಿ

ಕೈ ಹಿಡಿದ ಮಡದಿಯ

ಮುತ್ತಿನಳ್ಳಿ ತೋಪಿನಲಿ ಬುಟ್ಟು

ಕಿಡಗಣ್ಣು ರಾಚಪ್ಪಾಜಿಯವರು"[೮೦]

ರಾಚಪ್ಪಜಿಯು ಕಪ್ಪಡಿಯಲ್ಲಿ ಪೂಜೆಗೊಳ್ಳುವ ಸಾಂಸ್ಕೃತಿಕ ವ್ಯಕ್ತಿಯಾದರೂ ಸಹ ಮುಟ್ಟು, ಮಡಿ, ಮೈಲಿಗೆ ಎಂದಾಗ ಕೈಹಿಡಿದ ಧರ್ಮಪತ್ನಿಯನ್ನು ಬಿಟ್ಟು ಹೋಗುವ ಸಂದರ್ಭವು ಹೆಣ್ಣಿನ ಮೇಲೆ ಕೌಟುಂಬಿಕವಾಗಿ ಎಸಗುವ ಶೋಷಣೆಯನ್ನು ಕಾಣಬಹುದು. ದೊಡ್ಡಮ್ಮ ತಾಯಿ ಮುತ್ತಾನಳ್ಳಿಯಲ್ಲಿ ನೆಲೆಸಿ ತನ್ನ ಗದ್ದುಗೆ ಅಲ್ಲಿಯೇ ಸ್ಥಾಪಿಸಿಕೊಳ್ಳುತ್ತಾಳೆ. ಅಂದಿನಿಂದ ನೀಲಗಾರರು ದೊಡ್ಡಮ್ಮ ತಾಯಿಯನ್ನು ವಿಶೇಷ ಪೂಜೆ ಪುನಸ್ಕಾರಗಳಿಂದ ಆಚರಣೆ ಮಾಡುತ್ತಾರೆ.

ಮುಟ್ಟು ಎಂಬ ಪರಿಭಾವನೆಯನ್ನು ಮಂಟೇಸ್ವಾಮಿ ಕಾವ್ಯದಲ್ಲಿ ಮೈಲಿಗೆಯಾಗಿ ಪರಿಗಣಿಸಿದ್ದಾರೆ. ಆದರೆ ಮಂಟೇಸ್ವಮಿ ಮುಟ್ಟು ಎಂಬುದಕ್ಕೆ ಈ ಕಾವ್ಯದಲ್ಲಿ ಬೇರೆಯದೇ ಅರ್ಥ ನೀಡುತ್ತಾರೆ. ಮಂಟೇಸ್ವಾಮಿ ಮಡಿವಾಳ ಮಾಚಯ್ಯನ ಮನೆಗೆ ಭಿಕ್ಷೆಗೆ ಹೋಗುತ್ತಾರೆ ಅಲ್ಲಿ ಇವರಿಬ್ಬರ ನಡುವೆ ನಡೆಯುವ ಸಂಭಾಷಣೆ ಮೇಲ್ಜಾತಿ ಕೆಳಜಾತಿಗಳ ಬಗ್ಗೆ ಇರುವ ಅಸಡ್ಡೆ ಕೆಳಜಾತಿಯನ್ನೆ ಮುಟ್ಟು ಮೈಲಿಗೆ ಎಂದು ಅವರನ್ನು ಯಾವುದೇ ಧಾರ್ಮಿಕ ಆಚರಣೆಗೆ ಯೊಗ್ಯರಲ್ಲ ಎಂಬ ಭಾವನೆ ತೊಡೆದು ಹಾಕುವುದನ್ನು ಕಾಣಬಹುದು

"ಈ ಮುಟ್ಟು ತಟ್ಟಿನ ಮನೆಗೆ ಬಂದು ಬುಟ್ಟಿಯಲ್ಲಾ ಗುರುವೆ

ನಮ್ಮ ಹೀನಾ ಜಾತಿಯವನ ಮನೆಗೆ ಬಂದ್ರಿಯಲ್ಲಪಾ

ನನ್ನ ಹೀನ ಜಾತಿಯವನ ಮನೆಗೆ ಯಾತಕೆ ಬರಕೋದ್ರಿ

ನನ್ನಟ್ಟಿ ಅರಮನೆಗೆ ನೀವೆ ಬಂದ್ರಿಯಾ

ಯಾರ‍್ಯಾರು ದಾರಿ ತೋರಿಕೊಟ್ಟುಬಂಟ್ರೋ ಗುರುವು ಎಂದರು" ಮತ್ತೆ ಮುಂದುವರೆದು

"ನಾನು ಮುಟ್ಟುನಾ ಬಟ್ಟೆ ಒಗಿವಂತಾ

ಗುರುವೆ ಮಡಿವಾಳು ಸಟ್ಟಿ ಗುರುವು

ಅಪ್ಪಾ ಮುಟ್ಟಿನ ಬಟ್ಟೆಗಳೆಲ್ಲ

ಮೂಲೇಲಿ ಇಟ್ವಾಡುತಾವೆ"

"ಈಗಲೀಗ ನನ್ನ ಮನೆಯಿಂದ

ಬಲಗಡೆ ಇರುವುದು ಶಿವಚಾರದೋರು ಮನೆ

ಎಡಗಡೆ ಇರುವಾದು

ಬ್ರಾಮುಂಡ್ರ ಕುಲಭಕುತರ ಮನೆ

ನನ್ನ ಮನೆ ಮುಂಬಾಗದಲಿರುವುದು

ಅರಸು ದೊರೆಗಳ ಮನೆಯಲ್ಲಪ್ಪಾ

ಅರಸು ದೊರೆಗಳ ಮನೆಗೊಂಟೋಗಿ

ನಿಮಗೆ ಶಿವಪೂಜೆ ಮಾಡಿ

ಪಾದಕೆ ಶರಣು ಮಾಡಿ

ಊಟ ಭೋಜನ ಕೂಡ ಪಡುಸ್ತಾರೆ

ಶಿವಾಚಾರ್ಯದೋರಾ ಮನಿಗಾದ್ರು ಹೊರಟೋಗಿ

ನನ್ನ ಹೀನ ಜಾತಿಯವನ ಮನಿಗೆ ಯಾಕೆ ಬಂದು ಬಿಟ್ರಿಯಪ್ಪ"[೮೧]

ಹೀಗೆ ಮಡಿವಾಳಮಾಚಯ್ಯ ತನ್ನ ಕುಲ ತನ್ನ ಹುಟ್ಟು ಕೀಳು, ಮಂಟೇಸ್ವಾಮಿಯಂಥ ಮಹಾಶರಣ ತನ್ನ ಮನಗೆ ಬರವುದು ಮುಟ್ಟು ಅವರಿಗೆ ಮೈಲಿಗೆಯಾಗುತ್ತದೆ ಎಂದು ಮನೆಗೆ ಬಂದ ದೈವವನ್ನೇ ನಿರಾಕರಿಸುತ್ತಾನೆ, ಮೇಲ್ಜಾತಿ ಹಾಗೂ ಪೌರೋಹಿತ ವರ್ಗ ಈ ಮೊದಲೆ ಕೆಳಜಾತಿಯರಿಗೆ ಒಂದು ರೀತಿಯ ಭಾವನಾತ್ಮಕ ಭಯವನ್ನು ಮಾನಸಿಕವಾಗಿ ಅವರ ಮನಸ್ಸಿಲ್ಲಿ ತುಂಬಿಸಿತ್ತು ಕೆಳಜಾತಿಯವರ ಮನೆಗೆ ಮೇಲ್ಜಾತಿಯವರು ಬರಬಾರದು ಬಂದರೆ ಅದು ಅವರಿಗೆ ಕೆಡುಕಾಗುತ್ತದೆ ಎಂಬ ಮೌಢ್ಯವನ್ನು ಬೆಳೆಸಿರುತ್ತಾರೆ. ಮಾಚಯ್ಯನ ಈ ಮಾತು ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಇಂದಿನವರೆಗೇ ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದು. ಮೇಲ್ಜಾತಿ ಕೆಳಜಾತಿಗೆ ಧಾರ್ಮಿಕ ಸ್ವರೂಪವನ್ನು ನೀಡಿ ಧರ್ಮದ ಹೆಸರಲ್ಲಿ ಪೌರೋಹಿತಶಾಹಿ ಮಾತ್ರ ಪೂಜಾರ್ಹತೆ ಪಡೆದಿರುವರು ಕೆಳಜಾತಿ ಎಲ್ಲರಿಂದ ಹೊರತಾಗಿರುವರು ಅಗಿದ್ದಾರೆ.

ಮಾಚಯ್ಯನ ಈ ಮಾತಿಗೆ ಮಂಟೇಸ್ವಾಮಿಯು ಹೇಳುವ ಮಾತು ರೋಚಕವಾಗಿವೆ.

"ಮುಟ್ಟು ತಟ್ಟಿನ ವಿಚಾರ ನಿನಗೇನು ಗೊತ್ತು ಮಾಚಯ್ಯ

ಮುಟ್ಟಿನ ವಿಚಾರ ನಿನಗಿನ್ನೂ ತಿಳಿದಿಲ್ಲ ಮಗನೆ

ಮುಟ್ಟಿನ ವಿಚಾರ ಗುಟ್ಟಿನಲ್ಲಿ ಹೇಳ್ತಿನಿ ಕೇಳು ಮಾಚಪ್ಪಾ

ಲೋ ಮುಟ್ಟಿನಿಂದಲೇ ಮಗನೆ

ಈ ಭೂಮಿಯೆ ಉಟ್ಟು ತಲ್ಲ

ಲೋ ಮುಟ್ಟಿನಿಂದಲೇ ಕಂದಾ

ಈ ಲೋಕವೇ ಬೆಳೀತಲ್ಲಾ

ಮಗನೇ ಮುಟ್ಟಿನಿಂದಲೇ ಕಂದಾ

ಹಗಲು ಆಯ್ತಲ್ಲ

'ಮುಟ್ಟಿನಿಂದಲೇ ಮಗನೇ

ಇರಳು ಆಯ್ತಲ್ಲಾ ಎಂದು ಮಂಟೇಸ್ವಾಮಿ ಮೇಲು ಕೀಳು ಎಂಬುದೆಲ್ಲಾ ಮಾನವ ರೂಪಿಸಿಕೊಂಡ ಪದ್ಧತಿಗಳು. ಮನುಷ್ಯ– ಮನುಷ್ಯರ ನಡುವೆ ದೊಡ್ಡ ಪರದೆಯನ್ನೆ ನಿರ್ಮಿಸಿದೆ. ಮುಟ್ಟು ಎನ್ನುವ ಮಾತು ಸ್ತ್ರೀಗೆ ಪ್ರಕೃತಿ ಸಹಜವಾದದ್ದು. ಅದು ತನ್ನ ಕುಟುಂಬದ ಮುಂದಿನ ಪರಂಪರೆಗೆ ದೈವದ ವರದಾನವಾಗಿದೆ. ಆದರೆ ಸಮಾಜದಲ್ಲಿ ಮೇಲ್ವರ್ಗದವರು ಮುಟ್ಟು ಎಂಬ ರೂಢಿಯನ್ನು ತಳ ಸಮುದಾಯದವರ ಮೇಲೆ ಮೇಲು ಜಾತಿ, ಕೀಳು ಜಾತಿಗಳ ಪರಿಕಲ್ಪನೆಯನ್ನು ಹುಟ್ಟುಹಾಕಿದ್ದಾರೆ. ಎಂದು ಮಂಟೇಸ್ವಾಮಿ ಮಾಚಯ್ಯನಿಗೆ ಜಾತಿಯ ಕುರಿತು ಅರ್ಥೈಸುತ್ತಾನೆ.

### ಧರ್ಮ ಮತ್ತು ಸತ್ವಪರೀಕ್ಷೆ

ಸತ್ವ ಪರೀಕ್ಷೆ ಎನ್ನುವುದು ಮಹಿಳೆಯ ಪರಿಪೂರ್ಣತೆಯನ್ನು ಹೇಳುತ್ತವೆ. ಹೆಣ್ಣು ಪವಿತ್ರವಾಗಿದ್ದಾಳೆ ಎನ್ನುವುದನ್ನು ಸಮಾಜಕ್ಕೆ ತಿಳಿಸಲು ಪುರುಷ ಸಮಾಜ ಅವಳನ್ನು ಅನೇಕ ಸತ್ವ ಪರೀಕ್ಷೆಗೆ ಒಳಪಡಿಸುವುದನ್ನು ಕಾಣಬಹುದು. ಪುರುಷ ಸಮಾಜ ನಿರ್ಮಿಸಿದ ಕಟ್ಟಳೆಗಳನ್ನು ಮಹಿಳೆಯು ಮೀರದೆ ಗಂಡನೆ ಸರ್ವಸ್ವವೆಂದು ಅರಿತು ಬಾಳಬೇಕು. ಈ ಹಿನ್ನೆಲೆಯಲ್ಲಿ ಅವಳಿಗೆ ಪಾತಿವ್ರತ್ಯೆ ಎಂಬ ಭಾವನೆ ತುಂಬಾ ಪವಿತ್ರವಾಗಿ ಕಾಣುವಂತೆ ಮಾಡಲಾಗಿದೆ. ಇದು ಪುರುಷ ಸಮಾಜವು ಸ್ತ್ರೀಯಿಂದ ಬಯಸುವ ಪತಿನಿಷ್ಟೆ ಮತ್ತು ಪ್ರತಿಷ್ಠೆಯ ಸಂಕೇತವಾಗಿ ಭಾವಿಸಲಾಗಿದೆ.

ಜನಪದ ಕಾವ್ಯಗಳಲ್ಲಿ ಬರುವ ನಾಯಕಿಯರು ಆದರ್ಶಗುಣವಾಗಿ ಪಾತಿವ್ರತ್ಯವನ್ನು ಅಳವಡಿಸಿಕೊಂಡಿರಬೇಕು. ಸಂಕಮ್ಮ, ಸಿನ್ನಮ್ಮ, ಬೇವಿನಕಟ್ಟಿಕಾಳಮ್ಮ, ಮುದ್ದಮ್ಮ, ಗಂಗಿಮಾಳಮ್ಮ ಮೊದಲಾದವರು ಪಾತಿವ್ರತ್ಯೆಯನ್ನೆ ಉಳಿಸಿಕೊಂಡ ಮಹಿಳೆಯರು, ಸಂಕಮ್ಮ ಮತ್ತು ಚಿನ್ನಮ್ಮ ತಮ್ಮ ಪಾತಿವ್ರತ್ಯೆ ನಿರೂಪಿಸಲು ಅನೇಕ ಸಂಕಷ್ಟಗಳಿಗೆ, ಸತ್ವ ಪರೀಕ್ಷೆಗಳಿಗೆ ಒಳಗಾಗುತ್ತಾರೆ. ಅದಕ್ಕಾಗಿ ಇವರು ಪಟ್ಟಪಾಡು ಅಷ್ಟಿಷ್ಟಲ್ಲ. ಎಲ್ಲ ಸತ್ವಪರೀಕ್ಷೆಗಳನ್ನು ಮುಗಿಸಿ ತಮ್ಮ ತನವನ್ನು ಉಳಿಸಿಕೊಂಡು ಬಂದ ಸ್ತ್ರೀಯರನ್ನು ಸಮಾಜದಲ್ಲಿ ಸಾಂಸ್ಕೃತಿಕ ನಾಯಕಿಯರನ್ನಾಗಿಸಲು ಮಹಾಕಾವ್ಯದಲ್ಲಿ ಬರುವ ನಾಯಕರು ಅವರನ್ನು ಶೋಷಣೆಯಿಂದ ಬಿಡುಗಡೆಗೊಳಿಸುತ್ತಾರೆ.

ಪಾತಿವ್ರತ್ಯದ ಮೂಲಕ ಹೆಣ್ಣನ್ನು ಧಾರ್ಮಿಕ ವ್ಯವಸ್ಥೆಯಲ್ಲಿ ಅವಳನ್ನು ಬಂಧಿಸಲಾಗುತ್ತಿದೆ. ಪುರುಷ ಸಂಸ್ಕೃತಿ ನಿರ್ಮಿಸಿರುವ ಸತ್ವ ಪರೀಕ್ಷೆಗಳು ಒಂದು ಆಚರಣೆಯಾಗಿಯೇ ತೊಡಗುವಂತೆ ಮಾಡಿದೆ. ಇದೊಂದು ಧಾರ್ಮಿಕ ಮೌಲ್ಯವಾಗಿ ಶೀಲ, ಪಾತಿವ್ರತ್ಯ, ಸತಿಪತಿ ಧರ್ಮ ಎಂಬುದಾಗಿ ಕಟ್ಟಿಹಾಕುವ

ಪ್ರಕ್ರಿಯೆಗಳು ನಡೆಯುತ್ತಿವೆ. ಇದಕ್ಕೆ ತದ್ವಿರುದ್ಧವಾಗಿ ಮಹಿಳೆ ನಡೆದು ಕೊಂಡು ಶೀಲವನ್ನು ಕೆಡಿಸಿಕೊಂಡರೆ ಸಮಾಜದಲ್ಲಿ ಅವಳಿಗೆ ಬದುಕುವ ಸ್ಥಾನಮಾನಗಳನ್ನು ಪುರುಷ ಸಮಾಜವು ಕಸಿದುಕೊಂಡಿದೆ.

ಮಲೆಮಾದೇಶ್ವರ ಕಾವ್ಯದಲ್ಲಿ ನೀಲಯ್ಯ ಹೆಜ್ಜೇನು ಬೇಟೆಗೆ ಹೋದ ಸಂದರ್ಭದಲ್ಲಿ ಸಂಕಮ್ಮ ಮಲೆ ಮಾದೇಶ್ವರನ ದಯೆಯಿಂದ ಮಕ್ಕಳನ್ನು ಪಡೆದಳು ಎಂದು ನಂಬಿಸಿಕೊಂಡು ಬರಲಾಗಿದೆ. ಆದರೆ ಅದರ ಹಿಂದಿನ ಸತ್ಯಗಳ ಮೇಲೆ ಧರ್ಮವನ್ನು ಪ್ರತಿಷ್ಠಾಪಿಸಿ ಯಾರೂ ಕೂಡ ಪ್ರಶ್ನಿಸದಂತೆ ಮಾಡಲಾಗಿದೆ.

ಈ ಹಿನ್ನೆಲೆಯಲ್ಲಿ ಪಾತಿವ್ರತ್ಯದ ಸತ್ವಪರೀಕ್ಷೆಗೆ ವಿಶಿಷ್ಟ ರೀತಿಯಲ್ಲಿ ತನ್ನ ನಿಲುವನ್ನು ನಿರೂಪಿಸಿದವಳು. ಮಲೆಮಾದೇಶ್ವರ ಕಾವ್ಯದ ಸಂಕಮ್ಮ ಸೋಲಿಗರ ನೀಲಯ್ಯನ ಹೆಂಡತಿ ಈಕೆ ಅವಳನ್ನು ಪ್ರೀತಿಯಿಂದ ವಿವಾಹವಾಗಿದ್ದು, ಅವಳನ್ನು ಜಾಗರೂಕತೆಯಿಂದ ಕಾಪಾಡಿಕೊಳ್ಳುತ್ತಿರುತ್ತಾನೆ. ಸಂಕಮ್ಮ ತನ್ನ ಓರಗತ್ತಿಯರಿಂದ ಬಂಜೆ ಎನಿಸಿಕೊಂಡು ನೋವನ್ನು ಸಹಿಸದೆ ಗಂಡನ ಜೊತೆ ಕಾಡಿನಲ್ಲಿ ಬೇರೆ ಮನೆಮಾಡುತ್ತಾರೆ. ಒಮ್ಮೆ ನೀಲಯ್ಯ ಹೆಜ್ಜೇನು ಮಲೆಗೆ ಬೇಟೆಗೆ ಹೋಗುವ ಸಂದರ್ಭ ಬಂದಾಗ ತನ್ನ ಹೆಂಡತಿ ಸಂಕಮ್ಮಳನ್ನು ಒಬ್ಬಂಟಿಯಾಗಿ ಬಿಟ್ಟು ಹೋಗಲು ಇಚ್ಚಿಸದೆ ಅವಳಿಂದ ಬಲಗೈ ಭಾಷೆ ನೀಡಬೇಕೆಂದು ಕೇಳುತ್ತಾನೆ. ಇಲ್ಲಿಂದ ಸಂಕಮ್ಮನ ಪಾತಿವ್ರತ್ಯ ಪ್ರಾರಂಭವಾಗುತ್ತದೆ. ಅವಳಿಗೆ ತನ್ನ ಶೀಲವನ್ನು ಶಂಕಿಸುವ ಗಂಡನಿಗೆ ತಾನೇಕೆ ಪ್ರಮಾಣ ಮಾಡಬೇಕೆಂದು ಹಠ ಹಿಡಿಯುತ್ತಾಳೆ. ನೀಲಯ್ಯನಿಗೆ ತನ್ನ ಅಣ್ಣತಮ್ಮಂದಿರು, ದಾಸಯ್ಯರು, ಬಳೆಗಾರರು, ಜಂಗಮರು ಬಂದು ತನ್ನ ಹೆಂಡತಿಯನ್ನು ಎಲ್ಲಿ ಕರೆದುಕೊಂಡು ಹೋಗುತ್ತಾರೆ ಎಂಬ ಆತಂಕ ಎದುರಾಗಿ ಭಾಷೆ ಕೊಡುವಂತೆ ಪೀಡಿಸುತ್ತಾನೆ. ಅವನು ಭಾಷೆ ಕೇಳುವ ರೀತಿ ಪುರುಷ ಸಮಾಜ ಹೆಣ್ಣಿನ ಮೇಲೆ ಧಾರ್ಮಿಕವಾಗಿ ಯಾವ ರೀತಿಯ ಒತ್ತಡ ಹೇರುತ್ತಾನೆ ಎಂಬುದನ್ನು ತೋರಿಸಲಾಗುತ್ತದೆ.

"ಕೇಳೆ ಕೆಟ್ಟಮುಂಡೆ ಮಗ್ಳೆ ಸಂಕೆಣ್ಣೇ
ಗಂಡನಿಗೆ ದುಂಡಾರೀತಿ ಮಾಡಬೇಡ
ಪತಿಗೆ ಪ್ರತಿ ಉತ್ತರ ಕೊಟ್ಟ ಮೇಲೆ
ನಿನ್ನ ಪತಿವ್ರತಾ ಧರ್ಮ ಉಳಿಯೋದಿಲ್ಲ
ನೀನು ಭಾಷೆ ಕೊಡದೆ ಇದ್ದ ಮೇಲೆ
ನಾನು ಹೆಜ್ಜೇನು ಮಲೆಗೆ ಹೋಗೋದಿಲ್ಲ"[೮೨]
ಸಾಕಮ್ಮ ತನ್ನ ಸ್ವಾಭಿಮಾನ ಬಿಡದೆ ನೀಲಯ್ಯನಿಗೆ
ಭಾಷೆ ಕೊಟ್ಟ ಮೇಲೆ ನನ್ನ

ಧರ್ಮ ಉಳಿಯೋದಿಲ್ಲ ಎನ್ನುವಲ್ಲಿ ಗಂಡನ ಶೋಷಣೆಯನ್ನು ಧಿಕ್ಕರಿಸುತ್ತಾಳೆ. ನೀಲಯ್ಯನನ್ನು ಪ್ರತಿಭಟಿಸಿ ಭಾಷೆ ಕೊಡಲು ನಿರಾಕರಿಸುತ್ತಾ ಸ್ವಾಭಿಮಾನವನ್ನು ವ್ಯಕ್ತಪಡಿಸುತ್ತಾಳೆ.

ಇವರಿಬ್ಬರಲ್ಲಿ ಈ ರೀತಿಯ ಸಂಘರ್ಷಗಳು ನಡೆಯುತ್ತಿರುವಾಗ ನೀಲಯ್ಯ ಅವಳನ್ನು ಮಾಟ ಮಂತ್ರಗಳ ಮೂಲಕ ಕಾಡಿಗೆ ಎಳೆದೊಯ್ದು ಕೊಕ್ಕರೆ ಬೋನಿನ ಮಾಳದಲ್ಲಿ ಅವಳನ್ನು ಸೀರೆ ಕಳಚುವಂತೆ ಹೇಳಿ ತೇಗದ ಎಲೆಗಳಿಂದ ಉಡುಗೆ ಧರಿಸಿಕೊಳ್ಳುವಂತೆ ಆಜ್ಞೆಮಾಡುತ್ತಾನೆ. ಅವಳನ್ನು ಕಣ್ಣು, ಕಿವಿ, ಬಾಯಿಗಳಿಗೆ ಸೂಜಿಯಿಂದ ಹೊಲಿದು, ಕೈ ಕಾಲುಗಳಿಗೆ ಸಂಕೋಲೆ ಹಾಕುತ್ತಾನೆ. ಅವಳು ಅಲ್ಲಾಡದಂತೆ ಅವಳ ಬೆನ್ನಿನ ಮೇಲೆ ಗುಂಡನ್ನಿಟ್ಟು ಕೊಡಬಾರದ ಕೊಲೆಗಳನ್ನು ಕೊಡುತ್ತಾನೆ. ಸಾಕಮ್ಮ ಇಲ್ಲಿ ಕೋಳಿಯಾಗಿ, ನಾಯಿಯಾಗಿ ನರಳುವಂತೆ ಮಾಡುತ್ತಾನೆ. ವಿವಿಧ ರೀತಿಯ ಸತ್ವಪರೀಕ್ಷೆಗಳನ್ನು ನೀಲಯ್ಯ ಒಡ್ಡುವುದರ ಮೂಲಕ ಅವಳ ಪಾತಿವ್ರತ್ಯ ಪರೀಕ್ಷಿಸುತ್ತಾನೆ.

ಈ ಸಂದರ್ಭದಲ್ಲಿ "ಹಿ.ಚಿ.ಬೋರಲಿಂಗಯ್ಯನವರು ಪುರುಷ ಪ್ರಧಾನ ಸಮಾಜದ ಒಪ್ಪಿತ ಮೌಲ್ಯವಾದ ಶೀಲವನ್ನು ನಿರ್ಲಕ್ಷಿಸುವ ಮೂಲಕ ಪಾತಿವ್ರತ್ಯವನ್ನು ಮೀರುವ ಒಂದು ಕ್ರಿಯೆಯಾಗಿ ಮುಖ್ಯವಾಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ."[೮೩] ಪುರುಷ ಪ್ರಧಾನ ಸಮಾಜದಲ್ಲಿ ಪುರುಷನಿಗೆ ಅಧಿಕಾರವಿದ್ದು, ಧಾರ್ಮಿಕ ಸಂಘರ್ಷಗಳ ಮೂಲಕ ಹೆಣ್ಣನ್ನು ಶೋಷಣೆ ಮಾಡುವುದನ್ನು ನೀಲಯ್ಯ ಸಂಕಮ್ಮನ ಜೀವನದಲ್ಲಿ ಕಾಣಬಹುದು.

ಜುಂಜಪ್ಪನ ಕಾವ್ಯದಲ್ಲಿಯೇ ಪಾತಿವ್ರತ್ಯ ಕಾಳಗ ನಡೆಯುವ ಸತ್ವಪರೀಕ್ಷೆಗಳು ವಿಶೇಷ ರೀತಿಯಾಗಿವೆ. ಇಲ್ಲಿ ಮಗನೇ ತಾಯಿಯ ಶೀಲಶಂಕಿಸಿ ಅನೇಕ ಪರೀಕ್ಷೆಗೆ ಈಡುಮಾಡುತ್ತಾನೆ ಆದರೆ ಪರೀಕ್ಷೆಗಳು ಮಾದೇಶ್ವರ ಕಾವ್ಯದ ನೀಲಯ್ಯ ನೀಡಿದಂತೆ ಭಯಂಕರವಾಗಿರುವುದಿಲ್ಲ. ಇಲ್ಲಿ ಸತ್ವಪರೀಕ್ಷೆಗಳನ್ನು ನೀಡುವ ಜುಂಜಪ್ಪ ಹೆಣ್ಣಿನ ಬಗ್ಗೆ ಅಪಾರ ಗೌರವವನ್ನಿಟ್ಟು ಧರ್ಮದ ಸಂಕೋಲೆಗಳಿಂದ ಹೆಣ್ಣನ್ನು ಕಾಪಾಡಬೇಕು. ಸಮಾಜದಲ್ಲಿ ಅವಳಿಗೆ ಒಂದು ಸ್ಥಾನಮಾನ ತಂದುಕೊಡಬೇಕೆಂದು ಪ್ರಯತ್ನಪಟ್ಟವನು. ಹೆಣ್ಣಿನ ಗುಣದೋಷಗಳನ್ನು ಗಮನದಲ್ಲಿಟ್ಟುಕೊಂಡು ಅವಳ ಪರಿವರ್ತನೆಯ ಮೂಲಕ ಕಾರಣನಾಗುತ್ತಾನೆ.

ಜುಂಜಪ್ಪನ ತಾಯಿ ಸಿನ್ನಮ್ಮ ತಾಯ್ತನವನ್ನು ಪಡೆದಿರುವ ಮಗಳ ಪಾತಿವ್ರತೆಯ ವಿಷಯವಾಗಿ ಸತ್ವಪರೀಕ್ಷೆಗಳನ್ನು ಎದುರಿಸುತ್ತಾಳೆ. ಜುಂಜಪ್ಪನ ತಾಯಿ ಕೇವಲ ಒಂಟಿಯಾಗಿ ತವರು ಮನೆಗೆ ಹೋಗಿ ಬಂದದ್ದು ಅಷ್ಟೆ. ಆದರೆ ಜುಂಜಪ್ಪ ತಾಯಿಯ ಪತಿವ್ರತೆಯನ್ನು ನಂಬಲಾರ. ಅವಳು ಮಗನು ನೀಡುವ ಪರೀಕ್ಷೆಗಳನ್ನು ಒಪ್ಪಿಕೊಳ್ಳುತ್ತಾನೆ. ಆದರೆ ಪ್ರತಿಭಟಿಸುವುದಿಲ್ಲ.

ಮಲೆಮಾದೇಶ್ವರ ಕಾವ್ಯದಲ್ಲಿ ಬರುವ ಬೇವಿನಹಟ್ಟಿ ಕಾಳಮ್ಮಳು ಬೇರೆ ರೀತಿಯ ಸತ್ವಪರೀಕ್ಷೆಗಳನ್ನು ಎದುರಿಸಬೇಕಾಗುತ್ತದೆ. ಕಾಳಮ್ಮ ಪತಿವ್ರತೆಯಾದರೂ ಕೃಷಿಕಳಾಗಿದ್ದಾಳೆ. ಮಾದೇಶ್ವರ ತಮ್ಮ ಮಜ್ಜನ ಮಾಡಿಸಿಕೊಳ್ಳುವುದರ ಮೂಲಕ ಸಮಾಜದಲ್ಲಿ ತನ್ನ ಧಾರ್ಮಿಕತೆಯ ಅಧಿಕಾರ ಸ್ಥಾಪನೆಗೆ ಮುಂದಾಗುತ್ತಾನೆ. ಆದ್ದರಿಂದ ಕಾಳಮ್ಮನಲ್ಲಿ ಎಳ್ಳಿನ ಭಿಕ್ಷೆ ಬೇಡಲು ಬಂದಾಗ ಮಾದಪ್ಪನ ಒಕ್ಕಲಾಗದೆ ಪ್ರತಿಭಟಿಸುತ್ತಾಳೆ. ಇದರಿಂದ ಕಾಳಮ್ಮನ ಕೆಂಚೇಗೌಡನಿಗೆ ಹಿಂದೇವಿ ಮುಂದೇಟಿ ಬಂದು ಸಾಯುತ್ತಾನೆ. ಇಡೀ ತನ್ನ ಕುಟುಂಬ ನಾಶವಾದರೂ ಸರಿ ಭಿಕ್ಷೆ ನೀಡುವುದಿಲ್ಲ ಎಂದು ಹೇಳುತ್ತಾಳೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ಕಾಳಮ್ಮ ತನ್ನ ಗಂಡನಿಲ್ಲದಿದ್ದರೂ ತಾನೂ ಪತಿವ್ರತೆಯೇ ಎಂಬ ಭಾವ ಅವಳಲ್ಲಿದೆ. ಅವಳಿಗೆ ಭಿಕ್ಷೆ ನೀಡುವುದರೊಂದಿಗೆ ಪರ ಪುರುಷನಿಗೆ ಶರಣಾಗುವುದಕ್ಕೆ ಇಷ್ಟವಿಲ್ಲದಂತೆ ತೋರುತ್ತದೆ.

ಮಂಟೇಸ್ವಾಮಿ ಕಾವ್ಯದಲ್ಲಿ ಕಲ್ಯಾಣದಲ್ಲಿದ್ದ ಬಸವಣ್ಣ ನೀಲಮ್ಮ ದಂಪತಿಗಳು ಶರಣಾರಾಗಿದ್ದಾರೆ. ಇವರಿಬ್ಬರ ದೃಢಭಕ್ತಿ ಪರೀಕ್ಷಿಸಲು ಮಂಟೇಸ್ವಾಮಿ ಯಾರಿಗೂ ಕಾಣದಂತೆ ಕಲ್ಯಾಣಕ್ಕೆ ಬಂದಾಗ ಬಸವಣ್ಣನು ತನ್ನ ಕೊರಳಿನ ಲಿಂಗವನ್ನು ತೆಗೆದು ತನ್ನ ಪತ್ನಿ ಪತಿವ್ರತೆಯಾದರೆ ಕಾಣದಿರುವ ಜಂಗುಮ ನನ್ನ ತೋರಿಸಬೇಕು ಎನ್ನುತ್ತಾರೆ. ನೀಲಮ್ಮ ತನ್ನ ಪತಿವ್ರತೆ ಬಲದಿಂದ ಬಸವಣ್ಣ ನನ್ನ ಕುರಿತು.

ಪತಿದೇವರ ಬಸವಣ್ಣ,

ನಮ್ಮ ಕಲ್ಯಾಣದ ಗುರುಮಠಕ್ಕೆ

ಬಂದಿರತಕ್ಕಂತಹ ಜಂಗಮರು ಅಂದ್ರೆ

ಇವರು ಸಾಮಾನ್ಯವಾದ ಪುರುಷರಲ್ಲ”[೮೩]

ಎಂಬುದನ್ನು ತಿಳಿಸಿ ಮಂಟೇಸ್ವಾಮಿಯನ್ನು ಕೈಹಿಡಿದು ಕರೆಯಲು ಹೋದಾಗ ನೀಲಮ್ಮನ ಸತ್ವಪರೀಕ್ಷೆ ಪ್ರಾರಂಭವಾಗುತ್ತದೆ. ಮಂಟೇಸ್ವಾಮಿಯನ್ನು ಕೈಹಿಡಿದು ಎತ್ತಿದಾಗ ಎಲ್ಲಾ ಅಂಗಾಂಗಳು ಕಿತ್ತು ಬರುತ್ತದೆ. ಆಗ ನೀಲಮ್ಮ ಅಸಹ್ಯಪಡೆದ ಅವುಗಳನ್ನು ಪಟ್ಟೆ ವಸ್ತ್ರದಲ್ಲಿಟ್ಟುಕೊಂಡು ಗದ್ದುಗೆ ಮೇಲ್ಪಟ್ಟು ದಂಪತಿಗಳಿಬ್ಬರೂ ಪೂಜಿಸುತ್ತಾರೆ. ಇಲ್ಲಿ ನೀಲಮ್ಮನ ಸತ್ವಪರೀಕ್ಷೆ ಭಕ್ತಿಗೆ ಸಂಬಂಧಿಸಿದ್ದಾಗಿದೆ. ಅವರ ಪತಿವ್ರತ ಧರ್ಮದ ಮೂಲಕವೇ ಬಸವಣ್ಣ, ನೀಲಮ್ಮ ಸಮಾಜದಲ್ಲಿ ಮಹಾ ಭಕ್ತರೆನಿಸಿಕೊಳ್ಳುತ್ತಾರೆ.

ಸಂಕಮ್ಮ, ಸಿನ್ನಮ್ಮ, ನೀಲಮ್ಮ ಬಸವಣ್ಣರಂತೆ ಪತಿವ್ರತೆಯ ಮೂಲಕ ಸತ್ವಪರೀಕ್ಷೆಗಳಿಗೆ ಒಳಗಾಗದೆ ತನ್ನ ಗಂಡನಿಗಾಗಿ ಕಾಯುತ್ತಾ ಪುರುಷ ಸಮಾಜ ನಿರ್ಮಿಸಿದ ಧಾರ್ಮಿಕ ಕಟ್ಟಳೆಗಳಿಗೆ ಒಳಗಾಗುವ ಪತಿವ್ರತೆ ಗಂಗಿಮಾಳಮ್ಮ. ಮೈಲಾರಲಿಂಗನ ಕಾವ್ಯದಲ್ಲಿ ಬರುವ ಗಂಗಿಮಾಳಮ್ಮ ಪ್ರಮುಖವಾದ ಪಾತ್ರವಾಗಿದ್ದು, ಮೈಲಾರನ ಮೊದಲ ಹೆಂಡತಿಯಾಗಿದ್ದಾಳೆ. ಗಂಗಿಮಾಳಮ್ಮ ಹೊಸದಾಗಿ ಮದುವೆಯಾಗಿದ್ದರೂ ಮೈಲಾರನು ಅವಳನ್ನು ಬಿಟ್ಟು ಕೋಮಾಲೆಯನ್ನು ತರಲು ಹೋಗುತ್ತಾನೆ. ಆ ಸಂದರ್ಭದಲ್ಲಿ ಗಂಗಿಮಾಳಮ್ಮ

“ಗಂಡನಿಲ್ಲದ ಜೀವಾ ಶಿವಾ ಶಿವಾ.

ಬೀಳಾ ಮಂಚವಾಗೈತೇ ಎಂಬುದಾಗಿ ಗೋಗರೆಯುತ್ತಾಳೆ. ಮೈಲಾರನು ಕೋಮಲಿಯನ್ನು ವಿವಾಹವಾಗಿ ಬಂದಾಗ ಪುರುಷ ಅಧೀನದಲ್ಲಿರುವ ಹೆಣ್ಣು ಅವನು ಹೇಳಿದಂತೆ ಕೇಳಿಕೊಂಡು ಅವನು ಮಾಡಿದ್ದನ್ನೆಲ್ಲ ಸಹಿಸಿಕೊಂಡು ಇರಬೇಕೆಂಬುದನ್ನು ಗಂಗಿಮಾಳಮ್ಮನ ಸಾಲಿನಲ್ಲಿ ನೋಡಬಹುದು. ಮೈಲಾರನ ಮೂಲಕ ಗಂಡಿಗೆ ಯಾವುದೇ ಧಾರ್ಮಿಕ ಕಟ್ಟಳೆಗಳಿಲ್ಲ. ಸಂಪ್ರದಾಯ, ಸಂಕೋಲೆಗಳಿಲ್ಲ.

ಏಕಪತ್ನಿತ್ವ ಪದ್ಧತಿ ಇಲ್ಲ ಎಂಬುದನ್ನು ನಿರೂಪಿಸಿದ್ದಾರೆ. ಗಂಗಿಮಾಳಮ್ಮ ಗಂಡನಿಲ್ಲದಿದ್ದರೂ, ತನ್ನ ಪತಿವ್ರತಾ ಧರ್ಮ ಉಳಿಸಿಕೊಂಡಿದ್ದಾಳೆ ಎಂಬುದನ್ನು ಮೈಲಾರ ಮತ್ತು ಕೋಮಲಿಯನ್ನು ಒಪ್ಪಿಕೊಳ್ಳುವುದರ ಮೂಲಕ ಪುರುಷನ ಧರ್ಮವನ್ನು ಸ್ವೀಕರಿಸುತ್ತಾಳೆ. ಯಾವ ಸಂಘರ್ಷಕ್ಕೆ ಈಡುಮಾಡಿಕೊಡುವುದಿಲ್ಲ.

ಹೀಗೆ ಅನೇಕ ಘಟನೆಗಳು ಮಹಾಕಾವ್ಯಗಳಲ್ಲಿ ಸ್ತ್ರೀಯರು ವಿವಿಧ ರೀತಿಯ ಸತ್ವಪರೀಕ್ಷೆಗಳನ್ನು ಎದುರಿಸುತ್ತಾರೆ. ಕೆಲವು ಸತ್ವ ಪರೀಕ್ಷೆಗಳು ಧರ್ಮ ಅಪೇಕ್ಷಿತವಾಗಿ ಕಂಡುಬಂದಂತೆ ಮತ್ತೆ ಕೆಲವು ಧರ್ಮ ಸಂಘರ್ಷಕ್ಕೆ ಮೂಲಕಾರಣವಾಗಿ ಕಂಡು ಬರುತ್ತದೆ.

ಮಹಿಳೆ ಕಡ್ಡಾಯವಾಗಿ ಪತಿವ್ರತಾ ಧರ್ಮವನ್ನು ಪಾಲಿಸಿಕೊಂಡುಬರಬೇಕು ಅವಳ ಪತಿವ್ರತಾ ಧರ್ಮಕ್ಕೆ ಚ್ಯುತಿ ಬಂದರೆ ಪುರುಷನ ಅಡಿಯಾಳಾಗಿ ಬದುಕಬೇಕು ಎಂಬುದು ಪುರುಷ ಸಮಾಜದ ವಾದ. ಹಾಗಾಗಿಯೇ ಸಮಾಜದಲ್ಲಿ ಸ್ತ್ರೀ ಪುರುಷನ ಅಸಮಾನತೆಗೆ ಮೂಲಕಾರಣ ಧಾರ್ಮಿಕ ಸಂಘರ್ಷಗಳೆ ಆಗಿವೆ. ಪತಿವ್ರತ, ಭಕ್ತಿ, ಬಹುಪತ್ನಿತ್ವ ಶೀಲ, ಮಡಿ, ಮೈಲಿಗೆ, ಇವೆಲ್ಲವುಗಳನ್ನು ಧರ್ಮದ ಹೆಸರಿನಲ್ಲಿ ಆಚರಣೆಗೊಳ್ಳುತ್ತಿವೆ. ಆಚರಣೆಗೊಳ್ಳಪಟ್ಟ ಎಷ್ಟೋ ಸಂಸ್ಕೃತಿಗಳು ಭಾರತೀಯ ಪರಂಪರೆಯಲ್ಲಿ ಅನೇಕ ಸಂಘರ್ಷಗಳಿಗೆ ಅವಕಾಶ ಮಾಡಿಕೊಟ್ಟಿದೆ. ಈ ಸಂಘರ್ಷಗಳಿಗೆ ನ್ಯಾಯ ಹೆಣ್ಣಿನ ಪರ ಇದ್ದರೂ ಶೋಷಣೆಗೆ ಒಳಗಾಗುವಳು. ಸ್ತ್ರೀ ಈ ಮೇಲಿನ ಎಲ್ಲಾ ಧರ್ಮಾಚರಣೆಗಳನ್ನು ಆದರ್ಶ ಮೌಲ್ಯಗಳೆಂದು ಹೇಳಿ ಹೆಣ್ಣಿನ ಮೇಲೆ ಹೇರಲಾಗುತ್ತಿದೆ. ಆದರೆ ಪುರುಷನಿಗೆ ಇದ್ಯಾವುದೇ ಸಂಪ್ರದಾಯ ಕಟ್ಟಳೆ, ಚೌಕಟ್ಟುಗಳ ನಿರ್ಬಂಧವಿಲ್ಲದೆ ಸ್ವತಂತ್ರ ಜೀವಿಯಾಗಿ ಬದುಕುತ್ತಿದ್ದಾನೆ.

**ಕೊನೆಟಿಪ್ಪಣಿ**


೧. ಬಸವರಾಜು ತೋಟಹಳ್ಳಿ, ಜನಪದ ಸಂಸ್ಕೃತಿಯ ನೆಲೆಗಳು, ೨೦೦೮, ಪು.ಸಂ–೧೮

೨. ಬೋರಲಿಂಗಯ್ಯ.ಹಿ.ಚಿ. ಕಾಡು ಕಾಂಕ್ರಿಟ್ ಮತ್ತ ಜಾನಪದ, ೧೯೯೫, ಪು.ಸಂ–೪೮

೩. ಅದೇ ಪುಸ್ತಕ, ಪು.ಸಂ–೨೯, ೫೦

೪. ಗಂಗಾಧರ ದೈವಜ್ಞ, ಮಾಳಿಂಗರಾಯನ ಕಾವ್ಯ, ೧೯೯೯, ಪು.ಸಂ–೧೩

೫. ಸ್ವಾಮಿ.ಬಿ.ಎಸ್.,ಮಲೆಮಾದೇಶ್ವರ ಜಾನಪದ ಮಹಾಕಾವ್ಯ, ೨೦೦೧, ಪು.ಸಂ–೨೨

೬. ಹೇಮಾವತಿ.ಟಿ.ಆರ್.,ಜನಪದ ಮಹಾಕಾವ್ಯಗಳಲ್ಲಿ ಸ್ತ್ರಿ ಸಂವೇದನೆ ಒಂದು ಅಧ್ಯಯನ, ೨೦೦೪, ಪು.ಸಂ–೪೦ (ಪಿಎಚ್‌ಡಿ ಅಪ್ರಕಟಿತ ಮಹಾಪ್ರಬಂಧ)

೭. ಗುರುಪ್ರಸಾದ್ ಸಿ.ಟಿ. ನೀಲಗಾರರು ಸಂಕಥನ, ೨೦೧೪, ಪು.ಸಂ–೧೦೧

೮. ತೀ.ನಂ.ಶಂಕರನಾರಾಯಣ, ಕರ್ನಾಟಕ ಜನಪದ ಮಹಾಕಾವ್ಯಗಳು, ೧೯೯೮, ಪು.ಸಂ–೬೮

೯. ಅದೇ ಪುಸ್ತಕ, ಪು.ಸಂ–೭೯

೧೦. ಹಳ್ಳಿಕೇರಿ.ಎಫ್.ಟಿ, ಮೈಲಾರಲಿಂಗ ಪರಂಪರೆ, ೨೦೧೮, ಪು.ಸಂ-೧೧೬,

೧೧. ಮಂಜುನಾಥ ಬೇವಿನಕಟ್ಟೆ, ಮೈಲಾರಲಿಂಗನ ಕಾವ್ಯ, ೧೯೯೯, ಪು.ಸಂ-೩೬,

೧೨. ದೇ ಜವರೇಗೌಡ. ಜಾನಪದ ಒಂದು ಅಧ್ಯಯನ, ೧೯೭೬, ಪು.ಸಂ-೩೨೧,

೧೩. ಗುರುಪ್ರಸಾದ್ ಸಿ.ಟಿ. ನೀಲಗಾರರು ಸಂಕಥನ, ೨೦೧೪, ಪು.ಸಂ-೪೬,

೧೪. ದೇವೇಂದ್ರ ಕುಮಾರ್ ಹಕಾರಿ, ಜಾನಪದ ಸಾಹಿತ್ಯ ದರ್ಶನ, ಪು.ಸಂ-೧೭,

೧೫. ಲಿಂಗಯ್ಯ.ಡಿ, ಜಾನಪದ ಶೋಧನ, ೨೦೦೧, ಪು.ಸಂ-೫೭,

೧೬. ನಾಗರಾಜ ಹೊಸೂರ್ಕರ್, ಮೈಲಾರಲಿಂಗನ ಆಚರಣೆ ಒಂದು ಸಾಂಸ್ಕೃತಿಕ ಅಧ್ಯಯನ, ೨೦೦೮, ಪು.ಸಂ-೮೨, ೮೩, (ಪಿಎಚ್‌ಡಿ ಅಪ್ರಕಟಿತ ಮಹಾಪ್ರಬಂಧ)

೧೭. ಪಾತಲಿಂಗಪ್ಪ, ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು, ೨೦೧೭,, ಪು.ಸಂ-೧೪೩, (ಪಿಎಚ್‌ಡಿ ಅಪ್ರಕಟಿತ ಮಹಾಪ್ರಬಂಧ)

೧೮. ಡಿ.ಡಿ.ಕೋಸಂಬಿ, myths and reality, ಉಲ್ಲೇಖ: ಪಾತಲಿಂಗಪ್ಪ, ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು, ೨೦೧೭, ಪು.ಸಂ-೭೩,೭೪, ಮಹಾಪ್ರಬಂಧ,

೧೯. ಸರಸ್ವತಿ,ಎನ್,ಎಸ್, ಜನಪದ ಸಾಹಿತ್ಯದಲ್ಲಿ ಪವಾಡಗಳು ಒಂದು ಅಧ್ಯಯನ, ೧೯೯೭, ಪು. ಸಂ-೩೫,

೨೦. ಬೋರಲಿಂಗಯ್ಯ ಹಿ.ಚಿ. ಉಜ್ಜಯಿನಿ ಚೌಡಮ್ಮ, ೨೦೦೧, ಪು.ಸಂ-೪, ಎರಡನೇ ಮುದ್ರಣ

೨೧. ಸಿದ್ದಲಿಂಗಯ್ಯ, ಗ್ರಾಮದೇವತೆಗಳು, ೧೯೯೭, ಪು.ಸಂ-೨೨

೨೨. ಹೇಮಾವತಿ.ಟಿ.ಆರ್. ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ, ೨೦೦೪, ಪು.ಸಂ-೧೩೮ ( ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ)

೨೩. ಪು.ಸಂ-೧೩೮,

೨೪. ಹಿ.ಚಿ. ಬೋರಲಿಂಗಯ್ಯ, ಮಂತೇಸ್ವಾಮಿ ಕಾವ್ಯ, ೧೯೯೭, ಪು.ಸಂ-೪೧೪ ರಿಂದ ೪೧೭

೨೫. ಅದೇ ಪುಸ್ತಕ. ಪು.ಸಂ-೪೧೮

೨೬. ಮೀರಸಾಬಿಹಳ್ಳಿ ಶಿವಣ್ಣ, ಜಾನಪದ, ೧೯೯೨, ವೀರಣ್ಣ ದಂಡೆ ಸಂಪುಟ. ೧೯೯೫, ಪು.ಸಂ-೫,

೨೭. ಚೆಲುವರಾಜ್, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೫೭

೨೮. ಅದೇ ಪುಸ್ತಕ. ಪು.ಸಂ-೧೬೫

೩೯. ಜೀ.ಶಂ.ಪ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೨೦೧೨, ಪು.ಸಂ-೧೫೬

೪೦. ಸುನಂದ. ಎಂ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ- ೧೫೧

೪೧. ಅದೇ ಪುಸ್ತಕ. ಪು.ಸಂ-೧೫೨

೪೨. ಉದ್ಧೃತ: ಗಾಯತ್ರಿ ನಾವಡ, ವಿರಚನೆ,ಪು, ಸಂ-೧೨೨, ೧೯೯೭. ಮುತ್ತಯ್ಯ ಕನ್ನಡ ಜಾನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ, ಪು.ಸಂ-೧೭೯

೪೩. ಸುನಂದ. ಎಂ. ನಿಷೇಧಗಳು ಮತ್ತು ಲಿಂಗ ವ್ಯವಸ್ಥೆ, ೨೦೧೧, ಪು.ಸಂ- ೧೫೬

೪೪. ಕೇಶವನ್ ಪ್ರಸಾದ್. ಕೆ. ಮಲೆಮಾದೇಶ್ವರ,  ೧೯೯೭, ಪು.ಸಂ-೧೭

೪೫. ಅದೇ ಪುಸ್ತಕ. ಪು.ಸಂ-೧೯

೪೬. ಅದೇ ಪುಸ್ತಕ. ಪು.ಸಂ-೨೦

೪೭. ಅದೇ ಪುಸ್ತಕ. ಪು.ಸಂ-೨೦

೪೮. ಅದೇ ಪುಸ್ತಕ. ಪು.ಸಂ-೨೧

೪೯. ಅದೇ ಪುಸ್ತಕ. ಪು.ಸಂ-೨೨,೨೩

೫೦. ಜೀ,ಶಂ.ಪ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೧೯೭೯, ಪು.ಸಂ-೧೧೦

೫೧. ಕೇಶವನ್ ಪ್ರಸಾದ್. ಕೆ. ಮಲೆಮಾದೇಶ್ವರ, ೧೯೯೭, ಪು.ಸಂ-೧೪೨

೫೨. ಅದೇ ಪುಸ್ತಕ. ಪು.ಸಂ-೧೫೪

೫೩. ಬೋರಲಿಂಗಯ್ಯ. ಹಿ.ಚಿ. ಕಾಡು ಕಾಂಕ್ರಿಟ್ ಮತ್ತು ಜಾನಪದ, ೧೯೯೫, ಪು.ಸಂ-೫೯

೫೪. ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ ಒಂದು ಸಂಕಥನ, ೨೦೦೦, ಪು.ಸಂ-೩೩

೫೫. ವೆಂಕಟೇಶ್.ಸಿ.ಡಿ. ಜಾನಪದ ಸಾಹಿತ್ಯದಲ್ಲಿ ಸ್ತ್ರೀ ಪರಿಕಲ್ಪನೆ, ೨೦೧೦, ಪು.ಸಂ-೧೬

೫೬. ಪ್ರಭಾಕರ್. ಎ, ಎಸ್, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ೨೦೦೦, ಪು.ಸಂ-೭೭

೫೭. ಕೇಶವನ್ ಪ್ರಸಾದ್. ಕೆ. ಮಲೆಮಾದೇಶ್ವರ, ೧೯೯೭, ಪು.ಸಂ-೩೩೦

೫೮. ಅದೇ ಪುಸ್ತಕ. ಪು.ಸಂ-೩೪೭

೫೯. ಅದೇ ಪುಸ್ತಕ. ಪು.ಸಂ-೩೫೦

೬೦. ಬೋರಲಿಂಗಯ್ಯ. ಹಿ.ಚಿ. ಕಾಡು ಕಾಂಕ್ರಿಟ್ ಮತ್ತು ಜಾನಪದ, ೧೯೯೫, ಪು.ಸಂ-೬೭

೬೧. ಬೋರಲಿಂಗಯ್ಯ. ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ-೨೧೫,

೬೨. ಅದೇ ಪುಸ್ತಕ. ಪು.ಸಂ-೨೧೬

೬೩. ಅದೇ ಪುಸ್ತಕ. ಪು.ಸಂ–೨೧೭

೬೪. ಅದೇ ಪುಸ್ತಕ. ಪು.ಸಂ–೨೧೮

೬೫. ವೆಂಕಟೇಶ್ ಇಂದ್ವಾಡಿ, ಮಂಟೇಸ್ವಾಮಿ ಪರಂಪರೆ, ೧೯೯೯, ಪು.ಸಂ–೭೭

೬೬. ಬೋರಲಿಂಗಯ್ಯ. ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ–೮೧೭

೬೭. ಗುರುಪ್ರಸಾದ್,ಸಿ.ಟಿ. ನೀಲಗಾರರು ಸಂಕಥನ, ೨೦೧೪, ಪು.ಸಂ–೧೦೩,೧೦೪

೬೮. ಬೋರಲಿಂಗಯ್ಯ. ಹಿ.ಚಿ. ಮಂಟೇಸ್ವಾಮಿ ಕಾವ್ಯ, ೧೯೯೭, ಪು.ಸಂ–೨೦೯

೬೯. ಅದೇ ಪುಸ್ತಕ, ಪು.ಸಂ–೨೧೦.೨೧೧

೭೦. ಗುರುಪ್ರಸಾದ್,ಸಿ.ಟಿ. ನೀಲಗಾರರು ಸಂಕಥನ, ೨೦೧೪, ಪು.ಸಂ–೧೦೫,೧೦೬

೭೧. ಚಲುವರಾಜ್, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ–೧೩೧, ೧೩೨

೭೨. ಅದೇ ಪುಸ್ತಕ. ಪು.ಸಂ–೧೩೯

೭೩. ಸಿದ್ದಗಂಗಯ್ಯ. ಬಿ.ಸಿ. ಜುಂಜಪ್ಪನ ಕಾವ್ಯ, ೧೯೯೬, ಪು.ಸಂ–೧೯

೭೪. ಚಲುವರಾಜ್, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ–೧೫೫

೭೫. ಅದೇ ಪುಸ್ತಕ. ಪು.ಸಂ–೧೬೨, ೧೬೩

೭೬. ಸುಶೀಲ. ಪಿ.ಉಪಾಧ್ಯಾಯ,ದಕ್ಷಿಣ ಭಾರತದ ಜನಪದ, ೧೯೯೮, ಪು.ಸಂ–೬೮

೭೭. ಚಲುವರಾಜ್, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ–೧೭೪

೭೮. ಶಂಕರನಾರಾಯಣ. ತೀ.ನಂ. ಕರ್ನಾಟಕ ಜನಪದ ಮಹಾಕಾವ್ಯ, ೧೯೯೮, ಪು.ಸಂ–೭೬

೭೯. ಕಾಳೇಗೌಡನಾಗವರ,ಜುಂಜಪ್ಪ, ೧೯೯೦, ಪು.ಸಂ–೪೧

೮೦. ಮಂಜುನಾಥ ಬೇವಿನಕಟ್ಟಿ, ಮಾಳಿಂಗರಾಯನ ಕಾವ್ಯ, ೧೯೯೯, ಪು.ಸಂ–೬೦

೮೧. ಅದೇ ಪುಸ್ತಕ. ಪು.ಸಂ–೮೮ ರಿಂದ ೯೨

೮೨. ಅದೇ ಪುಸ್ತಕ. ಪು.ಸಂ–೧೧೯

೮೩. ಅದೇ ಪುಸ್ತಕ. ಪು.ಸಂ–೧೨೧

೮೪. ಅದೇ ಪುಸ್ತಕ. ಪು.ಸಂ–೧೩೬

೮೫. ಪಾತಲಿಂಗಪ್ಪ, ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು, ೨೦೧೭, ಪು.ಸಂ–೧೪೦, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ

೮೬.ಅದೇ ಸಂಶೋಧನಾ ಪ್ರಬಂಧ, ಪು.ಸಂ–೧೯೫

೮೮. ಹೇಮಾವತಿ.ಟಿ.ಆರ್. ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ, ೨೦೦೪ ಪು.ಸಂ-೧೩೯ ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ

೮೯. ಪಾತಲಿಂಗಪ್ಪ, ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು, ೨೦೧೭, ಪು.ಸಂ-೧೬೦, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ

೯೦. ಕೇಶವನ್ ಪ್ರಸಾದ್. ಕೆ. ಮಲೆಮಾದೇಶ್ವರ, ೧೯೯೭, ಪು.ಸಂ-೨೦

೯೧. ಚಲುವರಾಜ್, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೧೩೧, ೧೩೨

೯೨. ಪಾತಲಿಂಗಪ್ಪ, ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು, ೨೦೧೭, ಪು.ಸಂ-೧೬೨, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ

೯೩. ಕೇಶವನ್ ಪ್ರಸಾದ್. ಕೆ. ಮಲೆಮಾದೇಶ್ವರ, ೧೯೯೭, ಪು.ಸಂ-೧೪೨

೯೪. ಜೀ,ಶಂ.ಪ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೧೯೭೯, ಪು.ಸಂ-೨೫೭

೯೫. ಪಾತಲಿಂಗಪ್ಪ, ಕನ್ನಡ ಮೌಖಿಕ ಕಾವ್ಯಗಳಲ್ಲಿ ಸ್ತ್ರೀ ಸಂಘರ್ಷದ ನೆಲೆಗಳು, ೨೦೧೭ ಪು.ಸಂ-೧೬೬, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ

೯೬. ಚಲುವರಾಜ್, ಜುಂಜಪ್ಪನ ಕಾವ್ಯ, ೧೯೯೭, ಪು.ಸಂ-೧೩೧, ೧೩೨,

೯೭. ಅದೇ ಪುಸ್ತಕ. ಪು.ಸಂ-೨೧೪

೯೮. ಬೋರಲಿಂಗಯ್ಯ.ಹಿ.ಚಿ. ಮಂಟೇಸ್ವಾಮಿ ಕಾವ್ಯ, ಪು.ಸಂ-೮೧೭. ೧೯೯೭

೯೯. ಅದೇ ಪುಸ್ತಕ. ಪು.ಸಂ-೪೯೩,೪೯೪

೧೦೦. ಕೇಶವನ್ ಪ್ರಸಾದ್. ಕೆ. ಮಲೆಮಾದೇಶ್ವರ, ಪು.ಸಂ-೧೫೩. ೧೯೯೭

೧೦೧. ಲಕ್ಷ್ಮಿ ನರಸಮ್ಮ, ಕನ್ನಡ ಜನಪದ ಮಹಾಕಾವ್ಯಗಳು ತೌಲನಿಕ ಅಧ್ಯಯನ, ಪು.ಸಂ-೧೬೭, ೨೦೧೦

೧೦೨. ಬೋರಲಿಂಗಯ್ಯ.ಹಿ.ಚಿ. ಮಂಟೇಸ್ವಾಮಿ ಕಾವ್ಯ, ಪು.ಸಂ-೩೦೨. ೧೯೯೭

# ಅಧ್ಯಾಯ : ಆರು

## ಸಮಾರೋಪ

ಮೌಖಿಕ ಕಾವ್ಯ ಎನ್ನುವುದು ಮಾನವನ ಜೀವಿತದ ಅನುಭವಗಳ ಚರಿತ್ರೆಯಾಗಿದೆ. ಮಾನವನು ಪ್ರತಿನಿತ್ಯ ತನ್ನ ಜೀವಿತದಲ್ಲಿ ನಡೆಯುತ್ತಿದ್ದ ಘಟನೆಗಳನ್ನು ಅಕ್ಷರ ರೂಪಕ್ಕೆ ತರಲು ಪ್ರಾರಂಭಿಸಿದನು. ಈ ಮೂಲಕ ತನ್ನ ಇತಿಹಾಸವನ್ನು ತಾನೇ ನಿರ್ಮಿಸ ಹೊರಟನು. ಹಾಗೆ ನಿರ್ಮಿಸುವಾಗ ಶಿಷ್ಟ ಪರಂಪರೆಯು ಸವಾಲಾಯಿತು. ಆದರೂ ಮೌಖಿಕ ಪರಂಪರೆ ತನ್ನ ಅಸ್ತಿತ್ವ ಕಳೆದುಕೊಳ್ಳದೆ ಇತಿಹಾಸ ಪುಟದಲ್ಲಿ ಗಟ್ಟಿಯಾದ ಸ್ಥಾನವನ್ನು ಗಿಟ್ಟಿಸಿಕೊಂಡಿತು. ಇದು ತುಂಬಾ ಕಾಲದವರೆಗೆ ಮುಂದುವರೆದರೂ ಸಹ ಮೌಖಿಕ ಅನುಭವಗಳು ಲಿಖಿತ ರೂಪಕ್ಕೆ ಬಂದವು. ಆದರೂ ಸಹ ತನ್ನ ರೂಪುರೇಷೆ, ಗುಣಮಟ್ಟದಲ್ಲಿ ಯಾವುದೇ ಬದಲಾವಣೆಗೆ ಅವಕಾಶವನ್ನು ಕೊಡದೆ, ಶಿಷ್ಟ ಪರಂಪರೆಗೆ ಎದುರಾಗಿ ಮೌಖಿಕ ಸಮಾಜವನ್ನು ಸೃಷ್ಟಿಸಿತು.

ಮೌಖಿಕ ಕಾವ್ಯಗಳು ಅನೇಕ ಘಟನೆಗಳನ್ನು ಮರು ಸೃಷ್ಟಿಸುವಲ್ಲಿ ಯಶಸ್ವಿಯಾಗಿವೆ. ಶಿಷ್ಟ ಪರಂಪರೆಯ ರಾಜರ ಆಳ್ವಿಕೆ, ಸಾಮ್ರಾಜ್ಯ ವಿಸ್ತರಣೆ ಇದೇ ಸಂಸ್ಕೃತಿ ಎಂದು ಭಾವಿಸಿದ್ದ ಸಮಯದಲ್ಲಿ ಇವರದ್ದು ಮಾತ್ರ ಸಂಸ್ಕೃತಿಯಲ್ಲ, ಮೌಖಿಕ ಕಾವ್ಯಗಳು, ನಾಯಕರು, ವಸ್ತುಗಳು, ಸಾಮಾನ್ಯ ವ್ಯಕ್ತಿಗಳು ಕಾರಣ ಜನರು ಸಹ ಒಂದು ಹೊಸ ಸಂಸ್ಕೃತಿಯನ್ನು ಹುಟ್ಟುಹಾಕಬಲ್ಲದು ಎಂಬುದನ್ನು ಸಾಬೀತುಪಡಿಸಿದರು, ಶಿಷ್ಟ ಪರಂಪರೆಯು ರಾಜ ಪ್ರತ್ಯಕ್ಷ ದೇವತೆ ಎಂಬ ಮಾತನ್ನು ಹೇಳಿದರೆ ಮೌಖಿಕ ಕಾವ್ಯಗಳು ತಳ್ಳಲ್ಪಟ್ಟ ಸಮುದಾಯಗಳೇ ನಿಜವಾದ ದೇವರೆಂದು ಪರಿಗಣಿಸಲಾಗಿದೆ. ವಚನ ಚಳುವಳಿಯ ನಂತರ ಬಂದಂತಹ ಸಾಂಸ್ಕೃತಿಕ ವೀರರು ಸಮಸಮಾಜದ ನಿರ್ಮಾಣದತ್ತ ಹೆಜ್ಜೆ ಇಟ್ಟಿದ್ದರು, ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ ಮೈಲಾರಲಿಂಗ, ಮಾಳಿಂಗರಾಯ, ಮೊದಲಾದ ಸಾಂಸ್ಕೃತಿಕ ನಾಯಕರು ಕೆಳವರ್ಗದ ನಾಯಕರಾಗಿದ್ದಾರೆ, ಈ ನಾಯಕರು ಪ್ರಾಣಿ, ಪಕ್ಷಿ, ಜನರೊಂದಿಗೆ ಅವಿನಾಭಾವ ಸಂಬಂಧ ಹೊಂದಿ ಒಂದು ಹೊಸ ಪರಂಪರೆಯನ್ನು ಕಟ್ಟಿಕೊಡುವ ಕಾರ್ಯ ಮಾಡಿದ್ದಾರೆ.

ಮೌಖಿಕ ಕಾವ್ಯಗಳ ನಾಯಕರು ಧಾರ್ಮಿಕ, ಆರ್ಥಿಕ, ರಾಜಕೀಯ, ಹಂತಗಳನ್ನು ಕೆಳವರ್ಗದವರ ಪರವಾಗಿ ಹೆಣೆಯುತ್ತಾ ಹೊಗುತ್ತಾರೆ, ಈ ಕಾವ್ಯಗಳಲ್ಲಿಯ ನಾಯಕರು ತಮ್ಮ ಪರವಾಗಿ ಅನುಯಾಯಿಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಅವರ ಮೂಲಕ ತಮ್ಮ ಸಮುದಾಯಗಳ ಏಳಿಗಾಗಿ

ವಿರೋಧಿಗಳೊಂದಿಗೆ ಸೆಣಸಿ ಹೊಸ ಸಂಸ್ಕೃತಿ ಹುಟ್ಟುಹಾಕಿದ್ದಾರೆ. ಕೆಲವು ಕಾವ್ಯಗಳಲ್ಲಿ ಸಾಂಸ್ಕೃತಿಕ ನಾಯಕರು ಪ್ರಾಣತ್ಯಾಗ ಮಾಡಿದರೂ ಅವರ ಸಮುದಾಯದವರು ನಾಯಕರನ್ನು ದೈವತ್ವಕ್ಕೇರಿಸುತ್ತಾರೆ.

ಮೌಖಿಕ ಕಾವ್ಯಗಳು ತಮ್ಮದೇ ಆದ ವಿಶೇಷ ಸಂಸ್ಕೃತಿ ಹೊಂದಿದ್ದು ವೀರ ಕಾವ್ಯಗಳಾಗಿ ಹೊಸ ಹೊಸ ಸಾಂಪ್ರದಾಯಿಕ ಪದ್ಧತಿಗಳನ್ನು ಪುನರ್‌ಸ್ಥಾಪಿಸಿವೆ ನಾಯಕ-ಪ್ರತಿನಾಯಕ, ನಾಯಕ-ನಾಯಕಿ ದುಷ್ಟರು-ಶಿಷ್ಟರು ಎಂಬ ಸಂಸ್ಕೃತಿಗಳ ಮೂಲಕ ಸಂಘರ್ಷಗಳನ್ನು ನಡೆಸುತ್ತಾರೆ. ಮೌಖಿಕ ಕಾವ್ಯಗಳ ನಾಯಕರ ಅಸ್ತಿತ್ವವನ್ನು ಸಾಧಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ ಈ ನಾಯಕರ ಅಸ್ತಿತ್ವದ ಆಶಯದೊಂದಿಗೆ ಸಮುದಾಯಗಳ ಅಭಿವೃದ್ಧಿ ಸ್ಥಾನ ಮಾನಗಳನ್ನು ದಾಖಲಿಸಲು ಹೋರಾಟಗಳೇ ತುಂಬಿವೆ. ಮೌಖಿಕ ನಾಯಕರು ತಮ್ಮನ್ನು ಆಳುವ ಪ್ರಭುತ್ವದೊಂದಿಗೆ ಕೊನೆಯವರೆಗೂ ಸಂಘರ್ಷಣೆ ನಡೆಸುತ್ತಲೇ ಬಂದಿದ್ದಾರೆ, ನಾಯಕರ ಪರವಾಗಿ ಅನೇಕ ಸಂಸ್ಕೃತಿ ಹುಟ್ಟಿಕೊಂಡರು ಅವುಗಳನ್ನು ಸಮಾಜಕ್ಕೆ ಅರ್ಥೈಸುವಲ್ಲಿ ಲಿಖಿತ ಪರಂಪರೆ ಸಹಾಯಕವಾಗಿದೆ.

ಗಾಯಕ ಪರಂಪರೆಯಿಂದ ಮೌಖಿಕ ಕಾವ್ಯ ಪರಂಪರೆ ಹುಟ್ಟಿಕೊಂಡಿತು. ಈ ನಾಯಕರು ತಮ್ಮ ಜೀವನದ ಅನುಭವಗಳು, ಕಾರ್ಯಗಳು, ಸಂಸ್ಕೃತಿಗಳನ್ನು ಹಾಡಿನ ಮೂಲಕ ಕಟ್ಟಿಕೊಟ್ಟಿದ್ದಾರೆ. ಗಾಯನ ಪರಂಪರೆಯಿಂದಲೇ ಅನೇಕ ಕಾವ್ಯಗಳು ಬೆಳಕಿಗೆ ಬಂದವು. ಈಗಲೂ ಈ ಕಾರ್ಯ ಮುಂದುವರೆದಿದೆ. ಇದಕ್ಕೆ ಸಾಕ್ಷಿಯಾಗಿ ಮೌಖಿಕ ಕಾವ್ಯಗಳನ್ನು ಹಾಡುವ ಪದ್ಧತಿಗಳನ್ನು ರೂಢಿಸಿಕೊಂಡು ಬಂದಿರುವುದೇ ಆಗಿದೆ. ಕಾವ್ಯಗಳಲ್ಲಿಯ ನಾಯಕರ ಅನನ್ಯತೆಯನ್ನು ಉಳಿಸುವ ಸಲುವಾಗಿ ಸಮುದಾಯದವರು ತಮ್ಮ ಮುಂದಿನ ತಲಮಾರುಗಳವರೆಗೆ ಕಾವ್ಯಗಳನ್ನು ರವಾನಿಸುತ್ತಾರೆ. ಮೌಖಿಕ ನಾಯಕರ ಕುರಿತ ಕಾವ್ಯಗಳನ್ನು ಪುರುಷರು ರಾತ್ರಿ ಹಗಲು ಪ್ರಾರಂಭಿಸಿದ್ದರಿಂದ ಗಾಯನ ಪರಂಪರೆಯಲ್ಲಿ ಸ್ತ್ರೀಯರಿಗೂ ಸ್ಥಾನಮಾನ ದೊರಕಿದೆ. ಈ ಮೌಖಿಕ ಕಾವ್ಯಗಳ ಪಠ್ಯಗಳು ಅಧ್ಯಯನಕ್ಕೆ ಒಳಪಟ್ಟಾಗ ಅನೇಕ ಸಮುದಾಯಗಳು ಗಾಯಕ ಗಾಯಕಿಯರು ತಮ್ಮ ತಮ್ಮ ಅಸ್ತಿತ್ವ ಕಂಡುಕೊಳ್ಳತೊಡಗಿದರು. ಪುರುಷರು ಹಾಡಿದ ಕಾವ್ಯಗಳು ಎನ್ನುವಲ್ಲಿ ಅವರವರ ಸಂವೇದನೆ ಕಂಡುಬರುತ್ತದೆ. ಕಾವ್ಯದ ನಾಯಕರನ್ನು ಕಥಿಸುವ ರೀತಿಯ ಸ್ತ್ರೀ -ಪುರುಷರಲ್ಲಿ ಭಿನ್ನವಾಗಿದ್ದನ್ನು ಕಾಣಬಹುದಾಗಿದೆ.

ಮೌಖಿಕ ಮಹಾಕಾವ್ಯಗಳು ಹೊಸ ಸಮಾಜದ ನಿರ್ಮಾಣಕ್ಕಾಗಿ ರಚನೆಗೊಂಡಿವೆ. ಮನುಷ್ಯ ಸಮಾಜ, ಸಮುದಾಯ ಇವು ಪರಸ್ಪರ ಒಂದಕ್ಕೊಂದು ಅವಿನಾಭಾವ ಸಂಬಂಧ ಹೊಂದಿವೆ. ಸಾಂಸ್ಕೃತಿಕ ನಾಯಕರು ಸಮಾಜದ ಮೇಲಿನ ಕಾಳಜಿಯಿಂದ ಆರ್ಥಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಬದಲಾವಣೆಗಳನ್ನು ತರಲು ಶ್ರಮ ವಹಿಸಿದ್ದಾರೆ. ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಮಾಳಿಂಗರಾಯ ಮೊದಲಾದ ಮೌಖಿಕ ಕಾವ್ಯಗಳ ನಾಯಕರು ಕುಟುಂಬಗಳ ಮತ್ತು ಸಮುದಾಯಗಳನ್ನು ವಿಶೇಷವಾಗಿ ಅರ್ಥೈಸಿದ್ದಾರೆ. ಈ ಕಾವ್ಯಗಳಲ್ಲಿ ಬರುವ ಕುಟುಂಬಗಳು ವಿಭಕ್ತ ಮತ್ತು ಅವಿಭಕ್ತ ಕುಟುಂಬಗಳ ಸಾರವನ್ನು ಸಮಾಜಕ್ಕೆ ಇಂದಿಗೂ ತಿಳಿಸುತ್ತವೆ. ಅನೇಕ

ಸಮುದಾಯಗಳು ಇಂದು ಒಟ್ಟಾಗಿ ಜೀವಿಸುವುದರ ಮೂಲಕ ಕುಟುಂಬದ ಮಹತ್ವವನ್ನು ತಮ್ಮ ಮಕ್ಕಳಿಗೆ ತಿಳಿಸಿಕೊಡುತ್ತಾರೆ.

ಮೌಖಿಕ ಕಾವ್ಯಗಳ ನಾಯಕರು ಸ್ತ್ರೀ ಪುರುಷರು ಪರಿಕಲ್ಪನೆಯನ್ನು ಶಿಷ್ಟ ಸಮಾಜಕ್ಕಿಂತ ವಿಭಿನ್ನವಾಗಿ ನೋಡಿದ್ದಾರೆ. ಕೆಲ ಸಮುದಾಯಗಳಲ್ಲಿ ಇಂದಿಗೂ ಸಹ ಮಹಿಳೆಯರಿಗೆ ವಿಧಿಸಿದ ಸಂಪ್ರದಾಯ ಕಟ್ಟಳೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ಮಹಿಳೆ ಸ್ವಾತಂತ್ರಕ್ಕೆ ಸಲ್ಲಳು ಎಂಬುದನ್ನು ಕೆಲ ನಾಯಕರು ಸುಳ್ಳಾಗಿಸಿದ್ದಾರೆ. ನಾಯಕರು ಕೆಲವು ಕಾವ್ಯಗಳಲ್ಲಿ ಸ್ತ್ರೀಯರ ಪರವಾಗಿ ಸಮಾಜದಲ್ಲಿ ಅವರ ಅಸ್ಥಿತ್ವವನ್ನು ಉಳಿಸಲು ಅತೀಥ ಶ್ರಮ ವಹಿಸಿದ್ದಾರೆ. ನಾಯಕರಿಗೆ ಒಕ್ಕಲುಗಳನ್ನು ನಿರ್ಮಿಸುವುದರ ಜೊತೆಗೆ ಮಹಿಳೆಯರಿಗೆ ವಿಧಿಸಿದ ಕಟ್ಟಳೆಗಳಿಂದ ಹೊರ ತರುವ ಮುಖ್ಯ ಉದ್ದೇಶವಾಗಿರುವುದನ್ನು ಕಾಣಬಹುದು.

ಆಚರಣೆ, ಸಂಪ್ರದಾಯಗಳನ್ನು ಹೆಚ್ಚು ಉಳಿಸಿ ಬೆಳೆಸಿಕೊಂಡು ಬಂದವರು ಕೆಳವರ್ಗದ ಸಮುದಾಯದವರು, ಇವರ ಸಾಂಸ್ಕೃತಿಕ ನಾಯಕರ ಕತೆಗಳನ್ನು ಹಾಡಿನ ಮೂಲಕ ಕಟ್ಟಿ ಹಾಡುತ್ತಾರೆ. ಈ ನಾಯಕರು ನೆಲೆಸಿದ ಸ್ಥಳಗಳನ್ನು ಸಿದ್ಧಕ್ಷೇತ್ರಗಳಾಗಿ ನಿರ್ಮಿಸಿ ಸಾಂಸ್ಕೃತಿಕ ನೆಲೆಯನ್ನಾಗಿ ಪರಿವರ್ತಿಸುತ್ತಾರೆ. ಆಚರಣೆಗಳು ಆಯಾ ಸಮುದಾಯಗಳ ಸಾಮಾಜಿಕ, ರಾಜಕೀಯ ಸಾಂಸ್ಕೃತಿಕತೆಯ ಮೌಲ್ಯಗಳನ್ನು ಉಳಿಸಿಕೊಳ್ಳಲಾಗಿದೆ. ಸಾಂಸ್ಕೃತಿಕ ನಾಯಕರು ಮಾಟ ಮಂತ್ರಗಳ ಮೂಲಕವಾಗಿ ಒಕ್ಕಲುಗಳನ್ನು ಪಡೆದುಕೊಂಡಿದ್ದರೂ ಸಹ ಅವರು ನಿರ್ಮಿಸಿದ ಸಾಂಸ್ಕೃತಿಕ ಅನನ್ಯತೆಯು ಇಂದಿಗೂ ಜೀವಂತವಾಗಿದೆ. ನಾಯಕರು ತಮ್ಮ ಪೂಜೆ, ಸಂಪ್ರದಾಯಗಳಿಗಾಗಿ ಯಾವ ಯಾವ ಸಮುದಾಯಗಳನ್ನು ಒಕ್ಕಲಾಗಿಸಿಕೊಂಡಿದ್ದಾರೋ ಇಂದಿಗೂ ಅದೇ ಸಮುದಾಯದವರು ತಮ್ಮ ಸಾಂಸ್ಕೃತಿಕ ವೀರನ ಆಚರಣೆ/ಉತ್ಸವಗಳನ್ನು ನಡೆಸುತ್ತಾರೆ. ನಂಬಿಕೆ, ಸಂಪ್ರದಾಯಗಳು ಬದಲಾಗುತ್ತಾ ಹೋದರೂ ಸಾಂಸ್ಕೃತಿಕವಾಗಿ ಆಚರಣೆಗಳ ಅಸ್ತಿತ್ವವು ಭಿನ್ನತೆಗಳೊಂದಿಗೆ ಇನ್ನು ಜಾರಿಯಲ್ಲಿವೆ.

ಕಾವ್ಯಗಳಲ್ಲಿ ಕಂಡು ಬರುವ ಲಿಂಗ ಸಂಬಂಧವು ಸಾರ್ವತ್ರಿಕ ನಂಬಿಕೆಯಾಗಿ ರೂಢಿಗೆ ಬಂದಿವೆ. ನಮ್ಮ ಸಮಾಜದಲ್ಲಿ ಇದಕ್ಕೆ ಗಟ್ಟಿಯಾದ ನೆಲೆ ನಿರ್ಮಾಣವಾದದ್ದು ಈ ಕಾವ್ಯಗಳಿಂದಲೇ ಎಂದು ಹೇಳಬಹುದು. ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಕೆಲವು ಕಡೆ ಜಾತಿಯ ವಿಚಾರವಾಗಿ ಸಾಂಸ್ಕೃತಿಕ ನಾಯಕರ ದೇವಸ್ಥಾನದಿಂದ ಹೊರಗುಳಿಯಬೇಕಾಯಿತು, ಮತ್ತೊಂದು ಸ್ತ್ರೀ ಎನ್ನುವ ಕಾರಣಕ್ಕೆ ಹೊರಗುಳಿಯಬೇಕಾಯಿತು. ಕೆಲ ನಾಯಕರ ಗದ್ದುಗೆಗಳಲ್ಲಿ ಪುರುಷರಿಗಿರುತ್ತಿದ್ದ ಸ್ವಾತಂತ್ರ, ಧಾರ್ಮಿಕ ಶ್ರದ್ಧೆ ಮಹಿಳೆಗಿರಲಿಲ್ಲ. ಅವನ್ನು ಸ್ವತಃ ನಾನೇ ಅನುಭವಿಸಿದ್ದೇನೆ. ನಾಯಕರು ಕಾವ್ಯಗಳಲ್ಲಿ ಮಹಿಳೆಯರ ಅಸ್ತಿತ್ವಕ್ಕಾಗಿ ಹಾಗೂ ತಮ್ಮದೇ ಅಸ್ತಿತ್ವಕ್ಕಾಗಿ ಸಂಘರ್ಷಗಳನ್ನು ನಡೆಸಿದರು, ಆಗ ಕಾವ್ಯಗಳಲ್ಲಿ ಸಂಪ್ರದಾಯ ನಂಬಿಕೆಗಳೇ ಜೀವನದ ಆಧಾರವಾಗಿದ್ದವು. ಆದರೆ ಆಧುನಿಕ ಪ್ರಪಂಚದಲ್ಲಿ ವೈಜ್ಞಾನಿಕತೆ ಇಷ್ಟೊಂದು ಮುಂದುವರೆದಿದ್ದರೂ ಸಹ ಮಹಿಳೆ, ಪುರುಷ ಹಾಕಿದ ಪರಧಿಯನ್ನು ದಾಟಿ ಆಕಾಶದೆತ್ತರಕ್ಕೆ ಹಾರಿದ್ದರೂ ಸಹ ಪುರುಷ ನಿರ್ಮಿಸಿದ ಕಟ್ಟಳೆಗಳನ್ನು ಮೀರಿ ಹೋಗಲು ಸಾಧ್ಯವಾಗಿಲ್ಲ, ಅಕಸ್ಮಾತ್ ಹೋಗಿದ್ದರೂ ಅಂತಹ ಸ್ತ್ರೀಯರು ನಿಂಧನೆಗಳಿಗೆ ಒಳಗಾಗಿದ್ದನ್ನು ಕಾಣಬಹುದು.

**ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳು.**

೧. ಪುರಾಣದ ಕಾಲದಿಂದ ಆಧುನಿಕ ಕಾಲದವರೆಗೂ ಸ್ತ್ರೀ-ಪುರುಷರ ಅಸಮಾನತೆಯನ್ನು ಭಿನ್ನಭಿನ್ನವಾಗಿಯೇ ಪರಿಭಾವಿಸುತ್ತಾರೆ. ಈ ಅಸಮಾನತೆ ಕಾವ್ಯಗಳ ಹಾಡುಗಾರಿಕೆಯಲ್ಲಿ ಇದ್ದಂತಹ ಪರಿಧಿಯನ್ನು ಸಂಪ್ರದಾಯದಡಿಯಲ್ಲಿ ಪುರುಷ ಸಮಾಜ ಬಂಧಿಸಲಾಗಿದೆ.

೨. ಸ್ತ್ರೀ-ಪುರುಷರು ಕುಟುಂಬ, ಸಮುದಾಯಗಳಲ್ಲಿ ಲಿಂಗ, ವರ್ಗ ಜಾತಿಗಳ ಹಿನ್ನೆಲೆಯಲ್ಲಿ ನಂಬಿಕೆ, ಆಚಾರಗಳ ಮೂಲಕ ಬಂಧಿಸಲಾಗಿದೆ ಹಾಗೂ ಸ್ತ್ರೀಯ ಬಂಧನಕ್ಕೆ ಹೊಸ ಸಮಾಜದ ನಿರ್ಮಾಣವೇ ಕಾರಣವಾಗಿದೆ.

೩. ಎಲ್ಲಾ ಸಮುದಾಯಗಳು ಕೃಷಿ ಮೂಲ, ಪಶುಸಂಗೋಪನೆಯ ಆರ್ಥಿಕತೆಯನ್ನು ಹೊಂದಿರುವ ಈ ಆರ್ಥಿಕ ಸಂರಚನೆಯನ್ನು ಉಳಿಸಿಕೊಳ್ಳಲು ಒಳಗೊಳಗೆ ನಡೆಸುವ ಹುನ್ನಾರಗಳು ಹಾಗೂ ನಾಯಕರ ಸ್ಥಿತ್ಯಂತರಗಳು ಕಾವ್ಯಗಳ ಸುತ್ತಾ ಪ್ರಸ್ತುತವಾಗಿ ರೂಪುಗೊಂಡಿವೆ.

೪. ನಾಯಕರ ಇಂದಿನ ಗದ್ದುಗೆಗಳು, ಸಂಸ್ಕೃತಿಯಲ್ಲಿ ಆದ ಬದಲಾವಣೆಗಳು, ಆದರ್ಶ ಮೌಲ್ಯಗಳೆಂದು ಹೆಣ್ಣಿನ ಮೇಲೆ ಏರಿದ ಪಾತಿವ್ರತ-ಅಪಮಾನ, ತಾಯ್ತನ, ಇವೆಲ್ಲವುಗಳು ಹೆಣ್ಣನ್ನು ಸಂಕೋಲೆಗಳಿಂದ ಸಿಲುಕುವಂತೆ ಮಾಡಿದೆ.

೫. ಮೌಖಿಕ ಕಾವ್ಯಗಳಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿದ್ದು ಪುರುಷನೇ ಮನೆಯ ಯಜಮಾನನಾಗಿರುವುದು ಕಂಡು ಬರುತ್ತದೆ.

೬. ದ್ವಿಪತ್ನಿತ್ವ, ಬಹುಪತ್ನಿತ್ವ ಪದ್ಧತಿಗಳು ಪುರುಷರಿಗೆಷ್ಟೆ ಸೀಮಿತವಾಗಿದ್ದು ಮಹಿಳೆಯರಿಗೆ ದ್ವಿಪತಿತ್ವ ಬಹಪತಿತ್ವ ಪದ್ದತಿಗಳನ್ನು ನಿಷೇದಿಸಿಸಲಾಗಿದೆ.

೭. ಪಾವಿವ್ರತ್ಯವನ್ನು ಸಂಪ್ರದಾಯ ಹಿನ್ನೆಲೆಯಿಂದ ಹೆಣ್ಣಿನ ಮೇಲೆ ಆನಾದಿಕಾಲದಿಂದಲು ಹೇರಿರುವುದು ಕಾವ್ಯಗಳಿಂದ ತಿಳಿದು ಬರುತ್ತದೆ.

೮. ಕಾವ್ಯಗಳಲ್ಲಿ ಸ್ತ್ರೀಯು ಆರ್ಥಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯವಿರದ ಪರಿಸ್ಥಿತಿಯಿಂದ ಮಹಿಳೆಯರು ಆಸ್ತಿಯ ಒಡೆತನ ಮತ್ತು ಅಧಿಕಾರದಿಂದ ದೂರ ಉಳಿಯಬೇಕು ಎಂಬ ನಿಯಮಗಳನ್ನು ವಿಧಿಸಿರುವುದು ಕಂಡುಬರುತ್ತದೆ.

**ಸಲಹೆಗಳು**

೧. ಮಹಾಕಾವ್ಯಗಳ ಕುರಿತ ಅಧ್ಯಯನವು ನಡೆಯುವುದಕ್ಕಿಂತ ಹೆಚ್ಚು ಅವುಗಳ ಬಳಕೆ ಆಗುವಂತೆ ಮಾಡಬೇಕು.

೨. ಕೆಲವು ಕಾವ್ಯಗಳ ಕುರಿತ ವಿಮರ್ಶಾತ್ಮಕ ಅಧ್ಯಯನ ನಡೆಯಬೇಕು.

೩. ಕಾವ್ಯಗಳಲ್ಲಿ ಇರುವಂತಹ ಕೆಲವು ಪದ್ದತಿ, ನಿಷೇಧಗಳನ್ನು ಸರ್ಕಾರದ ಗಮನಕ್ಕೆ ತಂದು ಅವುಗಳ ನಿರ್ಮೂಲನೆ ಮಾಡಬೇಕು.

೪. ಸ್ತ್ರೀಯರಿಗೂ ಕೆಲವು ನಾಯಕರ ಸಾಂಸ್ಕೃತಿಕ ಸ್ಥಳಗಳಿಗೆ ಮುಕ್ತ ಅವಕಾಶ ನೀಡಬೇಕು

ಒಟ್ಟಾರೆಯಾಗಿ ಮೌಖಿಕ ಕಾವ್ಯಗಳ ಸಮಾಜವು ನಿತ್ಯ ಪರಿವರ್ತನೆಯಾದಂತೆ ಕಾವ್ಯಗಳು ಸಹ ಪರಿವರ್ತನೆಯಾಗುತ್ತಿರುತ್ತವೆ. ಈ ಸಾಂಸ್ಕೃತಿಕ ಪರಂಪರೆಯಲ್ಲಿ ಮಹಿಳೆಯರ ಬದುಕು ಸಹ ವಿವಿಧ ಮಜಲುಗಳಲ್ಲಿ ತೆರೆದುಕೊಳ್ಳುತ್ತಾ ಹೋಗುತ್ತದೆ. ಆದರೆ ಸ್ತ್ರೀಯರ/ಮಹಿಳೆಯರ ಜೀವನಕ್ಕೆ ಪುರುಷ ಸಮಾಜ ನಿರ್ಮಿಸಿದ ಸಂಪ್ರದಾಯ ಕಲ್ಪನೆಗಳು ಅವರ ಬೆಳವಣಿಗೆಗೆ ಅಡ್ಡಿಯಾಗಿವೆ ಎನ್ನುವ ಸಾಲುಗಳನ್ನು ಮೌಖಿಕ ಕಾವ್ಯಗಳಲ್ಲಿ ಕಾಣಬಹುದಾಗಿದೆ. ಪುರುಷ ನಿರ್ಮಿತ ಸಮಾಜದಲ್ಲಿ ಆಚರಣೆಗಳು, ನಂಬಿಕೆಗಳು, ಸಂಸ್ಕೃತಿ, ಹೆಣ್ಣಿನ ಸಂಘರ್ಷ, ಬದುಕು, ಸಾಮರಸ್ಯ ಇವೆಲ್ಲವುಗಳ ವೈರುದ್ಯತೆಗಳು ಮೌಖಿಕ ಮಹಾಕಾವ್ಯಗಳಲ್ಲಿ ಅನಾವರಣಗೊಂಡಿದೆ.

# ಅನುಬಂಧಗಳು

ಗ್ರಂಥ ಸೂಚಿ
ಪದದ ಅರ್ಥ
ಮಾಹಿತಿದಾರರ ವಿವರ
ಭೂ ನಕ್ಷೆ
ಛಾಯಾ ಚಿತ್ರಗಳು

## ಗ್ರಂಥ ಸೂಚಿ
## ಮೂಲ ಆಕರಗಳು


೧. ಕೇಶವನ್ ಪ್ರಸಾದ್.ಕೆ , ಮಲೆಮಾದೇಶ್ವರ ಕಾವ್ಯ ,ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೧೯೯೭

೨. ಗಂಗಾಧರ ದೈವಜ್ಞ, ಮಾಳಿಂಗರಾಯನ ಕಾವ್ಯ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೧೯೯೯

೩. ಚಲುವರಾಜು. ಜುಂಜಪ್ಪನ ಕಾವ್ಯ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೧೯೯೭

೪. ಬೋರಲಿಂಗಯ್ಯ.ಹಿ.ಚಿ. ಮಂಟೇಸ್ವಾಮಿ ಕಾವ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೫. ಮಂಜುನಥ ಬೇವಿನಕಟ್ಟೆ, ಮೈಲಾರಲಿಂಗನ ಕಾವ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯


**ಆಕರ ಗ್ರಂಥಗಳು**


೧. ಅಮೃತ ಸೋಮೇಶ್ವರ, ತುಳು ಪಾಡ್ದನ ಸಂಪುಟ, (ಸಂ) ಕನ್ನಡ ವಿಶ್ವವಿದ್ಯಾಲಯ, ಹಂಪಿ- ೧೯೯೭.

೨. ಅಜಯ್‌ಕುಮಾರ್.ಕೆ ಮುಗೇರ ಜನಾಂಗ ಜಾನಪದೀಯ ಅಧ್ಯಯನ, ಕರ್ನಾಟಕ ತುಳು ಅಕಾಡಮಿ, ಮಂಗಳೂರು.೧೯೯೭

೩. ಅರವಿಂದ ಮಾಲಗತ್ತಿ, ಪುರಾಣ ಜಾನಪದ ಮತ್ತು ದೇಶಿವಾದ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು,೧೯೯೯

೪. ಅರವಿಂದ ಮಾಲಗತ್ತಿ, ಮಲೆಮಾದೇಶ್ವರ, ಪ್ರಸಾರಾಂಗ,ಮೈಸೂರು ವಿಶ್ವ ವಿದ್ಯಾಲಯ, ಮೈಸೂರು, ೨೦೦೦

೫. ಅಂಬಳಿಕೆ ಹಿರಿಯಣ್ಣ, ಜಾನಪದ ಕೆಲವು ವಿಚಾರಗಳು,ಚೇತನ ಬುಕ್ ಹೌಸ್,ಮೈಸೂರು, ೧೯೮೬

೬. ಅಂಬಳಿಕೆ ಹಿರಿಯಣ್ಣ, ಸೈದ್ಧಾಂತಿಕ ಜಾನಪದ, ಪ್ರಜ್ವಲ ಪ್ರಕಾಶನ, ಮೈಸೂರು, ೧೯೯೨

೭. ಅಂಬಳಿಕೆ ಹಿರಿಯಣ್ಣ, ಜನಪದ ಮಹಾಕಾವ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ, ೧೯೯೮

೮. ಉಮಾದೇವಿ.ಎಂ.ಎ, ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ೨೦೦೧
೯. ಉಷಾ ಎಂ. ಮಹಿಳಾ ಅಧ್ಯಯನ ಸಂಪುಟ-೫ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.
೧೦. ಕರಿಶೆಟ್ಟಿ ರುದ್ರಪ್ಪ, ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.೧೯೯೫
೧೧. ಕಾಳೇಗೌಡ ನಾಗವಾರ: ಜುಂಜಪ್ಪನ ಕಾವ್ಯ (ಲೇ) ಜನಪದ ಸಾಹಿತ್ಯ ದರ್ಶನ ಕ.ವಿ.ವಿ.೧೯೭೬
೧೨. ಕಾಳೇಗೌಡ ನಾಗವಾರ ಮತ್ತು ಹಿ.ಚಿ.ಬೋರಲಿಂಗಯ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ, ಬೆಂಗಳೂರು. ೨೦೦೦
೧೩. ಕಾಳೇಗೌಡ ನಾಗವಾರ ಮತ್ತು ಹುಚ್ಚಪ್ಪ ಮಾಸ್ತರ, ಗಿರಿಜನ ಸಂಸ್ಕೃತಿ(ಸಂ), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ, ಬೆಂಗಳೂರು. ೨೦೦೦
೧೪. ಕುರುವ ಬಸವರಾಜು, ಜನಪದ ಮಹಾಕಾವ್ಯಗಳ ನಿರ್ಮಾಣ ಪ್ರತಿಭೆಯ ನೆಲೆಗಳು, ಗೀತಾಂಜಲಿ ಪಬ್ಲಿಕೇಶನ್, ಬೆಂಗಳೂರು, ೨೦೧೧
೧೫. ಕೃಷ್ಣಮೂರ್ತಿ ಮತಿಘಟ್ಟ, ಏಳುಕೊಳ್ಳದ ಯಲ್ಲಮ್ಮ, ಗುರುಮೂರ್ತಿ ಪ್ರಕಾಶನ,ಬೆಂಗಳೂರು,೧೯೪೬
೧೬. ಕೃಷ್ಣಶಾಸ್ತ್ರಿ.ಎ.ಆರ್. ವಚನ ಭಾರತ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.೨೦೦೧
೧೭. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಮತ್ತು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ ಹಂಪಿ, ೧೯೯೯
೧೮. ಗಾಯತ್ರಿ ನಾವಡ, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ,೧೯೯೯
೧೯. ಗಾಯತ್ರಿ ನಾವಡ, ಭಾರತೀಯ ಸ್ತ್ರೀವಾದ: ಒಂದು ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ ಹಂಪಿ, ೨೦೦೦
೨೦. ಗಿರಡ್ಡಿ ಗೋವಿಂದರಾಜು, ಜನಪದ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ ಹಂಪಿ, ೧೯೯೪
೨೧. ಗುರುಮೂರ್ತಿ.ಕೆ. ಜನಪದ ಸಮಾಜ ಮತ್ತು ಸಂಸ್ಕೃತಿ, ಕನ್ನಡ ಅಧ್ಯಯನ ಪೀಠ, ಧಾರವಾಡ,೧೯೭೯
೨೨. ಗುರು ಪ್ರಸಾದ್.ಸಿ.ಟಿ. ನೀಲಗಾರರ ಸಂಕಥನ, ಬಂಗಾರಿ ಪಬ್ಲಿಕೇಶನ್ಸ್, ಗೊಟಗೋಡಿ, ೨೦೧೦
೨೩. ಚಲುವೇಗೌಡ, ತ.ಚಿ., ಕೆಲವು ಜನಪದ ಸಂಪ್ರದಾಯಗಳು: ತಳಗವಾದಿ, ಪ್ರಕಾಶನ, ಸರಸ್ವತಿಪುರಂ, ಮೈಸೂರು.೧೯೭೦

